# ವಚನೋಪನಿಷತ್ತು



ಪ್ರಕಾಶಕರು

ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠ, ಬೃಹನ್ಮಠ

ಚಿತ್ರದುರ್ಗ





...ನೆಯ ಪುಷ್ಪ



ಲೇಖಕರು

ವೇದ ವೇದಾಂತ ವಿದ್ಯಾ ವಾಚಸ್ಪತಿ

ಟಿ. ಯಮ್. ಮಲ್ಲಪ್ಪ, ಬಿ.ಎ., ಎಲ್‌ಎಲ್. ಬಿ.

ರಿಟೈರ್ಡ್ ಹೈಕೋರ್ಟ್ ಜಡ್ಜ್

ಲಲಿತ ಪ್ರಭಾ, ರೇಸ್‌ಕೋರ್ಸ್ ರೋಡ್, ಬೆಂಗಳೂರು–೧

# ವಚನೋಪನಿಷತ್ತು



ಪ್ರಕಾಶಕರು

ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠ, ಬೃಹನ್ಮಠ,
ಚಿತ್ರದುರ್ಗ



## ಏಳನೆಯ ಪುಷ್ಪ



ಲೇಖಕರು

ವೇದ ವೇದಾಂತ ವಿದ್ಯಾ ವಾಚಸ್ಪತಿ

ಟಿ. ರ್ಯ. ಮಲ್ಲಪ್ಪ, ಬಿ.ಎ., ಎಲ್‌ಎಲ್. ಬಿ.

ರಿಟೈರ್ಡ್ ಹೈಕೋರ್ಟ್ ಜಡ್ಜ್

ಲಲಿತ ಪ್ರಭಾ, ರೇಸ್‌ಕೋರ್ಸ್ ರೋಡ್; ಬೆಂಗಳೂರು–೧

ಬೆಲೆ: ನಾಲ್ಕು ರೂಪಾಯಿ

ಶ್ರೀ ಮುರುಘೇಶಾಯನಮಃ

ಶ್ರೀಮಚ್ಚಿನ್ಮೂಲಾದ್ರಿ ಬೃಹನ್ಮಠದ ಆರನೆಯ ಪೀಠಾಧಿಪತಿಗಳಾದ
ಶ್ರೀ ಜಗದ್ಗುರು ಮೂರು ಸಾವಿರದ ಗುರುಪಾದ ಮಹಾಸ್ವಾಮಿ
ಗಳವರ ಶಿವಸಮಾಧಿ, ಬೃಹನ್ಮಠ, ಚಿತ್ರದುರ್ಗ



ಕಂದ|| ವರಚಿನ್ಮೂಲಾದ್ರಿ ಜಗದ್-
ಗುರುವರ ಗುರುಸಿದ್ಧ ಮುರುಘರಾಜೇಂದ್ರ ಶ್ರೀ ||
ಚರಣಾರವಿಂದಕರ್ಪಿತ-
ಮುರುತರ ಸದ್ಭಕ್ತಿಯಿಂದಲೀ ಸದ್ಗ್ರಂಥಂ ||



ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಮುರುಘರಾಜೇಂದ್ರ ಮಲ್ಲಿಕಾರ್ಜುನ
ಮಹಾಸ್ವಾಮಿಗಳವರು

## ಗ್ರಂಥಕರ್ತರು



ವೇದ ವೇದಾಂತ ವಿದ್ಯಾ ವಾಚಸ್ಪತಿ
**ಟಿ. ರ್ಯ. ಮಲ್ಲಪ್ಪ, ಬಿ.ಎ., ಎಲ್‌ಎಲ್. ಬಿ.**
ರಿಟೈರ್ಡ್ ಹೈಕೋರ್ಟ್ ಜಡ್ಜ್

# ವಚನೋಪನಿಷತ್ತು

## ಪ್ರಕಾಶಕರಾದ ಶ್ರೀ ಜಗದ್ಗುರುಗಳವರ ಆಶೀರ್ವಚನ

ಶ್ರೀ ಮುರುಘೇಶಾಯನಮಃ

ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠ ಗ್ರಂಥಮಾಲೆಯ ಆರನೆಯ ಪುಷ್ಪವಾಗಿ ನಾಸದೀಯ ಸೂಕ್ತ ಗ್ರಂಥವೂ ಏಳನೆಯ ಪುಷ್ಪವಾಗಿ ವಚನೋಪನಿಷತ್ ಗ್ರಂಥವೂ, ಎಂಟನೆಯ ಪುಷ್ಪವಾಗಿ ಪುರುಷಸೂಕ್ತ ಗ್ರಂಥವೂ ಇದೀಗ ಪ್ರಕಟವಾಗಲಿವೆ. ಗ್ರಂಥಕರ್ತರಾದ ಶ್ರೀ. ಟಿ. ಯಸ್. ಮಲ್ಲಪ್ಪನವರು ವಚನೋಪಸನಿಷತ್ ಗ್ರಂಥದಲ್ಲಿ ವಚನಗಳಿಗೆ ಸಂವಾದಿಯಾಗಿ ನಾಸದೀಯ ಸೂಕ್ತವನ್ನೂ ಪ್ರಾಸಂಗಿಕವಾಗಿ ಈಶಕೇನೋಪನಿಷತ್ತುಗಳನ್ನೂ ಯಥೋಚಿತ ವ್ಯಾಖ್ಯಾನ ವಿವರಣೆಗಳೊಡನೆ ಸೇರಿಸಿದ್ದಾರೆ. ಗ್ರಂಥದ ಆದಿಯಲ್ಲಿ ವೇದವಾಙ್ಮಯದಿಂದ ವಚನ ವಾಙ್ಮಯದವರಿಗೆ ಆಧ್ಯಾತ್ಮಿಕ ಪ್ರಗತಿಯನ್ನು ಸಪ್ರಮಾಣವಾಗಿ ಸುಂದರವಾಗಿ ನಿರೂಪಿಸಿ, ಅಂತ್ಯದಲ್ಲಿ ಸಿಂಹಾವಲೋಕನವೆಂದು ಸಮಗ್ರ ವಿಷಯಗಳ ವಿವೇಚನೆಯನ್ನು ಬಹು ಮಾರ್ಮಿಕವಾಗಿ, ಹೃದಯಂಗಮವಾಗಿ ಮಾಡಿದ್ದಾರೆ. ಅವರ ವಿಶಿಷ್ಟ ದೃಷ್ಟಿಯ ವಿಚಾರ ವಿಮರ್ಶೆಗಳಲ್ಲಿ ಭಿನ್ನಾಭಿಪ್ರಾಯವುಳ್ಳವರೂ ಸಹಾ ಅವರ ಪಾಂಡಿತ್ಯ ಪ್ರತಿಭೆಗಳಿಗೆ ತಲೆದೂಗಬೇಕು ; ಅವರ ಸಾಹಸಸಂಶೋಧನೆಗಳನ್ನು ಗೌರವಿಸಬೇಕು-ಅಷ್ಟು ಗಂಭೀರವಾಗಿದೆ ಅವರ ಅಭ್ಯಾಸ ಅನುಭವಗಳು !

ನಿವೃತ್ತ ನ್ಯಾಯಮೂರ್ತಿಗಳಾಗಿ, ಈ ಅಪರ ವಯಸ್ಸಿನಲ್ಲಿ ಅವರು ಅತಿ ಕ್ಲಿಷ್ಟಗ್ರಂಥವಾದ ಪುರುಷಸೂಕ್ತವನ್ನೂ, ಗಹನ ವಿಚಾರಪೂರಿತ ನಾಸದೀಯ ಸೂಕ್ತವನ್ನೂ ಸಾಯಣಭಾಷ್ಯಾದಿ ಆಧಾರಗಳೊಂದಿಗೆ, ತತ್ತ್ವ ಜಿಜ್ಞಾಸು ಗಳಿಗೆ ತೃಪ್ತಿಕರವಾಗಿ ವಿವರಿಸುವ ರೀತಿಯನ್ನು ನೋಡಿದರೆ ಯಾರಿಗೂ ಆಶ್ಚರ್ಯವೂ ಆದರವೂ ಎನಿಸುವುದು ಸಹಜ ! ಈ ಅಮೂಲ್ಯ ಗ್ರಂಥಗಳನ್ನು ಶ್ರೀ ಬೃಹನ್ಮಠದ ಆರನೆಯ ಅಧಿಪತಿಗಳಾದ ಮೂರುಸಾವಿರದ ಶ್ರೀ ಗುರು ಪಾದ ಮಹಾಸ್ವಾಮಿಗಳವರ ಪಾದಾರವಿಂದಗಳಿಗೆ ಸಮರ್ಪಿಸಿ ಕೃತಾರ್ಥ ರಾದ ಗ್ರಂಥಕರ್ತರು ಆ ಮಹಾಗುರುವಿನ ಅನುಗ್ರಹದಿಂದ ನೂರುಕಾಲ ಬಾಳಿ ಇನ್ನೂ ಹೆಚ್ಚಿನ ಸಾರಸ್ವತ ಸೇವೆಯನ್ನು ಸಲ್ಲಿಸಲೆಂದು ಹಾರೈಸಲಾಗಿದೆ.

---

# ಮುನ್ನುಡಿ

## ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಪದ್ಮಶ್ರೀ ಡಾ|| ವಿ. ಕೃ. ಗೋಕಾಕ್‌ರವರಿಂದ

ವಿಶ್ರಾಂತ ನ್ಯಾಯಮೂರ್ತಿಗಳಾದ ಶ್ರೀಮಾನ್ ಟಿ. ಯರ್. ಮಲ್ಲಪ್ಪನವರು ಈಗ ಅವಿಶ್ರಾಂತವಾಗಿ ಆಧ್ಯಾತ್ಮಿಕ ಸಾಹಿತ್ಯವನ್ನು ಉಪಾಸಿಸುತ್ತಿದ್ದಾರೆ. ಮೊದಲಿನಿಂದ ಅವರಲ್ಲಿ ನೆಲೆಗೊಂಡಿದ್ದ ಜಿಜ್ಞಾಸೆ ಹಾಗೂ ವಿದ್ವತ್ತು, ವೇದ ಉಪನಿಷತ್ತು, ವಿವಿಧ ಭಾಷ್ಯ ಹಾಗೂ ವಚನ ಸಾಹಿತ್ಯದ ಆಳದಲ್ಲಿ ಮುಳುಗೆದ್ದು ಚಿಂತನೆಯ ಆಣಿ ಮುತ್ತುಗಳನ್ನು ಈಗ ಮೇಲಕ್ಕೆ ತಂದಿವೆ. ಇದರ ನಿದರ್ಶನವೇ ನಾಸದೀಯ ಸೂಕ್ತವನ್ನು ಕುರಿತು ಅವರು ಬರೆದ ಈ ಸುಂದರ ಕೃತಿಯಾಗಿದೆ.

ಸೃಷ್ಟಿಯ ಮೂಲಕ್ಕೆ ಕೈಹಾಕುವುದೆಂದರೆ ಹಾವಿನ ಹುತ್ತದಲ್ಲಿ ಕೈ ಇಟ್ಟಂತೆ; ಆದರೆ ಈ ಸಾಹಸವನ್ನೆಸಗಿದರೂ ಶ್ರೀ ಮಲ್ಲಪ್ಪನವರಿಗೆ ಸರ್ಪದಂಶವಾಗಿಲ್ಲ. ವೇದದಲ್ಲಿದ್ದ ಬೇರೆಬೇರೆ ಸಿದ್ಧಾಂತಗಳನ್ನು ವಿವರಿಸಿ, ಪ್ರಜಾಪತಿ ಪರಮೇಷ್ಠಿ ಎಂಬ ಋಷಿ ಕಂಡ ಸೂಕ್ತದ ಗರ್ಭಿತಾರ್ಥವನ್ನು ಇಲ್ಲಿ ಸುಂದರವಾಗಿ ತೋರಿಸಿದ್ದಾರೆ.

"ಯೋ ಅಸ್ಯಾಧ್ಯಕ್ಷಃ ಪರಮೇವ್ಯೋಮನ್ ಸೋ ಅಂಗವೇದ ಯದಿವಾನವೇದ" ಎಂಬ ೨೦ನೆಯ ಶತಮಾನದ ಚಿಕಿತ್ಸಕವಾಣಿ ಪರಮೇಷ್ಠಿಯಲ್ಲಿಯೇ ಮೊದಲು ಮೂಡಿತು. ಅದರ ಗರ್ಭಿತಾರ್ಥವನ್ನು ವಿವಿಧ ದೃಷ್ಟಿಕೋನಗಳಿಂದ ಕಾಣುವಂತೆ ಮಾಡಿ, ಅದನ್ನು ಗದ್ಯದಲ್ಲಿ ಪದ್ಯದಲ್ಲಿ ಆಂಗ್ಲಭಾಷೆಯಲ್ಲಿ ಎರಕಹೊಯ್ದು ವಚನ ಸಾಹಿತ್ಯದಲ್ಲಿ ಆ ಪ್ರಜ್ಞೆ ಅವತರಿಸಿರುವ ರೀತಿಯನ್ನು ಮನದಟ್ಟಾಗುವಂತೆ ತೋರಿಸಿ, ಶ್ರೀ ಮಲ್ಲಪ್ಪನವರು ಕನ್ನಡಿಗರಿಗೂ ವೇದಾಭ್ಯಾಸಕ್ಕೂ ಮಹದುಪಕಾರವನ್ನು ಮಾಡಿದ್ದಾರೆ. ಶಿವಾದ್ವೈತ-ಪ್ರಪ್ರಥಮ ಸ್ಥಿತಿ; ಅದು ಲೀಲೆಗಾಗಿ ಸೃಷ್ಟಿಯ ಉಗಮಕ್ಕಾಗಿ ಶಕ್ತಿವಿಶಿಷ್ಟಾದ್ವೈತವಾಯಿತು. ಶ್ರೀ ಅರವಿಂದರ ದರ್ಶನವೂ ಅದೇ ಆಗಿದೆ. ತ್ರ್ಯಂಬಕನ ಉಲ್ಲೇಖದಿಂದ ಈ ಸತ್ಯವನ್ನು ಶ್ರೀ ಮಲ್ಲಪ್ಪನವರು ಮತೀಯವಾದದಿಂದ ಮೇಲೆತ್ತಿದ್ದಾರೆ. ಅವರಿಂದ ಆಧ್ಯಾತ್ಮಿಕ ವ್ಯಾಸಂಗಕ್ಕೆ ಇನ್ನೂ ಹೆಚ್ಚಿನ ಸೇವೆಯಾಗುವಂತಾಗಲಿ.

ಬೆಂಗಳೂರು ೯-೧೦-೬೮. ವಿ. ಕೃ. ಗೋಕಾಕ್.

# ನಿವೇದನೆ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘ ರಾಜೇಂದ್ರ ಮಹಾಸ್ವಾಮಿಗಳು ಪ್ರಾರಂಭಿಸಿದ ವಿದ್ಯಾವರ್ಧನ ಮಹತ್ಕಾರ್ಯವು ಚಿತ್ರದುರ್ಗದ ಜಗದ್ಗುರು ಸಂಸ್ಥಾನದಿಂದ ನಿರಂತರವಾಗಿ ಮುಂದುವರಿಯುತ್ತಿರುವುದು ಸಮಾಜದ ಶ್ರೇಯೋಭಿವೃದ್ಧಿಗೆ ಕಾರಣವಾಗಿದೆ. ಶ್ರೀ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳವರು ಗ್ರಂಥಗಳ ಮೂಲಕವೂ ಜ್ಞಾನಪ್ರಸಾರ ಮಾಡುತ್ತಿರುವುದು ಸಮಾಜದ ಪುಣ್ಯವಿಶೇಷ. ಈಗಾಗಲೇ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠ ಗ್ರಂಥಮಾಲೆಯಲ್ಲಿ ಐದು ಉತ್ತಮ ಗ್ರಂಥಗಳು ಪ್ರಕಟವಾಗಿವೆ. ಈ ಗ್ರಂಥಮಾಲೆಯಲ್ಲಿ ಆರು, ಏಳು ಮತ್ತು ಎಂಟನೆಯ ಕುಸುಮಗಳನ್ನು ಬರೆಯುವ ಕಾರ್ಯಕ್ರಮವನ್ನು ಶ್ರೀ ಜಗದ್ಗುರುಗಳು ನನಗೆ ವಹಿಸಿದುದೂ, ಈ ಗ್ರಂಥಗಳನ್ನು ಬೃಹನ್ಮಠದ ಆರನೆಯ ಪೀಠಾಧಿಪತಿಗಳ ಪಾದಾರವಿಂದಗಳಿಗೆ ಅರ್ಪಿಸಲು ಅವಕಾಶ ಕೊಟ್ಟುದೂ ನನ್ನ ಪುಣ್ಯವಿಶೇಷವೆಂದು ಭಾವಿಸುತ್ತೇನೆ.

ಶ್ರೀ ಜಗದ್ಗುರುಗಳ ಮೆಚ್ಚುಗೆಯ ಮಾತುಗಳೂ, 'ಸಾವಿರಾರು ವರ್ಷಗಳಿಂದ ಸಮಸ್ಯೆಯಾಗಿಯೇ ಉಳಿದಿರುವ ನಾಸದೀಯ ಸೂಕ್ತದ ತೊಡಕುಗಳನ್ನು ಬಿಡಿಸಲು ಯತ್ನಿಸಿದುದೇ ಸಾಹಸ; ಸಾಹಸದೊಂದಿಗೆ ವಿಪುಲವಾದ ವೈದುಷ್ಯವೂ ಪ್ರೌಢವಾದ ವಿಚಾರಶಕ್ತಿಯೂ ಸೇರಿದುದೂ ಯಶಸ್ಸಿಗೆ ಕಾರಣವಾಗಿದೆ'—ಎಂಬ ವಿದ್ಯಾಲಂಕಾರ ಶ್ರೀಯುತ S. K. ರಾಮಚಂದ್ರರಾಯರ ಅಭಿಪ್ರಾಯವೂ, ಇಂತಹ ಹುತ್ತಕ್ಕೆ ಕೈಹಾಕಿದ್ದರೂ ಸರ್ಪದಂಶವಾಗಿಲ್ಲವೆಂಬ ಪದ್ಮಶ್ರೀ ಡಾ॥ ಗೋಕಾಕರ ಭರವಸೆಯೂ, ಉಳಿದ ಘನವಿದ್ವಾಂಸರ ಪ್ರೋತ್ಸಾಹಕ ನುಡಿಗಳೂ ಪ್ರೀತಿಯಿಂದ ಹೊರಹೊಮ್ಮಿದವುಗಳೇ ಆಗಿವೆ. ವಚನೋಪನಿಷತ್ತಿನಲ್ಲಿ ಋಗ್ವೇದದ ಆರಂಭ ಕಾಲದಿಂದ ವಚನ ವಾಙ್ಮಯದ ಪ್ರಚಾರವು ನೆಲೆಗೆನಿಂದ 15-16ನೆಯ ಶತಮಾನದವರೆಗೆ ಆಧ್ಯಾತ್ಮಿಕ ಪ್ರಗತಿಯನ್ನು ವಿವರಿಸಲಾಗಿದೆ. ಋಗ್ವೇದದ ಆದಿಯಿಂದ ಪ್ರಾರಂಭವಾಗುವ ಸೃಷ್ಟಿಕಲ್ಪನೆಯ ಪ್ರಗತಿಯು ನಾಸದೀಯ ಸೂಕ್ತದಲ್ಲಿ ಭವ್ಯತೆಯ ಮಟ್ಟವನ್ನು ಮುಟ್ಟಿ, ಶ್ರೀಯುತ ಗುರುದತ್ತರು ಗಮನಿಸಿರುವಂತೆ ಉಪನಿಷತ್ತುಗಳಲ್ಲಿ, ಹಾಗೂ ವಚನವಾಙ್ಮಯದಲ್ಲಿ, ಆ ಸೂಕ್ತದ ವಿಚಾರಧಾರೆಯು ಹರಿದಿರುವುದನ್ನು ಈ ಗ್ರಂಥದಲ್ಲ ನಿರೂಪಿಸಲಾಗಿದೆ. ವಚನ

ವಾಙ್ಮಯದಿಂದ ಪರಿಷ್ಕಾರವನ್ನು ಪಡೆವ ನಾಸದೀಯ ಸೂಕ್ತವು. ಡಾ॥ ಕೃಷ್ಣರಾಯರು ಗಮನಿಸಿರುವಂತೆ ವಚನ ವಾಙ್ಮಯದ ಭವ್ಯತೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ. ಈ ಕಾರಣಗಳಿಂದ ನಾಸದೀಯ ಸೂಕ್ತವನ್ನು ಮತ್ತು ಅದರ ಮುನ್ನುಡಿಯನ್ನು ವಚನೋಪನಿಷತ್ತಿನಲ್ಲಿ ಸೇರಿಸುವುದು ಅವಶ್ಯವಾಯಿತು. ಸೃಷ್ಟಿ ವಿಷಯಕವಾದ ಈ ಮೂರು ಗ್ರಂಥಗಳೂ ಒಂದೇ ಗ್ರಂಥವೇ ಎನ್ನುವಂತಿವೆ. ಸೃಷ್ಟಿ ಕಲ್ಪನೆಯ ಪ್ರಗತಿಯಲ್ಲಿ ಪುರುಷಸೂಕ್ತವು ಒಂದು ಮಟ್ಟವನ್ನು ಮುಟ್ಟಿರುವುದಾದರೂ ಗ್ರಂಥ ವಿಸ್ತಾರ ಭಯದಿಂದ ಅದನ್ನು ಬೇರೆಯಾಗಿ ಮುದ್ರಿಸುವುದು ಸೂಕ್ತವೆನಿಸಿತು.

ಪ್ರಾಚ್ಯ ಮಹಾ ವಿದ್ಯಾಲಯಾಧ್ಯಕ್ಷರಾದ ಪ್ರೊ॥ ರಾಮಚಂದ್ರರಾಯರ ಅಭಿಪ್ರಾಯದಂತೆ—"ವೈದಿಕ ವಾಙ್ಮಯದಲ್ಲಿಯೇ ಪುರುಷಸೂಕ್ತಕ್ಕೆ ವಿಶಿಷ್ಟ ಸ್ಥಾನವಿದೆ. ಈ ಹಿರಿಮೆಯ ರಹಸ್ಯವೇನೂ ಎನ್ನುವುದು ಎಲ್ಲರಿಗೂ ತಿಳಿದಿಲ್ಲ. ಈ ಗ್ರಂಥ ಪುರುಷಸೂಕ್ತದ ಸ್ವಾರಸ್ಯವನ್ನೂ ಗಾಂಭೀರ್ಯವನ್ನೂ ಚೆನ್ನಾಗಿ ಬೆಳಕಿಗೆ ತಂದಿದೆ. ಪುರುಷಸೂಕ್ತವನ್ನು ತಾವೇ ಕೂಲಂಕಷವಾಗಿ ಅಭ್ಯಾಸಮಾಡಿ ಅದರ ಇಂಗಿತವನ್ನು ಅರಿಯಬೇಕೆನ್ನುವವರಿಗೆ, ಈ ಗ್ರಂಥ ಉಪಯೋಗವಾಗುವಂತೆ ಬೇರೆ ಯಾವ ಗ್ರಂಥವನ್ನೂ ನಾನು ನೋಡಿಲ್ಲ. ನಮ್ಮ ದರ್ಶನ ವಾಙ್ಮಯದಲ್ಲಿ 'ಪುರುಷ' ಎನ್ನುವ ಮಾತೂ ಕಲ್ಪನೆಯೂ ಹೇಗೆ ವೈದಳೆದವು, ಹಂತಹಂತದಲ್ಲಿ ಈ ವಿಚಾರದ ಪ್ರಗತಿ ಹೇಗಾಯಿತು ಎನ್ನುವುದನ್ನು ಹೃದಯಂಗಮವಾಗಿ ವಿವರಿಸಿದ್ದಾರೆ. ನಮ್ಮ ದರ್ಶನ ಪ್ರಪಂಚದಲ್ಲಿ ಗೊಂದಲ ಹರಿದು ತಿಳಿವೂ ಬೆಳಕೂ ಮೂಡಬೇಕಾದರೆ ಇಂಥ ಪುಸ್ತಕಗಳೇ ದಾರಿ ದೀವಿಗೆಗಳು". ವಿದ್ವಾಂಸರುಗಳ ಇಂತಹ ಪ್ರೋತ್ಸಾಹ ನುಡಿಗಳು ಈ ತರದ ಇತರ ಗ್ರಂಥಗಳನ್ನು ಬರೆಯಲು ಉತ್ತೇಜನಕಾರಿಯಾದವುಗಳಾಗಿವೆ. ಈ ಎಲ್ಲ ವಿದ್ವಾಂಸರುಗಳಿಗೂ, ಅದರಲ್ಲಿಯೂ ಗ್ರಂಥಕ್ಕೆ ಭೂಷಣವಾಗಿರುವಂತಹ ಮೆಚ್ಚುಗೆಯ ಮುನ್ನುಡಿಯನ್ನು ಬರೆದಿರುವ ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಪದ್ಮಶ್ರೀ ಡಾ॥ ಗೋಕಾಕರವರಿಗೂ ನನ್ನ ಅತ್ಯಂತ ವಂದನೆಗಳು.

ಈ ಗ್ರಂಥಗಳನ್ನೆಲ್ಲ ಅಂದವಾಗಿ ಮುದ್ರಿಸಿದ ಓರಿಯಂಟ್ ಪ್ರೆಸ್‌ನವರ ಉಪಕಾರವನ್ನು ಸ್ಮರಿಸಲಾಗಿದೆ.

ಟಿ. ರ್ಯ. ಮಲ್ಲಪ್ಪ.

---

## OPINIONS ON "NASADEEYA SUKTA"

DR. M. V. KRISHNA RAO, M.A., B.T., Litt, F.R.A.S. (LOND)..Thank you very much for the gift of a copy of your valuable work 'Nasadiya Sukta'. I have read through it with great care and with absorbing interest. How much of information drawn from the Rig-Veda, the Upanishats and the Vachana sayings and others, not excluding the modern mystic Aurobindo, have been revealed within the 64 pages of this volume! References to Guheswara Mahalinga, Gurushiva Siddeswara and other vachanakaras are extremely revealing opening out vast vistas of infinitude for contemplation. I am particularly fascinated by your learned interpretation of "Tucchena Abhu apihitam" ....Many of the terms of this great Song of Creation would have remained recondite and unitelligible to us, without the comparative study you have made and without 'Padyanuvada' and 'Saralanuvada'. The Vachanas themselves and their metaphysique become meaningful and profound in the light of their counterpart in Nasadiya Sukta.... This is a very fine piece of work well executed and will rank among the source books of authentic interpretation. This deserves to be in the shelf of every home and library.

DR. D. V. GUNDAPPA, D.Litt., Hon. Secretary. Gokhale Institute of Public Affairs—Permit me to say

that I admire your labours to interpret celebrated passages of old scriptural literature. Your interest in these high and abstruse matters is, I know, a matter of many decades. The interest is expressing itself in intense thought and labour and that is for the benefit of the serious minded public.

SRI K. GURU DUTT, I.A.S., Retired Director of Public Instruction.—This little book is a unique rendering and commentary by Mr. T. N. Mallappa who is well-known for his very original Upanishadic. and other studies.... The highlights of the book are a fine Kannada verse rendering, and a novel form of exposition in three sections which are appropriately called "Darsanas". This has involved some inevitable repetition, but helps to make out the main thesis in what may be called a series of "concentric visions." These follow a masterly although brief introduction.. There is much original thinking................ The most note worthy feature of the book is the links the author brings out between this ancient Sukta and later thought, not merely Upanishadic, but that of the spring-head of intuitive wisdom which is struck in the Kannada Vachana literature. This is a most valuable exegesis and I take this opportunity to congratulate the learned author on having composed a little masterpiece.

ವಿದ್ಯಾಲಂಕಾರ ಪ್ರೊ|| ಎಸ್. ಕೆ. ರಾಮಚಂದ್ರರಾಯರು, ಅಧ್ಯಕ್ಷರು, ಪ್ರಾಚ್ಯ ಮಹಾ ವಿದ್ಯಾಲಯ, ಭಾರತೀಯ ಸಂಸ್ಕೃತಿ ವಿದ್ಯಾ ಪೀಠ, ಬೆಂಗಳೂರು. ನ್ಯಾಯಮೂರ್ತಿಗಳಾಗಿ ವಿಶ್ರಾಂತರಾಗಿರುವ ಶ್ರೀ ಟಿ. ಎನ್. ಮಲ್ಲಪ್ಪನವರು ಕನ್ನಡ

ನಾಡಿನ ಸುದೈವದಿಂದ ಸಾರಸ್ವತ ವ್ಯವಸಾಯದಿಂದ ವಿರಮಿಸಿಲ್ಲ. ತಮ್ಮ ಆಳವಾದ ಆಧ್ಯಾತ್ಮ ಅಭ್ಯಾಸ ಮತ್ತು ಅವಿರತವಾದ ಚಿಂತನ-ಮನನಗಳ ಫಲವಾಗಿ ಔಪನಿಷದ ಕಲ್ಪನೆಗಳ ಸ್ವಾರಸ್ಯವನ್ನೂ ತಾತ್ಪರ್ಯವನ್ನೂ ತಿಳಿಗನ್ನಡದಲ್ಲಿ ತಿಳಿಯಹೇಳುವ ಗ್ರಂಥಗಳನ್ನು ಬರೆದು ಪ್ರಸಿದ್ಧರಾಗಿರುವ ಶ್ರೀಯುತರು ಮಂತ್ರಗಳ ಅರ್ಥನಿಷ್ಪತ್ತಿಯಲ್ಲಿ ಸಾನುಗ್ರಹಾವಲೋಕನದ ಮಾರ್ಗವನ್ನು ಪ್ರಾರಂಭಿಸಿದ್ದಾರೆ. 'ಪ್ರತಿಬೋಧ'ದಂಥ ಕ್ಲಿಷ್ಟಸಂದರ್ಭಗಳನ್ನು ಸುಬೋಧವಾಗಿ ವಿವರಿಸುವ ಜಾಣ್ಮೆ ಅವರಿಗಿರುವುದು ಕನ್ನಡ ಜನರಿಗೆ ಈಗಾಗಲೇ ಪರಿಚಯವಾಗಿದೆ. ಅವರ ಈ ವೈದಿಕ ಸಾಹಿತ್ಯಸೇವೆಗೆ ಸ್ವರ್ಣ ಕಲಶವಿಟ್ಟಂತೆ ಈಗ 'ನಾಸದೀಯಸೂಕ್ತ'ದ ವಿವೇಚನೆ ಹೊರಬರುತ್ತಿದೆ.

ಈ ದೇಶದ ಆಧ್ಯಾತ್ಮ ವಿಚಾರವಾಹಿನಿಯ ಉಗಮಸ್ಥಾನದಲ್ಲೇ ಇರುವ ಈ ಸೂಕ್ತವು ಸೃಷ್ಟಿ ವಿಷಯಕವಾದ ಸೂಕ್ತವೆಂದು ಜಗತ್ಪ್ರಸಿದ್ಧವಾಗಿದೆ. ಋಗ್ವೇದದ ಹತ್ತನೆಯ ಮಂಡಲದಲ್ಲಿ ಪರಮೇಷ್ಠಿ ಪ್ರಜಾಪತಿಯಿಂದಲೇ ಕಾಣಲ್ಪಟ್ಟ ಈ ಮಂತ್ರಗುಚ್ಛವು ಅದ್ಭುತ ಕಾವ್ಯ ಎನ್ನುವುದನ್ನು ರಸಿಕರೆಲ್ಲರೂ ಬಲ್ಲರು. ಆದರೆ ಮಂತ್ರದ ವಿಚಾರಧಾರೆ 'ಗಹನಂ ಗಭೀರಂ' ಆಗಿಯೇ ಉಳಿದಿದೆಯೆಂದರೆ ಆಶ್ಚರ್ಯವಾದೀತು. ಸಾಯಣರೇ ಮೊದಲಾದ ಭಾಷ್ಯಕಾರರು ತಂತಮ್ಮ ಪೂರ್ವಗ್ರಹದ ಬಲದಿಂದ ಅರ್ಥವನ್ನು ಎಳೆದಾಡಿದ್ದಾರೆ, ನಿಜ. ಆದರೆ ಈ ಶ್ರಮ ಸಾರ್ಥಕವಾಗಿದೆಯೇ ಎನ್ನುವುದು ಸಂದಿಗ್ಧ. ವೈದಿಕಋಷಿಯ ದೃಷ್ಟಿಯನ್ನೇ ಪ್ರಮುಖವಾಗಿ ಇರಿಸಿಕೊಂಡು ಯಾರೂ ವ್ಯಾಖ್ಯಾನ ಮಾಡಿಲ್ಲ; ಆದರೆ 'ಧ್ವನಿ'ಯಂತೆ ಅವ್ಯಕ್ತವಾಗಿರುವ ಅರ್ಥವನ್ನು ಹಿಡಿಯಲು ಮಾಡಿರುವ ಪ್ರಯತ್ನಗಳಾದುದರಿಂದ ಇವುಗಳಲ್ಲಿ ಗುಣವಿಲ್ಲದೆ ಇಲ್ಲ.

ಶ್ರೀಯುತ ಮಲ್ಲಪ್ಪನವರು ಈ ಹಾವಿನ ಹುತ್ತಕ್ಕೆ ಕೈಯಿಟ್ಟಿದ್ದಾರೆ. ಸಾಯಣರ ಭಾಷ್ಯ ಉಪನಿಷದ್ವಾಕ್ಯಗಳ ಸಮರ್ಥನೆ, ಪ್ರತ್ಯಭಿಜ್ಞಾದಿ ನಾನಾ ದರ್ಶನಗಳ ಮಾರ್ಗದರ್ಶನ ಇವುಗಳ ನೆರ

ವನ್ನು ಪಡೆದು ಈ ಕೆಲಸಕ್ಕೆ ಉಜ್ಜುಗಿಸಿರುವುದಲ್ಲದೆ ಸ್ವತಂತ್ರ ವಿಚಾರ ಪ್ರವೃತ್ತಿಯನ್ನು ನಿರಾತಂಕವಾಗಿ ಹರಿಯಬಿಟ್ಟಿದ್ದಾರೆ; ಆದುದರಿಂದ ಸಾಹಸವೂ ಸಾರ್ಥಕವಾಗಿದೆ. ಈ ಸೂಕ್ತದಲ್ಲಿ ಸೇರಿರುವ ಏಳು ಮಂತ್ರಗಳನ್ನೂ ಕೂಲಂಕಷವಾಗಿ ವಿಚಾರಮಾಡಿ, ಪೂರ್ವ ಸೂರಿಗಳ ಅಭಿಪ್ರಾಯಗಳನ್ನು ಉದಹರಿಸಿ, ಮಂತ್ರಗಳ ತಾತ್ಪರ್ಯವನ್ನು ನಿಶ್ಚಯಿಸಲೆತ್ನಿಸಿದ್ದಾರೆ. ಸೃಷ್ಟಿಗೆ ಮೊದಲು ನಿಷ್ಕಲವಾಗಿರುವ ಪರಬ್ರಹ್ಮವು ಸೃಷ್ಟಿಯಲ್ಲಿ ತೊಡಗಿದಾಗ ಶಕ್ತಿವಿಶಿಷ್ಟವಾಗಿ, ಪರಶಿವಾಭಿನ್ನವಾದ ಮಾಯಾಶಕ್ತಿಯು ಹೊರಹೊಮ್ಮಿ ಅವ್ಯಕ್ತ ಪ್ರಕೃತಿಯಾಗಿ, ಇಚ್ಛಾ-ಜ್ಞಾನ-ಕ್ರಿಯಾಶಕ್ತಿಗಳಿಂದ ಅಧಿಷ್ಠಿತವೂ ವಿಶಿಷ್ಟವೂ ಆದ ಪರಶಿವಬ್ರಹ್ಮವು ಕಾರ್ಯಕಾರಿಯಾಗುವುದೇ ಸೃಷ್ಟಿ ಕ್ರಮ ಎನ್ನುವ ಶಕ್ತಿವಿಶಿಷ್ಟಾದ್ವೈತದ ನಿಲುವಿಗೆ 'ನಾಸದೀಯ ಸೂಕ್ತ'ವೇ ಮೂಲವೆಂದು ವಾದಿಸಿದ್ದಾರೆ; ಶ್ರುತಿವಾಕ್ಯಗಳು, ವಚನ ವಾಙ್ಮಯ, ಶಾಸ್ತ್ರಗ್ರಂಥಗಳಿಂದ ಆಧಾರಗಳನ್ನು ತೋರಿಸಿದ್ದಾರೆ.

ಈ ವಿವೇಚನೆಯಲ್ಲಿ ಶ್ರೀಯುತರು ಅನುಸರಿಸಿರುವ ಸಂವಿಧಾನ ಸ್ವಾರಸ್ಯವಾದುದು. ವಿವೇಚನೆ ಮೂರು ದರ್ಶನಗಳಲ್ಲಿ ಅಡಕವಾಗಿದೆ. ಜಿಜ್ಞಾಸುಗಳಿಗೆ ಪರಿಚಯ ಮಾಡಿಸುವಾಗ ಹೊರಗಿನಿಂದ ಒಳಗೆ ಒಯ್ದು, ಹಂತಹಂತವಾಗಿ ಸ್ಥೂಲದಿಂದ ಸೂಕ್ಷ್ಮಕ್ಕೆ ದಾಟಿಸುವುದು ಈ ಸಂವಿಧಾನದ ವೈಶಿಷ್ಟ್ಯ. ವಿವೇಚನೆಯಲ್ಲಿ "ಉತ್ತರೋತ್ತರ ಮಾವಿಸ್ತರತ್ವಂ" ಕಾಣಬರುತ್ತದೆ. ದರ್ಶನತ್ರಯದ ನಂತರ ಬಂದಿರುವ ಅನುಬಂಧವು ತಾತ್ಪರ್ಯವನ್ನು ಇನ್ನಷ್ಟು ಖಚಿತವಾಗಿಸುತ್ತದೆ.

ಅಂತೂ, ಕ್ಲಿಷ್ಟವಾದ ಪ್ರಕರಣವೊಂದನ್ನು ಆಯ್ದುಕೊಂಡು ಶ್ರೀಯುತರು ಸಾಹಸದಿಂದ ಸೆಣಸಿ ಯಶಸ್ವಿಗಳಾಗಿದ್ದಾರೆ. ಸಾವಿರಾರು ವರ್ಷಗಳಿಂದ ಸಮಸ್ಯೆಯಾಗಿಯೇ ಉಳಿದಿರುವ 'ನಾಸದೀಯ ಸೂಕ್ತ'ದ ತೊಡಕನ್ನು ಬಿಡಿಸಲು ಯತ್ನಿಸಿದುದೇ ಸಾಹಸ. ಸಾಹಸದೊಂದಿಗೆ ವಿಪುಲವಾದ ವೈದುಷ್ಯವೂ ಪ್ರೌಢವಾದ ವಿಚಾರ ಶಕ್ತಿಯೂ ಸೇರಿದುದು ಯಶಸ್ಸಿಗೆ ಕಾರಣವಾಗಿದೆ. ನುರಿತ, ಹಿರಿಯ ವಿದ್ವಾಂಸರಿಂದ ಕನ್ನಡನುಡಿಗೆ ನಡೆದಿರುವ ಈ ಸೇವೆ ಅಮೂಲ್ಯವಾದುದು.

ಶ್ರೀಮನ್ನಿರಂಜನ ಜಗದ್ಗುರು ಶ್ರೀ ಶಿವಲಿಂಗೇಶ್ವರ ಮಹಾ ಸ್ವಾಮಿಗಳವರು, ಸಿದ್ಧಸಂಸ್ಥಾನ, ನಿಡುಸೋಸಿ ಇವರ ಸನ್ನಿಧಿಯಿಂದ— ವಿದ್ವನ್ಮಣಿಗಳೇ, ತಾವು ಅತ್ಯಂತ ಶ್ರಮವಹಿಸಿ ಬರೆದ ನಾಸದೀಯಸೂಕ್ತದಿಂದೊಡಗೂಡಿದ ವಚನೋಪನಿಷತ್ ಗ್ರಂಥವನ್ನೂ ಮತ್ತು ಸಾಯಣ ಭಾಷ್ಯೋಪೇತ ಪುರುಷಸೂಕ್ತ ಗ್ರಂಥವನ್ನೂ ಆಮೂಲಾಗ್ರವಾಗಿ ಓದಿ ಮನನಮಾಡಿಕೊಂಡೆವು. ಭಾರತೀಯ ಸಂಸ್ಕೃತಿಯ ಪ್ರಾಚೀನ ಸಾಹಿತ್ಯವೆಂದು ಪರಿಗಣಿಸಲ್ಪಟ್ಟ ವೇದೋಪನಿಷತ್ ಮುಂತಾದ ಉದ್ಗ್ರಂಥಗಳಲ್ಲಿ ನಿಗೂಢವಾಗಿರುವ ಸತ್ಯಸಂಗತಿಗಳನ್ನು ಕನ್ನಡ ಜಿಜ್ಞಾಸುಗಳಿಗೆಲ್ಲ ಸರಿಯಾಗಿ ಪರಿಚಯಮಾಡಿಕೊಡುವ ಮಹತ್ಕಾರ್ಯವನ್ನು ತಮ್ಮೀ ಅಪರ ವಯಸ್ಸಿನಲ್ಲಿ ನಿರ್ವಹಿಸುತ್ತಿರುವುದು ನಮಗೆಲ್ಲ ತುಂಬ ಹೆಮ್ಮೆಯ ಸಂಗತಿಯಾಗಿದೆ.

ವೈದಿಕ ಸಾಹಿತ್ಯದಲ್ಲಿಯೇ ಅತ್ಯಂತ ಶ್ರೇಷ್ಠವೆಂದೆನಿಸಿದ ಪುರುಷಸೂಕ್ತ ಮತ್ತು ನಾಸದೀಯಸೂಕ್ತ ಇವುಗಳ ಕಾಠಿಣ್ಯವನ್ನು ಸಾಯಣ ಭಾಷ್ಯಾದಿ ಗ್ರಂಥಾಧಾರದಿಂದಲೂ ಮತ್ತು ತಮ್ಮ ಸರಳವಾದ ಹಾಗು ವಿಮರ್ಶಾತ್ಮಕ ವಿವರಣೆಯಿಂದಲೂ ಸಡಿಲಿಸಿ, ತತ್ತ್ವ ಬುಭುಕ್ಷುಗಳಾದ ಕನ್ನಡಿಗರ ಬಾಯಲ್ಲಿ ಅನಾಯಾಸವಾಗಿ ಸುಲಿದಬಾಳೆಯ ಹಣ್ಣಿನಂದದಿ ಕೊಡುವ ಸತ್ಕೀರ್ತಿಗೆ ಪಾತ್ರರಾಗಿರುವಿರಿ. ವೇದದಿಂದ ವಚನದವರೆಗೆ ಸಿಂಹಾವಲೋಕನವೆಂದು ಬರೆದ ವಿಷಯವಂತೂ ವಿದ್ವನ್ಮಾನ್ಯವೆನಿಸುತ್ತದಲ್ಲದೆ, ತಮ್ಮ ಆಳವಾದ ಅಭ್ಯಾಸಗಳನ್ನು ಎತ್ತಿ ತೋರಿಸುವಂತಹುದಾಗಿದೆ.

ನಿಡುಮಾಮಿಡಿ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಚೆನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರ ಸನ್ನಿಧಿಯಿಂದ–ವಚನೋಪನಿಷತ್ತು–ವಚನೋಪನಿಷದ್ ವ್ಯಾಸಂಗದಿಂದ ರೂಪಿತವಾದ ಈ ಉದ್ಗ್ರಂಥವು, ಗ್ರಂಥಕರ್ತರ ವಿದ್ವತ್ತನ್ನೂ ವಿಮರ್ಶಾತ್ಮಕ ಸಂಪತ್ತನ್ನೂ ಉಗ್ಗಡಿಸುವ ಉತ್ತಮ ಕೃತಿ; ಆಧ್ಯಾತ್ಮಿಕ ಪ್ರಗತಿಯನ್ನು ಆದ್ಯಂತವಾಗಿ ಆಲೋಚಿಸಿದ ಸತ್‌ಕೃತಿ; ಸೃಷ್ಟಿರಚನೆಯ ವಿಚಾರ ಎಲ್ಲಿಯೇ ಇರಲಿ, ಅದೆಲ್ಲವನ್ನೂ ಕ್ರೋಢೀಕರಿಸಿ ಕೂಲಂಕಷವಾಗಿ ವಿಮರ್ಶಿಸಿದ ಪ್ರಥಮ ಪುಸ್ತಿಕೆ. ವಚನೋಪನಿಷತ್ತುಗಳಲ್ಲಿ ಬರುವ ಪಾರಿಭಾಷಿಕ ಪದಗಳಮೇಲೆ ಹೊಸ ಬೆಳಕು ಬರುವಂತೆ ತುಲನಾತ್ಮಕವಾಗಿ ತೂಗಿ ನೋಡಿದ ತಕ್ಕಡಿ. ಅರ್ಥಗರ್ಭಿತವಾದ ನಾಸದೀಯ ಸೂಕ್ತಗಳನ್ನು ತಿಳಿಗನ್ನಡದಲ್ಲಿ ತಿರುಳು ತುಂಬಿ ಬರುವಂತೆ

ಅನುವಾದಿಸಿದ ಅಗ್ಗಳಿಕೆ ಶ್ರೀ ಟಿ. ರ್ಯ. ಮಲ್ಲಪ್ಪನವರದು. ಇದರಿಂದ ಇವರ ಕನ್ನಡ ನುಡಿಯ ಶ್ರೀಮಂತಿಕೆ ವ್ಯಕ್ತವಾಗುತ್ತದೆ. ವೇದೋಪನಿಷತ್ತುಗಳ ಮೇಲೆ, ಭಾಷ್ಯಗಳ ಮೇಲೆ, ವಚನಗಳಮೇಲೆ, ಇವರಿಗಿರುವ ಪಾಂಡಿತ್ಯ ಸ್ವಾಧ್ಯಾಯಶೀಲತೆ–ಸ್ವಾನುಭವಗಳನ್ನು ಈ ಕೃತಿ ಎತ್ತಿ ತೋರುತ್ತದೆ. ಕಠಿಣವೂ ಜಟಿಲವೂ ಆದ ಮಂತ್ರಗಳನ್ನೂ, ಸೂಕ್ತಗಳನ್ನೂ ಇವರು ಲೀಲಾಜಾಲವಾಗಿ ಕನ್ನಡಿಸುವ ಕಾವ್ಯ ಕಲೆಯನ್ನು ಕೈವಶಮಾಡಿಕೊಂಡಿದ್ದಾರೆ. ಇವರ ಉಪನಿಷತ್ತುಗಳ ವ್ಯಾಸಂಗ ಗಮನಾರ್ಹವಾದುದು; ವಿಮರ್ಶೆ ನಿಬ್ಬೆರಗಾಗಿಸುವಂತಹುದು. ಪುರಾತನ ಕೃತಿಗಳ ಪರಿಶೀಲನ–ಪರಿಶೋಧನಗಳಿಂದ ಈ ಕೃತಿಗೆ ಹೊಸ ಕಳೆಯೇರಿದೆ. ಹಲವಾರು ವಿಚಾರಗಳಮೇಲೆ, ಸಾಂಪ್ರದಾಯಿಕ ವಿಚಾರಗಳ ಮೇಲೆ ಹೊಸ ಬೆಳಕು ಬೀಳುವಂತಿದೆ. ವಿಚಾರಶೀಲರು–ವಿಮರ್ಶಕರುಗಳಿಗೆ ವಾಚನೀಯಗ್ರಂಥ.

**ಸರ್ವದರ್ಶನ ತೀರ್ಥ ವಿದ್ವಾನ್ ವೈ. ನಾಗೇಶ ಶಾಸ್ತ್ರಿಗಳು, ಬಳ್ಳಾರಿ–** ಆಧ್ಯಾತ್ಮಿಕ ವಿಚಾರ ವಿಮರ್ಶೆಯ ಮಹತ್ಕಾರ್ಯದಲ್ಲಿ ಪ್ರವೃತ್ತರಾಗಿ ವಿದ್ವಜ್ಜನಸ್ತುತ್ಯರಾದ, ಶ್ರೀ ಟಿ.ರ್ಯ. ಮಲ್ಲಪ್ಪನವರು ತಮ್ಮ ಅಪರ ವಯಸ್ಸಿನಲ್ಲಿ ಇತ್ತೀಚೆಗೆ ರಚಿಸಿರುವ ನಾಸದೀಯಸೂಕ್ತ, ಪುರುಷಸೂಕ್ತ, ವಚನೋಪನಿಷತ್ತು ಈ ಮೂರು ಅಮೂಲ್ಯಗ್ರಂಥಗಳನ್ನು ನಾನು ಆಸಕ್ತಿಯಿಂದ ಪುನಃ ಪುನಃ ಓದಿ ಸಂತುಷ್ಟನಾದೆನು. ಎಪ್ಪತ್ತಾರು ವರ್ಷದ ಈ ಅಪರವಯಸ್ಸಿನಲ್ಲಿ ಶ್ರೀ ಮಲ್ಲಪ್ಪನವರಲ್ಲಿ ಬುದ್ಧಿಯೂ ಪ್ರತಿಭೆಯೂ ಅಸದೃಶವಾಗಿ ಅನುಭವಪೂರ್ಣವಾದ ವಿಶಾಲತೆಯನ್ನು ಪಡೆದಿರುವುವು. ಇವರಿಗೆ ಶಿವಾನುಭವವು (ಶಕ್ತಿಪಾತವು) ಆಗಿರುವುದೆಂದು ನನ್ನ ವಿಶ್ವಾಸ.

ವೇದವಾಙ್ಮಯದಿಂದ ವಚನವಾಙ್ಮಯದವರೆಗೆ ಆದ ಆಧ್ಯಾತ್ಮಿಕ ಪ್ರಗತಿಯನ್ನು ಗ್ರಂಥಕರ್ತರು ಅನುಭವಪೂರ್ಣ ವಿಮರ್ಶನದಿಂದ ತರ್ಕಬದ್ಧವಾಗಿ ವೇದ ವಾಙ್ಮಯದ ಮತ್ತು ವಚನ ವಾಙ್ಮಯದ ಆಧಾರಗಳೊಡನೆ ಮನ ಮುಟ್ಟುವಂತೆ ಸರಳವಾಗಿ ನಿರೂಪಿಸಿರುವರು. ವೇದೋಪನಿಷದಾದಿಗಳಲ್ಲಿ ಪ್ರತಿಪಾದಿತವಾದ ಪುರುಷಶಬ್ದದ ವಿಮರ್ಶೆಯು ಆಳವಾದ ಅನುಭವದಿಂದ ಕೂಡಿದುದಾಗಿ ವಿದ್ವಾಂಸರು ತಲೆದೂಗುವಂತಿರುವುದು. ' ತ್ರ್ಯಂಬಕಂ ಯಜಾಮಹೇ' ಎಂಬ ವೇದಮಂತ್ರದ ವಿದ್ವತ್‌ಪೂರ್ಣ ವಿಚಾರವು ಶೈವ–ವೈಷ್ಣವ

ವಿವಾದಕ್ಕೆ ಎಡೆಯಿಲ್ಲವಂತೆ ಮಾಡಿದೆ. ಬೋಧ ಪ್ರತಿಬೋಧವೆಂಬ ಪದಗಳ ಅರ್ಥನಿರೂಪಣೆಯು ಸರ್ವರಿಗೂ ಸುಲಭ ಗ್ರಾಹ್ಯವಾಗಿದ್ದು, ಪಂಡಿತಮಾನ್ಯ ವಾಗಿದೆ. ಇನ್ನು ವೀರಶೈವ ಸಿದ್ಧಾಂತವಾದ ಶಿವಾದ್ವೈತ ಶಕ್ತಿವಿಶಿಷ್ಟಾ ದ್ವೈತ ಪದಗಳಲ್ಲಿ ಶಿವಾದ್ವೈತ ಪದವು ಸೃಷ್ಟಿಯ ಪೂರ್ವಾವಸ್ಥೆಯನ್ನೂ, ಶಕ್ತಿ ವಿಶಿಷ್ಟಾದ್ವೈತ ಪದವು ಸೃಷ್ಟಿಯು ಉಗಮವಾಗುವ ಅವಸ್ಥೆಯನ್ನೂ ಸೂಚಿಸುವುವೆಂಬ ಭಾವವು ವ್ಯಕ್ತವಾಗಿರುವುದು ಗಮನಾರ್ಹವಾಗಿದೆ. ಬಸವೇಶ್ವರಪೂರ್ವ ವೀರಶೈವವನ್ನೂ ಅವರ ಅನಂತರದಲ್ಲಾದ ಸುಧಾರಣೆ ಗಳಿಂದ ಕೂಡಿದ ವೀರಶೈವವನ್ನೂ ಸಪ್ರಮಾಣವಾಗಿ ನಿರೂಪಿಸಲಾಗಿದೆ. ಹರಿಹರ ಬುಕ್ಕರಾಯರಿಂದ ಪ್ರಾರಂಭಿಸಿ ಪ್ರೌಢ ದೇವರಾಯನ ಕಾಲದವರೆಗೂ ನಡೆದುಬಂದ ಧಾರ್ಮಿಕ ಪ್ರಗತಿಯನ್ನು ಸಕ್ರಮವಾಗಿ ಪ್ರತಿಪಾದಿಸಿರುವು ದರಿಂದ ವಿಜಯನಗರದ ಚರಿತ್ರೆಯಲ್ಲಿ ಒಂದು ಹೊಸ ಬೆಳಕು ಬಿದ್ದಂತಾಗಿದೆ. ಈ ರೀತಿ ಅನೇಕ ವಿಚಾರಗಳು ನೂತನವಾದವುಗಳಂತೆ ಕಂಡರೂ ಅವುಗಳಿಗೆ ಚರಿತ್ರದ ಹಿನ್ನೆಲೆಯೂ ಗ್ರಂಥಗಳ ಆಧಾರವೂ ನಿರೂಪಿಸಲ್ಪಟ್ಟಿರುವುದು ಸಮರ್ಪಕವಾಗಿದೆ.

ರಾಜಸೇವಾಸಕ್ತ ಪದ್ಮಶ್ರೀ ಸಿ. ಕೆ. ವೆಂಕಟರಾಮಯ್ಯನವರು— ಶ್ರೇಷ್ಠ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿದ್ದು, ವಿಶ್ರಾಂತರಾಗಿರುವ ಶ್ರೀ ಟಿ. ಯಸ್. ಮಲ್ಲಪ್ಪನವರಿಂದ ರಚಿತವಾಗಿರುವ "ಸಾಯಣ ಭಾಷ್ಯಾಧಾ ರೋಪೇತ ವಿವರಣಾತ್ಮಕ ನಾಸದೀಯ ಸೂಕ್ತ"ವನ್ನೂ "ಸಾಯಣ ಭಾಷ್ಯಾಧಾ ರೋಪೇತ ಪುರುಷಸೂಕ್ತ"ವನ್ನೂ ಓದಿ ಅತ್ಯಾನಂದವಾಯಿತು. ಶ್ರೀ ಮಲ್ಲಪ್ಪ ನವರ ಅಗಾಧವಾದ ಪಾಂಡಿತ್ಯ, ಅಭಿನಂದನಾರ್ಹವಾದ ವಿಚಾರಸಂಪತ್ತು, ವಿಪುಲವಾದ ಹೃದಯ ವೈಶಾಲ್ಯ, ಶ್ಲಾಘ್ಯಾರ್ಹವಾದ ತುಲನಾತ್ಮಕ ಸಮಾ ಲೋಚನೆ, ಜಟಿಲ ಸಂಗತಿಗಳನ್ನು ಸುಲಭಗ್ರಾಹ್ಯವಾಗುವಂತೆ ಸರಳ ಶೈಲಿ ಯಲ್ಲಿ ತಿಳಿಸುವ ವಿವರಣಾ ಸಾಮರ್ಥ್ಯ ಮುಂತಾದ ಗುಣಗಳು ಈ ಉದ್ಗ್ರಂಥ ಗಳಿಂದ ಮನವಟ್ಟಿ ಗೋಚರವಾಗುತ್ತವೆ. ಇವೆರಡು ಸೂಕ್ತಗಳನ್ನೂ ಕನ್ನಡ ಭಾಷೆಯಲ್ಲಿ ಕನ್ನಡಿಗರಿಗೆ ವಿವರಣಾತ್ಮಕವಾಗಿ ದೊರೆಯಿಸುವ ಅಮೋಘವಾದ ಉದ್ದೇಶದಿಂದ ನಾನಾ ಸಂಗತಿಗಳನ್ನು ತುಲನಾತ್ಮಕವಾಗಿ ವಿಚಾರಮಾಡಿ ಈ ಉದ್ಗ್ರಂಥಗಳನ್ನು ರಚಿಸಿದ್ದಾರೆ.

ಅಧ್ಯಾತ್ಮ ಪ್ರಕಾಶ ಜ್ಯೋತಿ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು, ಹೊಳೆನರಸೀಪುರ—ಇವರ ಸನ್ನಿಧಾನದಿಂದ ನಾಸದೀಯ ಸೂಕ್ತ-ಈ ಸ್ತುತ್ಯ ಪ್ರಯತ್ನಕ್ಕೆ ಹಲವರು ತಜ್ಞ ವಿಚಾರಕರ ಅಭಿಪ್ರಾಯಗಳು ಪೋಷಕವಾಗಿವೆ. ವಿದ್ವತ್ತಾಪೂರ್ಣವಾದ ಈ ಅನುವಾದವೂ ವಿವರಣೆಯೂ ಮನನೀಯವಾಗಿವೆ. ಪುರುಷಸೂಕ್ತ-ಇಲ್ಲಿ ಹೇಳಿರುವ ಪುರುಷನು ತ್ರಿಮೂರ್ತಿಗಳಿಗಿಂತ ವ್ಯತಿರಿಕ್ತವಾದ ಪರಬ್ರಹ್ಮವೇ ಎಂದು ಸಯುಕ್ತಿಕವಾಗಿ ಪ್ರತಿಪಾದಿಸಿರುವುದು ಸ್ತುತ್ಯವಾಗಿದೆ. ಅನೇಕ ವಿದ್ವಾಂಸರ ಶ್ಲಾಘನೆಗೆ ಪಾತ್ರವಾಗಿರುವ ಈ ವಿಚಾರ ಪರಿಪ್ಲುತ ಗ್ರಂಥವು ಶ್ರೀಯುತರ ವೈದಿಕ ವಾಙ್ಮಯದ ವಿಚಾರದ ಪರಿಶ್ರಮಕ್ಕೆ ಕೀರ್ತಿಸ್ತಂಭವೆನಿಸಿದೆ.

---

## ಗ್ರಂಥಕರ್ತರ ಇತರ ಗ್ರಂಥಗಳು

### ಈಶಾವಸ್ಯೋಪನಿಷತ್ ಪ್ರಕಾಶ (ಬೆಲೆ: ರೂ. ೨-೭೫)

PROF. M. YAMUNACHARYA-I have been an admirer of your mellow and ripe learning and I am never tired of reading over and over again your Isavasya Upanishat.

### ಕೇನೋಪನಿಷತ್ ತಾತ್ಪರ್ಯ ನಿರ್ಣಯ (ಬೆಲೆ: ರೂ ೨-೭೫)

DR. R. R. DIWAKAR-A profound study from many points of view.

ಡಾ|| ಡಿ. ವಿ. ಗುಂಡಪ್ಪನವರು-ತತ್ವಜಿಜ್ಞಾಸುಗಳಿಗೆ ಗ್ರಂಥ ಪರಮೋಪಕಾರ

ಸಾಹಿತ್ಯ ಪರಿಷತ್ತಿನ ಕನ್ನಡ ನುಡಿ—ಯಾವ ಒಂದು ಗ್ರಂಥದಲ್ಲಿಯೂ ತ್ರಿಮತಾಚಾರ್ಯರ ಭಾಷ್ಯಗಳನ್ನು ಒಂದೆಡೆಯಲ್ಲಿ ತುಲನಾತ್ಮಕವಾಗಿ ಪರಿಶೀಲಿಸುವ ಪ್ರಯತ್ನ ನಡೆದಿರುವಂತೆ ಕಾಣುವುದಿಲ್ಲ. ಶ್ರೀ ಮಲ್ಲಪ್ಪನವರು ಅಂತಹ ಒಂದು ಪ್ರಯತ್ನವನ್ನು ತಮ್ಮ ಕೃತಿಯಲ್ಲಿ ನಡೆಸಿದ್ದಾರೆ....ಈ ಕೃತಿಯನ್ನು ಓದಿದ ಮೇಲೆ ಶ್ರೀ ಮಲ್ಲಪ್ಪನವರು ಉಳಿದ ಎಂಟು ಉಪನಿಷತ್ತುಗಳಿಗೂ ಗೀತೆ ಮತ್ತು ಬ್ರಹ್ಮ ಸೂತ್ರಗಳಿಗೂ ಇದೇ ರೀತಿ ವ್ಯಾಖ್ಯಾನ ಮಾಲೆಯನ್ನು ಬರೆದು 'ಆಧುನಿಕ ಆಚಾರ್ಯ' ಪುರುಷರಾಗಬಾರದೇ ಎಂದು ಯಾರಿಗಾದರೂ ಎನಿಸೀತು.

ವಿವಾದಕ್ಕೆ ಎಡೆಯಿಲ್ಲದಂತೆ ಮಾಡಿದೆ. ಬೋಧ ಪ್ರತಿಬೋಧವೆಂಬ ಪದಗಳ ಅರ್ಥನಿರೂಪಣೆಯು ಸರ್ವರಿಗೂ ಸುಲಭ ಗ್ರಾಹ್ಯವಾಗಿದ್ದು, ಪಂಡಿತಮಾನ್ಯ ವಾಗಿದೆ. ಇನ್ನು ವೀರಶೈವ ಸಿದ್ಧಾಂತವಾದ ಶಿವಾದ್ವೈತ ಶಕ್ತಿವಿಶಿಷ್ಟಾ ದ್ವೈತ ಪದಗಳಲ್ಲಿ ಶಿವಾದ್ವೈತ ಪದವು ಸೃಷ್ಟಿಯ ಪೂರ್ವಾವಸ್ಥೆಯನ್ನೂ, ಶಕ್ತಿ ವಿಶಿಷ್ಟಾದ್ವೈತ ಪದವು ಸೃಷ್ಟಿಯು ಉಗಮವಾಗುವ ಅವಸ್ಥೆಯನ್ನೂ ಸೂಚಿಸುವುದೆಂಬ ಭಾವವು ವ್ಯಕ್ತವಾಗಿರುವುದು ಗಮನಾರ್ಹವಾಗಿದೆ. ಬಸವೇಶ್ವರಪೂರ್ವ ವೀರಶೈವವನ್ನೂ ಅವರ ಅನಂತರದಲ್ಲಾದ ಸುಧಾರಣೆ ಗಳಿಂದ ಕೂಡಿದ ವೀರಶೈವವನ್ನೂ ಸಪ್ರಮಾಣವಾಗಿ ನಿರೂಪಿಸಲಾಗಿದೆ. ಹರಿಹರ ಬುಕ್ಕರಾಯರಿಂದ ಪ್ರಾರಂಭಿಸಿ ಪ್ರೌಢ ದೇವರಾಯನ ಕಾಲದವರೆಗೂ ನಡೆದುಬಂದ ಧಾರ್ಮಿಕ ಪ್ರಗತಿಯನ್ನು ಸಕ್ರಮವಾಗಿ ಪ್ರತಿಪಾದಿಸಿರುವು ದರಿಂದ ವಿಜಯನಗರದ ಚರಿತ್ರೆಯಲ್ಲಿ ಒಂದು ಹೊಸ ಬೆಳಕು ಬಿದ್ದಂತಾಗಿದೆ. ಈ ರೀತಿ ಅನೇಕ ವಿಚಾರಗಳು ನೂತನವಾದವುಗಳಂತೆ ಕಂಡರೂ ಅವುಗಳಿಗೆ ಚರಿತ್ರದ ಹಿನ್ನೆಲೆಯೂ ಗ್ರಂಥಗಳ ಆಧಾರವೂ ನಿರೂಪಿಸಲ್ಪಟ್ಟಿರುವುದು ಸಮರ್ಪಕವಾಗಿದೆ.

ರಾಜಸೇವಾಸಕ್ತ ಪದ್ಮಶ್ರೀ ಸಿ. ಕೆ. ವೆಂಕಟರಾಮಯ್ಯನವರು— ಶ್ರೇಷ್ಠ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿದ್ದು, ವಿಶ್ರಾಂತರಾಗಿರುವ ಶ್ರೀ ಟಿ. ಯಸ್. ಮಲ್ಲಪ್ಪನವರಿಂದ ರಚಿತವಾಗಿರುವ "ಸಾಯಣ ಭಾಷ್ಯಾಧಾ ರೋಪೇತ ವಿವರಣಾತ್ಮಕ ನಾಸದೀಯ ಸೂಕ್ತ"ವನ್ನೂ "ಸಾಯಣ ಭಾಷ್ಯಾಧಾ ರೋಪೇತ ಪುರುಷಸೂಕ್ತ"ವನ್ನೂ ಓದಿ ಅತ್ಯಾನಂದವಾಯಿತು. ಶ್ರೀ ಮಲ್ಲಪ್ಪ ನವರ ಅಗಾಧವಾದ ಪಾಂಡಿತ್ಯ, ಅಭಿನಂದನಾರ್ಹವಾದ ವಿಚಾರಸಂಪತ್ತು, ವಿಪುಲವಾದ ಹೃದಯ ವೈಶಾಲ್ಯ, ಶ್ಲಾಘ್ಯಾರ್ಹವಾದ ತುಲನಾತ್ಮಕ ಸಮಾ ಲೋಚನೆ, ಜಟಿಲ ಸಂಗತಿಗಳನ್ನು ಸುಲಭಗ್ರಾಹ್ಯವಾಗುವಂತೆ ಸರಳ ಶೈಲಿ ಯಲ್ಲಿ ತಿಳಿಸುವ ವಿವರಣಾ ಸಾಮರ್ಥ್ಯ ಮುಂತಾದ ಗುಣಗಳು ಈ ಉದ್ಗ್ರಂಥ ಗಳಿಂದ ಮನವಟ್ಟಿ ಗೋಚರವಾಗುತ್ತವೆ. ಇವೆರಡು ಸೂಕ್ತಗಳನ್ನೂ ಕನ್ನಡ ಭಾಷೆಯಲ್ಲಿ ಕನ್ನಡಿಗರಿಗೆ ವಿವರಣಾತ್ಮಕವಾಗಿ ದೊರೆಯಿಸುವ ಅಮೋಘವಾದ ಉದ್ದೇಶದಿಂದ ನಾನಾ ಸಂಗತಿಗಳನ್ನು ತುಲನಾತ್ಮಕವಾಗಿ ವಿಚಾರಮಾಡಿ ಈ ಉದ್ಗ್ರಂಥಗಳನ್ನು ರಚಿಸಿದ್ದಾರೆ.

ಅಧ್ಯಾತ್ಮ ಪ್ರಕಾಶ ಜ್ಯೋತಿ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು, ಹೊಳೆನರಸೀಪುರ—ಇವರ ಸನ್ನಿಧಾನದಿಂದ ನಾಸದೀಯ ಸೂಕ್ತ–ಈ ಸ್ತುತ್ಯ ಪ್ರಯತ್ನಕ್ಕೆ ಹಲವರು ತಜ್ಞ ವಿಚಾರಕರ ಅಭಿಪ್ರಾಯಗಳು ಪೋಷಕವಾಗಿವೆ. ವಿದ್ವತ್ತಾಪೂರ್ಣವಾದ ಈ ಅನುವಾದವೂ ವಿವರಣೆಯೂ ಮನನೀಯವಾಗಿವೆ. **ಪುರುಷಸೂಕ್ತ**–ಇಲ್ಲಿ ಹೇಳಿರುವ ಪುರುಷನು ತ್ರಿಮೂರ್ತಿಗಳಿಗಿಂತ ವ್ಯತಿರಿಕ್ತವಾದ ಪರಬ್ರಹ್ಮವೇ ಎಂದು ಸಯುಕ್ತಿಕವಾಗಿ ಪ್ರತಿಪಾದಿಸಿರುವುದು ಸ್ತುತ್ಯವಾಗಿದೆ. ಅನೇಕ ವಿದ್ವಾಂಸರ ಶ್ಲಾಘನೆಗೆ ಪಾತ್ರವಾಗಿರುವ ಈ ವಿಚಾರ ಪರಿಪ್ಲುತ ಗ್ರಂಥವು ಶ್ರೀಯುತರ ವೈದಿಕ ವಾಙ್ಮಯದ ವಿಚಾರದ ಪರಿಶ್ರಮಕ್ಕೆ ಕೀರ್ತಿಸ್ತಂಭವೆನಿಸಿದೆ.

---

## ಗ್ರಂಥಕರ್ತರ ಇತರ ಗ್ರಂಥಗಳು

### ಈಶಾವಸ್ಯೋಪನಿಷತ್ ಪ್ರಕಾಶ (ಬೆಲೆ: ರೂ. ೨–೭೫)

PROF. M. YAMUNACHARYA–I have been an admirer of your mellow and ripe learning and I am never tired of reading over and over again your Isavasya Upanishat.

### ಕೇನೋಪನಿಷತ್ ತಾತ್ಪರ್ಯ ನಿರ್ಣಯ (ಬೆಲೆ: ರೂ ೨–೭೫)

DR. R. R. DIWAKAR–A profound study from many points of view.

ಡಾ|| ಡಿ. ವಿ. ಗುಂಡಪ್ಪನವರು–ತತ್ವಜಿಜ್ಞಾಸುಗಳಿಗೆ ಗ್ರಂಥ ಪರಮೋಪಕಾರ

ಸಾಹಿತ್ಯ ಪರಿಷತ್ತಿನ ಕನ್ನಡ ನುಡಿ—ಯಾವ ಒಂದು ಗ್ರಂಥದಲ್ಲಿಯೂ ತ್ರಿಮತಾಚಾರ್ಯರ ಭಾಷ್ಯಗಳನ್ನು ಒಂದೆಡೆಯಲ್ಲಿ ತುಲನಾತ್ಮಕವಾಗಿ ಪರಿಶೀಲಿಸುವ ಪ್ರಯತ್ನ ನಡೆದಿರುವಂತೆ ಕಾಣುವುದಿಲ್ಲ. ಶ್ರೀ ಮಲ್ಲಪ್ಪನವರು ಅಂತಹ ಒಂದು ಪ್ರಯತ್ನವನ್ನು ತಮ್ಮ ಕೃತಿಯಲ್ಲಿ ನಡೆಸಿದ್ದಾರೆ.... ಈ ಕೃತಿಯನ್ನು ಓದಿದ ಮೇಲೆ ಶ್ರೀ ಮಲ್ಲಪ್ಪನವರು ಉಳಿದ ಎಂಟು ಉಪನಿಷತ್ತುಗಳಿಗೂ ಗೀತೆ ಮತ್ತು ಬ್ರಹ್ಮ ಸೂತ್ರಗಳಿಗೂ ಇದೇ ರೀತಿ ವ್ಯಾಖ್ಯಾನ ಮಾಲೆಯನ್ನು ಬರೆದು 'ಆಧುನಿಕ ಆಚಾರ್ಯ' ಪುರುಷರಾಗಬಾರದೇ ಎಂದು ಯಾರಿಗಾದರೂ ಎನಿಸೀತು.

# ವಚನೋಪನಿಷತ್

## ವೇದವಾಙ್ಮಯದಿಂದ

## ವಚನವಾಙ್ಮಯದವರೆಗೆ ಆಧ್ಯಾತ್ಮಿಕ ಪ್ರಗತಿ

"ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಿಹರಿಸುತ್ತ ಬರುವಾಗ ಒಂದುಕಡೆ ತಪೋವನವನ್ನು ಪ್ರವೇಶಿಸಿದಂತೆಯೂ, ಸಿದ್ಧ ಸಾಧಕ ಋಷಿಗಳ ಸಂದರ್ಶನ ಪಡೆದು, ಅವರ ಉದಾತ್ತ ಜೀವನ ಧರ್ಮಬೋಧೆಗಳಿಂದ ನಮ್ಮ ಅಂತರಂಗ ಪರಿಶುದ್ಧವಾದಂತೆಯೂ, ಆತ್ಮನ ಬಂಧನಗಳು ಕಳಚಿಬಿದ್ದು ನಾವು ಮುಕ್ತ ರಾದಂತೆಯೂ ಒಂದು ದಿವ್ಯವಾದ ಆನಂದಾನುಭವ ಉಂಟಾಗುತ್ತದೆ. ಇಲ್ಲಿ ಪಟ್ಟಣವಾಸದ ಗೊಂದಲವಿಲ್ಲ; ರಾಜಾಸ್ಥಾನದ ವೈಭವ ದೃಶ್ಯಗಳಿಲ್ಲ. ತಪೋವನದ ಸಹಜ ಶಾಂತಿ, ಪರಸ್ಪರಪ್ರೇಮ, ಸಮತಾಭಾವ, ಸ್ವಾತಂತ್ರ್ಯ, ಇವು ಮೂರ್ತಿಮತ್ತಾಗಿ ಕಾಣುತ್ತವೆ. ಆರಣ್ಯಕಗಳಲ್ಲಿ ಉಪನಿಷತ್ತಿನ ದರ್ಶನವನ್ನು ಕಂಡಂತೆ ಇಲ್ಲಿ ವಚನಧರ್ಮದ ದರ್ಶನವನ್ನು ಕಾಣುತ್ತೇವೆ. ಸತ್ಯದ ಹಂಬಲು ಸಾಹಿತ್ಯವಾಗಿ, ಸತ್ಯಾನ್ವೇಷಣೆ ಸಿದ್ಧಾಂತವಾಗಿ, ಸತ್ಯ ಸಾಕ್ಷಾತ್ಕಾರವೇ ದರ್ಶನವಾಗಿ ನಮಗೆ ಆನಂದವನ್ನುಂಟುಮಾಡುತ್ತವೆ. ವಚನಸಾಹಿತ್ಯವೇ ತಪೋವನದ ಉಪನಿಷತ್ ಸಾಹಿತ್ಯ. ವಚನಕಾರರೇ ಉಪನಿಷತ್ ಕರ್ತೃಗಳಾದ ಮಹರ್ಷಿಗಳು."

ಈ ರೀತಿಯಾಗಿ ವಚನಶಾಸ್ತ್ರಧುರೀಣರೂ ಕೀರ್ತಿಶೇಷರೂ ಆದ ಶ್ರೀಯುತ ಎಂ. ಆರ್. ಶ್ರೀನಿವಾಸಮೂರ್ತಿಗಳು ಅವರ ವಚನ ಧರ್ಮ ಸಾರವನ್ನು ಪ್ರಾರಂಭಿಸಿರುವುದು, ವಚನವಾಙ್ಮಯಕ್ಕೂ ಉಪನಿಷದ್ವಾಙ್ಮ ಯಕ್ಕೂ ಇರುವ ಹೋಲಿಕೆಯನ್ನು ಮನಮುಟ್ಟುವಂತೆ ಮಾಡುತ್ತದೆ. ಮುಂದುವರಿದು ಅವರು ಹೇಳುವುದೂ ಗಮನಾರ್ಹ: "ವೇದಗಳ ಕಾಲದ ಶಾಂಡಿಲಿ, ಗಾರ್ಗಿ, ಮೊದಲಾದವರಂತೆ ಮುಕ್ತಾಯಕ್ಕ, ಮಹಾದೇವಿಯಕ್ಕ, ಮೊದಲಾದ ಹೆಂಗಸರು ಆತ್ಮಜಿಜ್ಞಾಸೆ ಮಾಡುವವರಾಗಿ ವಚನಸಾಹಿತ್ಯ ದಲ್ಲಿ ದೊರೆಯುತ್ತಾರೆ. ಜ್ಞಾನಮಾರ್ಗಕ್ಕೆ ತಳಹದಿಯನ್ನು ಹಾಕಿದ ಉಪನಿಷತ್ ಕರ್ತೃಗಳಿಗೆ ಕರ್ಮಕಾಂಡವು ಹಿನ್ನೆಲೆಯಾಗಿತ್ತು. ಆದುದರಿಂದ ಹೊಸ ಬೆಳಕನ್ನು ಕಂಡವರಲ್ಲಿ, ಕಂಡು ಸಾರಿದವರಲ್ಲಿ, ಆ ಮಹರ್ಷಿಗಳೇ

ಮೊದಲಿಗರು. ವಚನಕಾರರು ತಲೆಯೆತ್ತುವ ಕಾಲಕ್ಕೆ ಉಪನಿಷತ್ತುಗಳು ಹಿನ್ನೆಲೆಯಾಗಿದ್ದವು. ಆದುದರಿಂದ ಪರವಸ್ತು, ಜೀವ, ಸೃಷ್ಟಿ, ಮೊದಲಾದ ವಿಚಾರಗಳೆಲ್ಲ ಚರ್ಚೆಯಾಗಿ ಹೊಸ ಬೆಳಕು ಹರಡಿ, ಎಲ್ಲವೂ ಕಾಣುವಂತಿದ್ದವು. ಇವುಗಳನ್ನು ಕೆಲವರು ಬಳಸಿಕೊಂಡಿರಬಹುದು. ಆದರೆ ವಚನಕಾರರು ಸ್ವತಂತ್ರವಾಗಿಯೂ ಸತ್ಯ ಶೋಧನೆಗೆ ಪ್ರಯತ್ನಪಟ್ಟವರಾದ್ದರಿಂದ ಅವರ ಅನುಭವ ವಚನಗಳು ಉಪನಿಷತ್ತಿನ ವಚನಗಳನ್ನು ಹೋಲುತ್ತವೆ. ಈ ವಚನಕಾರರಲ್ಲಿ ಎಲ್ಲರೂ ಒಂದೇ ಪಂಥವನ್ನು ಹಿಡಿದವರಲ್ಲ; ಒಂದೇ ಮಟ್ಟಕ್ಕೆ ಏರಿದವರೂ ಅಲ್ಲ. ಸಿದ್ಧಾಂತರಚನೆ ಮಾಡಬೇಕೆಂಬ ಕಲ್ಪನೆಯಾದರೂ ಮೊದಲಿನ ವಚನಕಾರರಲ್ಲಿರಲಿಲ್ಲ. ಆದುದರಿಂದ ಉಪನಿಷತ್ತುಗಳ ಆಧಾರದಿಂದ ಹೇಗೆ ವಿವಿಧ ಸಿದ್ಧಾಂತಗಳನ್ನು ಕಲ್ಪಿಸಿಕೊಳ್ಳಬಹುದಾಗಿದೆಯೋ, ಹಾಗೆಯೇ ಮೊದಲಿನ ವಚನಸಾಹಿತ್ಯದಿಂದಲೂ ವಿವಿಧ ಸಿದ್ಧಾಂತಗಳನ್ನು ಕಲ್ಪಿಸಿಕೊಳ್ಳಬಹುದಾಗಿದೆ. ವಚನಕಾರರು ಹೀಗೆ ಬೇರೆ ಬೇರೆ ಮಟ್ಟಗಳಲ್ಲಿರುವುದರಿಂದ ಈ ಸಾಹಿತ್ಯದಲ್ಲಿ ಜೀವಕಳೆಯಿದೆ; ವಿವಿಧ ಸಿದ್ಧಾಂತಗಳಿಗೆ ಎಡೆಕೊಟ್ಟಿರುವುದರಿಂದ ಈ ಸಾಹಿತ್ಯ ಅಮೂಲ್ಯವಾಗಿದೆ. ಕರ್ಮಕಾಂಡದಲ್ಲಿ ತಿರುಳನ್ನು ಕಾಣದೆ ಜ್ಞಾನಮಾರ್ಗಕ್ಕೆ ಆ ಮಹರ್ಷಿಗಳು ಪ್ರವೇಶಿಸಿದರು. ಹಿಂದಿನ ಶೈವಪಂಥಗಳಲ್ಲಿ ತಿರುಳನ್ನು ಕಾಣದೆ ಷಟ್ಸ್ಥಲ ಮಾರ್ಗಕ್ಕೆ ಈ ವಚನಕಾರರು ಪ್ರವೇಶಿಸಿದರು."

ಉಪನಿಷದ್ವಾಙ್ಮಯದಲ್ಲಿಯೂ, ವಚನ ವಾಙ್ಮಯದಲ್ಲಿಯೂ ನಿಷ್ಣಾತರಾದ ಶ್ರೀಮಾನ್ ದಿವಾಕರರು 'ವೀರಶೈವತತ್ತ್ವಪ್ರಕಾಶ'ದಲ್ಲಿ ಹೇಳಿರುವ ನಾಲ್ಕು ಮಾತುಗಳಿಂದ ಈ ಮುನ್ನುಡಿಯನ್ನು ಮುಗಿಸುವುದೊಳ್ಳೆಯದು: "ವಚನಗಳು ಉಪನಿಷತ್ತುಗಳಿಗಿಂತ ಯಾವ ವಿಷಯದಲ್ಲಿಯೂ ಹಿಂದೆ ಬೀಳಲಾರವೆಂಬುದನ್ನು ಹೇಳಲಿಕ್ಕೆ ನನಗೆ ಪರಮಸಂತೋಷವಾಗುತ್ತದೆ. ಉಪನಿಷತ್ತುಗಳಲ್ಲಿದ್ದ ವಿಷಯಗಳೆಲ್ಲ ವಚನಗಳಲ್ಲಿ ಸಿಗುತ್ತವೆ. ವಚನಗಳಲ್ಲಿದ್ದ ವಿಷಯಗಳೆಲ್ಲ ಉಪನಿಷತ್ತುಗಳಲ್ಲಿ ಸಿಗುವುದು ಸಾಧ್ಯವಿರುವುದಿಲ್ಲ. ಸತ್ಯಾನ್ವೇಷಿಗಳಾದ ಋಷಿಗಳ ಅಂತಃಸ್ಫೂರ್ತಿಯಿಂದ ಹೊರಟವುಗಳೇ ಉಪನಿಷತ್ತುಗಳು. ಶರಣರ ಹೃದಯದಿಂದ ನಿರರ್ಗಳವಾಗಿ ಹೊರಟವುಗಳೇ ವಚನಗಳು. ಋಷಿಗಳು ಆಧ್ಯಾತ್ಮಿಕ ಮಾರ್ಗದಲ್ಲಿ ತೋ

ಷಿವರು. ಶರಣರಾದರೂ ಸತ್ಯಾನ್ವೇಷಿಗಳಾಗಿ ಧಾರ್ಮಿಕ ಕಾರ್ಯದಲ್ಲಿ ತೊಡಗಿದವರು. ಋಷಿಯೆಂಬುವ ಶಬ್ದವು ಹೇಗೆ ಸಂಸ್ಕೃತದಲ್ಲಿ ಗಂಭೀರವಾದ ಅರ್ಥವುಳ್ಳದಾಗಿದೆಯೋ, ಹಾಗೆಯೇ ಶರಣ ಶಬ್ದದ ಅರ್ಥವೂ ಬಹಳ ಮಹತ್ತರವಾದುದಾಗಿದೆ. ಅಂತೂ ಹೆಸರು ಬೇರೆ ಬೇರೆ ಇದ್ದರೂ, ಇಬ್ಬರ ಮಾರ್ಗವೂ ಒಂದೇ ಆಗಿರುತ್ತದೆ. ಸಂಸ್ಕೃತವಾಙ್ಮಯ ದೃಷ್ಟಿಯಿಂದ ಉಪನಿಷತ್ತುಗಳು ಹೇಗೆ ಶ್ರೇಷ್ಠ ತರಗತಿಯನ್ನು ಹೊಂದಿರುತ್ತವೆಯೋ ಹಾಗೆಯೇ ವಚನ ವಾಙ್ಮಯದಲ್ಲಿ ಕನ್ನಡ ಸಾಹಿತ್ಯವು ಹೊರಸೂಸುತ್ತಲಿದೆ. ಗೀತೆಯ ಗುಟ್ಟು ಉಪನಿಷತ್ತುಗಳಲ್ಲಿರುವಂತೆ ವಚನಗಳಲ್ಲಿಯೂ ಅಡಕವಾಗಿದೆ. ಯೋಗಮಾರ್ಗವು ಉಪನಿಷತ್ತುಗಳಲ್ಲಿ ಉಲ್ಲೇಖವಾಗಿರುವಂತೆಯೇ ವಚನಕಾರರಂತೂ ಎಲ್ಲಾ ಯೋಗಗಳಲ್ಲಿ ಬಲ್ಲಿದರಿದ್ದರೆಂಬ ಬಗ್ಗೆ ಬೇಕಾದಷ್ಟು ವಚನಗಳನ್ನು ಉದಾಹರಿಸಬಹುದಾಗಿದೆ. ಸಂಸ್ಕೃತದಲ್ಲಿ ಉಪನಿಷತ್ತುಗಳಿದ್ದರೆ, ಕನ್ನಡದಲ್ಲಿ ವಚನಗಳಿವೆ. ಸಂಸ್ಕೃತ ಭಾಷೆಯು ಜಗತ್ತಿನಲ್ಲಿ ತನ್ನ ಪ್ರತಾಪವನ್ನು ಬೀರಿದೆ. ಕನ್ನಡವು ಮಾತ್ರ ಕರ್ನಾಟಕ ಪ್ರಾಂತದ ಮಟ್ಟಿಗಿರುತ್ತದೆ. ವಚನಗಳು ಕನ್ನಡ ಉಪನಿಷತ್ತುಗಳೆಂದು ಅನೇಕ ಪಂಡಿತರು ಹೇಳಿಯೂ ಹೇಳುತ್ತಲೂ ಇರುವರು. ಅವರಲ್ಲಿ ಒಬ್ಬರ ಹೇಳಿಕೆಯನ್ನು ನೋಡೋಣ! ದಿವಂಗತ ಮಹಾಮಹೋಪಾಧ್ಯಾಯ ಪ್ರಾಕ್ತನ ವಿಮರ್ಶ ವಿಚಕ್ಷಣ ರಾ|| ಬ|| ಆರ್. ನರಸಿಂಹಾಚಾರ್ಯರು, ಎಂ.ಎ., ಎಂ.ಆರ್.ಎ.ಎಸ್., ರಿಟಯರ್ಡ್ ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟ್ ಡೈರೆಕ್ಟರ್, ಮೈಸೂರು, ಇವರು ತಮ್ಮ ಕವಿಚರಿತ್ರೆಯಲ್ಲಿ ಸ್ಪಷ್ಟವಾಗಿ ವಚನಗಳು ಕನ್ನಡ ಉಪನಿಷತ್ತುಗಳು, ಬಿಗಿಯಾದ ಶೈಲಿಯಲ್ಲಿ ಸುಲಭವಾಗಿ ವೇದಾಂತವನ್ನು ಉಪದೇಶಿಸುತ್ತವೆಂದು ಹೇಳಿದ್ದಾರೆ. ಉಪನಿಷತ್ತುಗಳಲ್ಲಿ ಕೆಲವು ಮಂತ್ರಗಳಿಗೆ ಅರ್ಥವನ್ನು ಹೇಳುವುದು ಸುಲಭಸಾಧ್ಯವಿಲ್ಲದಿರುವಂತೆ, ವಚನಗಳಲ್ಲಿಯೂ ಅನೇಕ ವಚನಗಳು ತಿಳಿಯುವುದೇ ಇಲ್ಲ. ಅವುಗಳ ಅರ್ಥವನ್ನು ಅನುಭವಶಾಲಿಗಳು ಮಾಡಬೇಕಲ್ಲದೆ ಉಳಿದವರಿಗೆ ಸಾಧ್ಯವಿರುವುದಿಲ್ಲ". ದಿವಾಕರರು ವಚನಶಾಸ್ತ್ರ ರಹಸ್ಯದಲ್ಲಿ ಹೇಳಿದಂತೆ "'ಕನ್ನಡದಲ್ಲಿ ಈ ವಚನಶಾಸ್ತ್ರರಹಸ್ಯದಂಥ ವಾಙ್ಮಯವಿದ್ದುದು ಕನ್ನಡಿಗರ ಭಾಗ್ಯವು ಮತ್ತು ಕನ್ನಡಿಗರಿಗೆ ಅದು ಭೂಷಣಾಸ್ಪ

ದವು' ಎಂದು ಹೇಳಬೇಕಾಗುವುದು. ಇದು ಕನ್ನಡ ಭಾಷೆಯ ಗೌ
ವನ್ನಷ್ಟೇ ಅಲ್ಲ, ಕನ್ನಡಿಗರ ಗೌರವವನ್ನೂ ಸ್ಪಷ್ಟಗೊಳಿಸುವುದು." ಷ
ತೋತ್ರಮದು ಹೀಗೆ ಒಮ್ಮುಖವಾಗಿ ವಚನಗಳು ಕನ್ನಡ ಉಪನಿಷ
ಗಳೆಂದು ಸಿದ್ಧಾಂತ ಮಾಡಿರುವುದಕ್ಕೆ ಕಾರಣವೇನು ಎಂದರೆ- ಹಿಂ
ಮಹರ್ಷಿಗಳಾಗಲೀ, ಮಧ್ಯಕಾಲದ ಶಿವಶರಣ ಸಾಧುಸಂತರಾಗ
ಇಂದಿನ ಅರವಿಂದರೇ ಮೊದಲಾದ ಪರಮ ಯೋಗಿಗಳಾಗಲೀ ಅ
ಅಂತಃಸ್ಫೂರ್ತಿಯಲ್ಲಿ ಕಾಣಿಸಿಕೊಂಡಿರುವ ಪರಮಾತ್ಮ ತತ್ತ್ವವು ಒಂ
ಎಂಬುದಾಗಿದೆ. ಹಿಂದಿನವರು ಕಂಡ ಬೆಳಕಿನಲ್ಲಿ ಮುಂದಿನವರು ಮು
ವರಿದು ಪ್ರಗತಿಯನ್ನು ಸಾಧಿಸಿದರು. ಆ ಪ್ರಗತಿಯನ್ನು ಸಾಧಿಸಲು ಅ
ವಾದ ಬೆಳಕನ್ನು ಬೀರಿದುದಕ್ಕೆ ಮುಂದಿನವರು ಹಿಂದಿನವರಿಗೆ ಋಣಿಗ

## ಬಹುದೇವತೋಪಾಸನೆಯಿಂದ
## ಏಕದೇವೋಪಾಸನೆಯ ಕಡೆಗೆ ಪ್ರಗತಿ

ವೇದೋಪನಿಷತ್ತುಗಳ ಕಾಲದಿಂದ ವಚನವಾಙ್ಮಯದ ಕಾಲದ
ದೈವಜ್ಞರ ಮನವು ಹೇಗೆ ಪರಿವರ್ತಿಸುತ್ತಾ ಹೋಯಿತೆಂಬುದು ವಿ
ರಾರ್ಹವಾದ ವಿಷಯವಾಗಿದೆ. ನಿಸರ್ಗ ಶಕ್ತಿಗಳಲ್ಲಿ ದೇವತಾಸ್ವರೂಪ
ಕಂಡ ಆದಿಋಷಿಗಳು ಸ್ತುವಿಸಿದ ಸೂಕ್ತಸಂಗ್ರಹವನ್ನು ಋಗ್ವೇದ
ಕಾಣುತ್ತೇವೆ. ದಸ್ಯುದಾನವರೊಡನೆ ಆರ್ಯರು ಯುದ್ಧ ಮಾಡುತ್ತಿ
ಕಾಲದಲ್ಲಿ ಯುದ್ಧಕ್ಕೆ ಸಹಾಯವನ್ನು ಕೇಳುವುದೋ, ತಮ್ಮ ಸುಖ
ಧನ-ಧಾನ್ಯ-ಕನಕಾದಿಗಳನ್ನು ಪಡೆಯಲು ಪ್ರಾರ್ಥಿಸುವುದೋ, ರೋ
ರುಜಿನಗಳಿಂದ ಬಿಡುಗಡೆಹೊಂದಲು ಬೇಡುವುದೋ ಈ ಸೂಕ್ತಗಳಲ್ಲಿ ಕ
ಬರುವುದು ; ಎಂದರೆ ಈ ಸೂಕ್ತಗಳಲ್ಲಿ ದೃಷ್ಟಿಯು ಅಂತರ್ಮುಖವಾಗಿ
ದಕ್ಕಿಂತ ಬಹಿರ್ಮುಖವಾಗಿರುವುದು ಹೆಚ್ಚಾಗಿ ಕಂಡುಬರುತ್ತದೆ. ತ
ವಿಚಾರಕ್ಕಿಂತ, ಬಾಹ್ಯ ಪ್ರಪಂಚದ ದುಃಖ ನಿವಾರಣೆಗೋ, ಸ
ಪ್ರಾಪ್ತಿಗೋ ದೇವತೆಗಳನ್ನು ಪ್ರಾರ್ಥಿಸುವುದೇ ಹೆಚ್ಚಾಗಿದೆ. ಆ
ಮೋಡಗಳ ಮಧ್ಯೆ ಮಿನುಗುವ ನಕ್ಷತ್ರಗಳಂತೆ, ಸುವರ್ಣಾಭರಣದ ಮ

ಹೊಳೆಯುವ ರತ್ನಗಳಂತೆ ಅಲ್ಲಲ್ಲಿ ವಿಶ್ವೋತ್ಪತ್ತಿ ವಿಚಾರಗಳು ವೇದ ವಾಙ್ಮಯದಲ್ಲಿ ಸ್ಫುರಿಸುತ್ತಿರುವುದು ಕಂಡುಬರುತ್ತದೆ. ಬಹುದೇವತಾ ವಾದದಿಂದ ಏಕದೇವತಾವಾದದ ಕಡೆಗೆ, ಬಾಹ್ಯ ದೃಷ್ಟಿಯಿಂದ ಅಂತ ರಾತ್ಮದ ಕಡೆಗೆ, ಪ್ರಾರ್ಥನೆಯಿಂದ ತಾತ್ತ್ವಿಕ ವಿಚಾರ ವಿವೇಚನೆಗಳ ಕಡೆಗೆ, ಆದಿಋಷಿಗಳ ಮನಸ್ಸು ಕ್ರಮವಾಗಿ ಹರಿದುದು ಪಠನಾರ್ಹವಾಗಿದೆ.

ಆದಿಮಾನವನು ಪ್ರಕೃತಿಯ ಸೌಂದರ್ಯಸೌಲಭ್ಯಗಳಿಂದ ಸಂತೋ ಷಿಸಿದಂತೆಯೇ ಅದರ ಭೀಕರ ರುದ್ರಪ್ರದರ್ಶನದಿಂದ ಭೀತನಾಗಿರಬೇಕು. ಕಾರ್ಮೋಡಗಳೆಂಬ ನೀಗ್ರಾಡಿಗಳನ್ನು ಮಿಂಚೆಂಬ ಚಾಟಿಯಿಂದ ಹೊಡೆ ದಂತಾಗಿ ಗುಡುಗಿನ ಆರ್ಭಟದಿಂದ ಮಳೆ ಸುರಿದು ತೇಜಃಪುಂಜವಾದ ಸಿಡಿಲೆರಗಿ ಮರಗಳುರುಳಿ ಪ್ರಾಣಿಗಳಳಿದಾಗ ಪ್ರಕೃತಿಯ ರುದ್ರಪ್ರದರ್ಶನ ವಾಗಿ, ಮಾನವನು ಭಯಭರಿತನಾಗಿರಬೇಕು. ಅಂತೆಯೇ ಮಳೆಯೇ ಪ್ರಕೃತಿ ಸೌಂದರ್ಯವನ್ನು ಹೆಚ್ಚಿಸಿ ಮಾನವನ ಪ್ರಾಣಾಧಾರವಾದ ಆಹಾರ ಸಾಮಗ್ರಿಗಳನ್ನೊದಗಿಸಿದಾಗ ಪ್ರಕೃತಿಯ ಶಿವಸೌಂದರ್ಯವು ಅವನಿಗೆ ಗೋಚರವಾಗಿರಬೇಕು; ದಾವಾನಲದ ರುದ್ರಸ್ವರೂಪದಿಂದ ಭೀತನಾ ದಂತೆಯೇ ನಿತ್ಯೋಪಯೋಗಿಯಾದ ಅಗ್ನಿಯ ಶಿವಸ್ವರೂಪದಿಂದ ಸಂಪ್ರೀತ ನಾಗಿರಬೇಕು. ಇವುಗಳೆಲ್ಲಕ್ಕೂ ಕಾರಣವಾದ ಶಕ್ತಿಗಳ ಕಲ್ಪನೆಯುಂಟಾಗಿ ಇಂದ್ರ, ಅಗ್ನಿ, ವರುಣ ಮೊದಲಾದ ದೇವತೆಗಳ ಸ್ತೋತ್ರಕ್ಕೆ ಪ್ರಾರಂಭ ವಾಗಿರಬೇಕು. ತಮ್ಮ ಉದ್ಧಾರಕ್ಕಾಗಿ ತಾವು ಹೇಗೆ ನಡೆದುಕೊಳ್ಳ ಬೇಕೆಂಬುದೇ ಧರ್ಮಮಾರ್ಗದಲ್ಲಿ ಪ್ರವೃತ್ತಿಯುಂಟಾಗಲು ಕಾರಣ ವಾಗಿರಬೇಕು. "ಭಯಾತ್ ಪವೃತ್ತಿಃ" ಎಂದು ಪ್ರಭಾಕರರು ಹೇಳಿರುವು ದರಲ್ಲಿಯೂ "ನ ಹಿ ವಿ ಧಿ ಶ ತೇ ನಾ ಪಿ ತಥಾ ಪ್ರವರ್ತತೇ ಯಥಾ ಲೋಭೇನ" ಎಂದು ಕುಮಾರಿಲಭಟ್ಟರು ಹೇಳಿರುವುದರಲ್ಲಿಯೂ ಸತ್ಯ ವಿದೆ. ತಮಗುಂಟಾಗುವ ಕೇಡಿನ ಭಯ ನಿವಾರಣೆಗಾಗಿಯೂ ತಮಗೆ ಸುಖಪ್ರಾಪ್ತಿಯುಂಟಾಗಲೆಂಬ ಲೋಭದಿಂದಲೂ ಇಂದ್ರಾದಿ ದೇವತೆಗಳು ತಮಗೆ ಪ್ರಸನ್ನರಾಗುವಂತೆ ಮಾನವರು ನಡೆದುಕೊಳ್ಳಬೇಕಾಯಿತು. ತಮ್ಮ ಆಹಾರವಾದ ಮಧುಘೃತಮಾಂಸಾದಿಗಳನ್ನು ದೇವತೆಗಳಿಗೆ ಅಗ್ನಿಯ ಮೂಲಕ ಅರ್ಪಿಸುವ ಪದ್ಧತಿಯು ಪ್ರಾರಂಭವಾಗಿ ಅದೇ ಯಜ್ಞಯಾಗಾದಿ

ಗಳಿಗೆ ಮಾರ್ಗವಾಗಿರಬೇಕು. ಆ ಮುಂದೆ ನೇರವಾಗಿ ಪ್ರತಿಯೊಬ್ಬ ಆಯಾ ದೇವತೆಗಳನ್ನು ಪೂಜೆಮಾಡುವ ಕಾಲವು ಕಳೆದುಹೋಗಿ ಸ ದಾಯಗಳು ಬಳೆದು ಪುರೋಹಿತರ ಆವಶ್ಯಕತೆಯುಂಟಾಗಿ ಅಂಧಶ್ರ ಮೊದಲಾಗಿರಬೇಕು.

ಪ್ರಾಜ್ಞರಾದ ಆರ್ಯರಿಗೆ ಇಂದ್ರಾಗ್ನಿವರುಣಾದಿ ನೈಸರ್ಗಿಕ ದೇ ಗಳ ಆರಾಧನೆಯಲ್ಲಿ ತೃಪ್ತಿಯುಂಟಾಗಲಿಲ್ಲ. ಅನೇಕ ದೇವತ ಉಪಾಸನೆಯ ಕಡೆಯಿಂದ ಅವರ ಮನಸ್ಸು ಏಕದೇವತೋಪಾಸ ಕಡೆಗೆ ಒಲಿಯಿತು. ಇಂದ್ರನನ್ನೋ ವರುಣನನ್ನೋ ಪ್ರಮುಖ ದೇ ಯನ್ನಾಗಿ ಆರಾಧಿಸಿದುದೂ ಆಯಿತು. ಆದರೆ ತಮ್ಮಂತೆ ಕೈಕಾ ಮೂಗು ಬಾಯಿಗಳಿರುವ ಮನುಷ್ಯಾಕಾರದ ದೇವರುಗಳ ಕಲ್ಪನೆ ಅವರಿಗೆ ಶಾಂತಿ ದೊರೆಯಲಿಲ್ಲ. ಅಂತಹ ದೇವತೆಗಳು ನಮ್ಮಂತೆ ತಿಂದು ತೇಗಿ ಚಿರಕಾಲ ಬಾಳಿದರೂ, ಕೊನೆಗೊಂದುದಿನ ಅಳಿಯ ಬೇಕು. ಹೆಣ್ಣುಗಂಡುಗಳೆಂದಮೇಲೆ, ಪತಿಪತ್ನೀಪುತ್ರಾದಿಗಳನ್ನು ಇಂದ್ರ ಗಳಂತೆ ಪಡೆದು ರಾಗದ್ವೇಷಗಳಿಗೊಳಗಾಗಿ ಯುದ್ಧಮಾಡಿ ಗೆದ್ದುಸೋ ಸುಖದುಃಖಗಳಿಗೊಳಗಾಗಬೇಕು. ಆದುದರಿಂದ ಇಂತಹ ದೇವತೆ ಗೆಲ್ಲ ಆಧಾರಭೂತವಾದ ಅವ್ಯಕ್ತ ಚೈತನ್ಯವೊಂದಿರಬೇಕೆಂದೂ, ರಿಂದಲೇ ಇಂದ್ರಾದಿದೇವತೆಗಳು ಚೈತನ್ಯವನ್ನು ಪಡೆದಿರಬೇಕೆಂದೂ ಕ ಯುಂಟಾಯಿತು.

ಈ ರೀತಿ ಮನೋವಿಕಾಸವು ಮುಂದುವರಿದಂತೆ ಮೂವತ್ತುಮೂ ಕೋಟಿ ದೇವತೆಗಳನ್ನು ಪೂಜಿಸುವುದು ವಿಚಾರಪರರಿಗೆ ಸರಿದೋರಲಿ ಮುಂದೆ ಹತ್ತು ಹನ್ನೆರೆಡು ಶತಮಾನಗಳಲ್ಲಿ ಇದನ್ನು ಮೀರಿಸುವ ಅಜ್ಞಾ ಸಮಾಜದಲ್ಲಿ ತುಂಬಿತುಳುಕುವಂತಾಗಿ "ಹಾಳು ಮೊರಡಿಗಳಲ್ಲಿ ದಾರಿಗಳಲ್ಲಿ ಕೆರೆ–ಭಾವಿ ಹೂ ಗಿಡ ಮರಂಗಳಲ್ಲಿ ಗ್ರಾಮ ಮಧ್ಯಂಗ ಚೌಪಥಪಟ್ಟಣ ಪ್ರದೇಶದಲ್ಲಿ ಹಿರಿಯಾಲದ ಮರದಲ್ಲಿ ಮನೆಯಮಾಡಿ ವೆಮ್ಮೆಯ, ಹಸುಗೂಸು, ಬಸುರಿ, ಬಾಣಂತಿ, ಕುಮಾರಿ, ಕೊಡಗೂ ಎಂಬವರ ಹಿಡಿದುತಿಂಬ ತಿರಿದುಂಬ ಮಾರಯ್ಯ ಬೀರಯ್ಯ ಕೇಚರ ಗಾ ಅಂತರ ಬೆಂತರ ಕಾಳಯ್ಯ ಮಾರಯ್ಯ ದೂಳಯ್ಯ, ಕೇತಯ್ಯ" ಗಳ

ಅನಂತ ದೈವಗಳನ್ನು ಪೂಜಿಸುವುದನ್ನು ನೋಡಿ ಬೇಸತ್ತು "ದೇವನೊಬ್ಬ ನಾಮ ಹಲವು" ಎಂದು ಬಸವೇಶ್ವರನು ಉಪದೇಶಿಸಿದುದು, ತುಳಿವ ನೆಲ ದೈವ, ಕುಡಿವ ಜಲದೈವ, ಸುಡುವ ಬೆಂಕಿ ದೈವ, ಸುಳಿವಗಾಳಿ ದೈವ ವೆಂದು ಹಲವು ದೈವಗಳಿಗೆ ಮರೆಹೋಗುತ್ತಿರುವವರನ್ನು ನೋಡಿ ಕನಿಕರ ದಿಂದ ವೇದಕಾಲದ ಋಷಿಗಳು "ಏಕಂಸತ್, ವಿಪ್ರಾ ಬಹುಧಾ ವದಂತಿ" ಎಂದು ಉಪದೇಶಿಸಿದುದರ ಪ್ರತಿಧ್ವನಿಯಾಗಿದೆ.

ಒಬ್ಬ ದೇವನ ಕಲ್ಪನೆಯೇ ಸರಿಯೆಂದು ತೋರಿದಾಗ ಆ ದೇವನು ಯಾರು? ಎಂಬ ಪ್ರಶ್ನೆಯನ್ನು ಮಾಡಿದುದು ಸ್ವಭಾವ ಸಿದ್ಧವೇ ಸರಿ. ಇಂದ್ರಾಗ್ನಿ ವರುಣಾದಿ ದೇವತೆಗಳಲ್ಲಿ ಯಾವ ದೇವತೆಯನ್ನು ಉದ್ದೇಶಿಸಿ ಉಪಾಸನೆಯನ್ನು ಮಾಡಿದರೂ ಆ ದೇವತೆಯೆ ಉಳಿದ ಎಲ್ಲ ದೇವತೆಗಳ ನ್ನೊಳಗೊಂಡ ಮಹಾದೈವವೆಂದು ಹೊಗಳುವ ಪದ್ಧತಿಯು ಆಗ ಪ್ರಾರಂಭ ವಾಯಿತೆನ್ನಬಹುದು. ಆದರೆ ಇಂದು ಶೈವರು ಶಿವನನ್ನೇ ಮಹಾದೇವನೆನ್ನು ವಂತೆ, ವೈಷ್ಣವರು ವಿಷ್ಣುವನ್ನೇ ಪುರುಷೋತ್ತಮನೆನ್ನುವಂತೆ ಅಂದು ಕೆಲ ವರು ಇಂದ್ರನನ್ನು ಪರಮದೈವವೆಂದರೆ ಮತ್ತೆ ಕೆಲವರು ಅಗ್ನಿಯನ್ನೋ ವರುಣನನ್ನೋ ಹಾಗೆ ಕರೆದಿರುವರೆನ್ನುವುದು ಹೆಚ್ಚು ಸಂಭವನೀಯ. ಉದಾಹರಣೆಗಾಗಿ ಅಗ್ನಿಯನ್ನೇ ಹಾಗೆ ಭಾವಿಸಿದರೆನ್ನುವ ವೇದ ಮಂತ್ರ ಗಳಿವನ್ನು ಉದಾಹರಿಸಬಹುದು.

ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।
ತ್ವಂ ಬ್ರಹ್ಮಾ ರಯಿವಿದ್ ಬ್ರಹ್ಮಣಸ್ಪತೇ ತ್ವಂ ವಿದರ್ತಃ ಸಚಸೇ ಪುರಂಧ್ಯಾ ॥

ಋ ೨-೧-೩

ತ್ವಮಗ್ನೇ ರಾಜಾ ವರುಣೋ ಧೃತವ್ರತಸ್ತ್ವಂ ಮಿತ್ರೋ ಭವಸಿ ದಸ್ಮ ಈಡ್ಯಃ ।
ತ್ವಮರ್ಯಮಾ ಸತ್ಪತಿರ್ಯಸ್ಯ ಸಂಭುಜಂ ತ್ವಮಂಶೋ ವಿದಥೇ ದೇವ ಭಾಜಯುಃ ॥

ಋ ೨-೧-೪

---

ಅರ್ಥ: ಅಗ್ನೇ = ಎಲೈ ಅಗ್ನಿಯೇ, ತ್ವಂ = ನೀನು, ಸತಾಂ ವೃಷಭಃ[1] ಇಂದ್ರಃ ಅಸಿ = ಸಜ್ಜನರಿಗೆ ವರಗಳನ್ನು ವರ್ಷಿಸುವ ಇಂದ್ರನಾಗಿದ್ದೀಯೆ; ತ್ವಂ =

ಸಾಯಣಭಾಷ್ಯಾಧಾರ:—

1 ಸತಾಂ ಸಾಧೂನಾಂ ಇಂದ್ರೋಽಸಿ ಕಾಮಾನಾಂ ವರ್ಷಿತಾಸಿ;

ಅಗ್ನಿಯೇ ಇಂದ್ರನೂ ನೀನೆ, ವಿಷ್ಣುವೂ ನೀನೆ, ಬ್ರಹ್ಮನೂ ನೀನೆ, ವರುಣನೂ ನೀನೆ, ಮಿತ್ರನೂ ನೀನೆ, ಅರ್ಯಮನೇ ಮೊದಲಾದ ದೇವತೆಗಳೂ ನೀನೆ ಆಗಿದ್ದಿ-ಎಂದು ಈ ಮಂತ್ರಗಳಲ್ಲಿ ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ದೇವತೆಗಳಲ್ಲಿ ಇಂದ್ರನನ್ನು ಬಿಟ್ಟರೆ ಅಗ್ನಿಯೇ ಪ್ರಮುಖದೇವತೆ; ಇನ್ನೂರಕ್ಕಿಂತ ಹೆಚ್ಚು ಋಗ್ವೇದ ಸೂಕ್ತಗಳು ಅಗ್ನಿಯನ್ನು ಸ್ತುತಿಸುತ್ತವೆ. ಅತ್ಯಂತ ಪ್ರಮುಖ ದೇವತೆಯಾದ ಇಂದ್ರನ ಸ್ತುತಿಯು ಸುಮಾರು ಮೂರು ನೂರು ಸೂಕ್ತಗಳಲ್ಲಿರುತ್ತದೆ. ಋಗ್ವೇದದಲ್ಲಿ ಕಾಲು ಭಾಗ ಇಂದ್ರನ ವಿಷಯವಾದುದೇ. ಇಂತಹ ಪ್ರಮುಖ ದೇವತೆಯನ್ನು ಕುರಿತು 'ದೇವನೊಬ್ಬ ನಾಮ ಹಲವು' ಎಂಬ ಭಾವನೆ ಬಂದುದರಲ್ಲಿ ಅತಿಶಯವಿಲ್ಲ. ಋಗ್ವೇದದಲ್ಲಿ (೮-೮೨-೪) ಇಂದ್ರ ಸೂರ್ಯರು ಏಕದೇವತೆಯಂತೆ

---

ನೀನು, ಉರುಗಾಯಃ ನಮಸ್ಯಃ ವಿಷ್ಣುಃ = ಬಹುವಾಗಿ ಸುತಿಸಲ್ಪಡುವ ನಮಿಸಲ್ಪಡುವ ವಿಷ್ಣುವಾಗಿದ್ದೀಯೆ ; ತ್ವಂ ಬ್ರಹ್ಮಣಸ್ಪತೇ = ಕರ್ಮಪಾಲಕನಾದ ಅಗ್ನಿಯೇ ನೀನು, ರಯಿವಿತ್ ಬ್ರಹ್ಮಾ = ಧನವಂತನಾದ ಬ್ರಹ್ಮನಾಗಿದ್ದೀಯೆ ; ವಿದರ್ತಃ[2] = ವಿವಿಧ ಕಾರಕ ವೈಶ್ವಾನರಾಗ್ನಿಯೇ, ಪುರಂಧ್ಯಾ[3] = ಬಹುತರ ಬುದ್ಧಿಯಿಂದ, ಸಚಸೇ = ಯುಕ್ತನಾಗಿದ್ದೀಯೆ.

ಅಗ್ನೇ = ಎಲೈ ಅಗ್ನಿಯೇ, ತ್ವಂ = ನೀನು, ಧೃತವ್ರತಃ ರಾಜಾ ವರುಣಃ = ಧೃತವ್ರತನೂ ಪ್ರಭುವೂ ಆದ ವರುಣನಾಗಿದ್ದೀಯೆ ; ತ್ವಂ = ನೀನು, ದಸ್ಮಃ[4] ಈಡ್ಯಃ ಮಿತ್ರಃ = ಶತ್ರುಘ್ನನೂ ಸ್ತುತ್ಯನೂ ಆದ ಮಿತ್ರದೇವತೆಯಾಗಿದ್ದೀ; ಯಸ್ಯ ಸಂಭುಜಂ[5] ಸತ್ಪತಿಃ ಅರ್ಯಮಾ = ಯಾರ ಧನವು ಸಜ್ಜನರಿಂದ ಭೋಗಿಸಲ್ಪಡುವುದೋ ಅಂತಹ ಸಜ್ಜನ ಪತಿಯಾದ ಅರ್ಯಮನು, ಭವಸಿ = ಆಗಿದ್ದೀಯೆ; ತ್ವಂ ಅಂಶಃ = ನೀನು ಅಂಶ ದೇವನಾಗಿದ್ದೀಯೆ, ದೇವಃ = ದೇವನೆ, ವಿದಥೇ = ನಮ್ಮ ಯಜ್ಞದಲ್ಲಿ, ಭಾಜಯುಃ = ಸತ್ಫಲಗಳನ್ನು ಹಂಚುವನಾಗು

2 ಹೇವಿದರ್ತಃ ವಿವಿಧಕಾರಕ ವೈಶ್ವಾನರ ರೂಪಾಗ್ನೇ ;

3 ಪುರಂಧ್ಯಾ = ಬಹುಪ್ರಕಾರಯಾ ಬುದ್ಧ್ಯಾ ;

4 ದಸ್ಮಃ ಶತ್ರೂಣಾಂ ಉಪಕ್ಷಯಿತಾಃ ;

5 ಯಸ್ಯಧನಂ ಸಂಭುಜಂ ಸಮ್ಯಕ್ ಭೋಗಾಯ ಸಾಧು ಗ್ರಹೀತ್ರೂಣಾಂ;

6 ವಿದಥೇ ಅಸ್ಮದೀಯೇ ಯಜ್ಞೇ.

ಆಹ್ವಾನಿಸಲ್ಪಟ್ಟಿದ್ದಾರೆ. ಋಗ್ವೇದದಲ್ಲಿಯೇ (೨-೩೦-೧) ಇಂದ್ರನಿಗೆ ಸವಿತೃ ಎಂಬ ಪ್ರಯೋಗವೂ ಉಂಟು ಶತಪಥ ಬ್ರಾಹ್ಮಣ (೧-೬-೪-೧೮) ದಲ್ಲಿ ಇಂದ್ರನೇ ಸೂರ್ಯನು ವೃತ್ರನು ಮತ್ತು ಚಂದ್ರನು ಎಂದು ಹೇಳಿದೆ. ಆದರೆ ಇಂದ್ರಾಗ್ನಿ ವರುಣಾದಿಗಳು ವೈಯುಕ್ತಿಕ ಗುಣಗಳುಳ್ಳ ಬೇರೆ ದೇವತೆಗಳಾದುದರಿಂದ, ಒಬ್ಬರು ಇನ್ನೊಬ್ಬರಾಗಲಾರರು.

ಮುಂದೆ, ಈ ಪ್ರಮುಖನಾದ ಇಂದ್ರನ ಅಸ್ತಿತ್ವವನ್ನೇ ಪ್ರಶ್ನಿಸುವ ಕಾಲ ಸಹಾ ಬಂದಿತು :

ಪ್ರ ಸು ಸ್ತೋಮಂ ಭರತ ವಾಜಯಂತ ಇಂದ್ರಾಯ ಸತ್ಯಂ ಯದಿ ಸತ್ಯಮಸ್ತಿ
ನೇಂದ್ರೋ ಅಸ್ತೀತಿ ನೇಮ ಉ ತ್ವ ಆಹ ಕ ಈಂ ದದರ್ಶ ಕಮಭಿಷ್ಟವಾಮ ?

ಋ ೮-೧೦೦-೩

ಈ ಮಂತ್ರದಲ್ಲಿ ಭೃಗುಪುತ್ರನಾದ ನೇಮುವು, 'ಇಂದ್ರನೆಂಬುವನು ಯಾರೂ ಇಲ್ಲ'-ಎಂದು ಉದ್ಗಾರತೆಗೆದಂತೆ ಕಂಡುಬರುತ್ತದೆ. ಒಂದು ವೇಳೆ ಇಂದ್ರನೆಂಬುವನು ಇದ್ದರೆ, ಅವನನ್ನು ಸ್ತೋತ್ರಮಾಡದೆ ಹೋಗುವುದರಿಂದ ತೊಂದರೆಯಾದೀತೆಂಬ ಭಯದಿಂದ, ಹೇಗಾದರೂ ಆಗಲಿ, ಅವನನ್ನು ಸ್ತೋತ್ರ ಮಾಡುವುದೇ ಒಳ್ಳೆಯದೆಂದು ಭಾವಿಸಿದಂತೆ ಕಾಣುತ್ತದೆ. ಆದರೂ ಇಂದ್ರನು ಇರುವುದನ್ನು ಕಂಡವರಾರು ?-ಎಂದು ಪ್ರಶ್ನಿಸದೇ ಹೋಗಿಲ್ಲ. ಹೀಗೆ ಇಂದ್ರನ ಅಸ್ತಿತ್ವವೇ ಪ್ರಶ್ನಿಸಲ್ಪಟ್ಟಾಗ ಉಳಿದ ದೇವತೆಗಳ ಪಾಡೇನು ? ಈ ದೇವತೆಗಳ ಅಸ್ತಿತ್ವದಲ್ಲಿ ನಂಬುಗೆ ಹೋಯಿತೆಂದ

---

ಅರ್ಥ: ಯದಿ = ಒಂದು ವೇಳೆ, ಸತ್ಯಂ = ನಿಜವಾಗಿಯೂ , ಅಸ್ತಿ = (ಇಂದ್ರನು) ಇದ್ದದ್ದೇ ಆದರೆ, ಇಂದ್ರಾಯ = ಇಂದ್ರನಿಗಾಗಿ, ಸತ್ಯಂ = ನಿಜವಾಗಿಯೂ, ಸ್ತೋಮಂ = ಸ್ತುತಿಯನ್ನು, ಸು = ಚನ್ನಾಗಿ, ಪ್ರಭರತ = ಅರ್ಪಿಸಿರಿ. ನೇಮ ಉ = (ಭೃಗಪುತ್ರನಾದ) ನೇಮುವಾದರೋ, ಇಂದ್ರಃ ತ್ವಃ =ಇಂದ್ರನೆಂಬುವನು ಯಾರೂ, ನ = ಇಲ್ಲವೆಂದು, ಆಹ = ಹೇಳಿದ್ದಾನೆ. ಕಃ = ಯಾರು. ಈಂ =ಈ ಇಂದ್ರನನ್ನು ದದರ್ಶ = ನೋಡಿದ್ದಾರೆ ? ಕಂ = ಯಾರನ್ನು ತಾನೆ ಅಭಿಷ್ಟವಾಮ = ನಾವು ಸ್ತುತಿಸೋಣ ?

ಸಾಯಣಭಾಷ್ಯಾಧಾರ :—ಇಂದ್ರಾಸ್ತಿತ್ವೇ ಕಃ ಸಂದೇಹಃ | ತತ್ರಾಹ, ನೇಮ ಉ ಭಾರ್ಗವೋ ಏವೇಂದ್ರೋ ನಾಮ ತ್ವಃ ಕಶ್ಚಿನ್ನಾಸ್ತೀತ್ಯಾಹ.

ಮಾತ್ರಕ್ಕೆ ಮಾನವನಿಗೆ ದೇವನೊಬ್ಬನ ಕಲ್ಪನೆಯೇ ಇಲ್ಲದೆ ನಡೆವುದೇನು? ಅನಿಷ್ಟ ನಿವೃತ್ತಿಗಾಗಿಯೂ, ಇಷ್ಟಪ್ರಾಪ್ತಿಗಾಗಿಯೂ ಪ್ರಾರ್ಥಿಸಲು ದೇವನೊಬ್ಬನು ಬೇಕೇ ಬೇಕಷ್ಟೆ. ಸಾಮಾನ್ಯವಾಗಿ ಕಂಡುಬಂದ ಇಂದ್ರಾದಿ ದೇವತೆಗಳಿಗೆಲ್ಲಾ ಕಾರಣನಾದ ದೇವನೊಬ್ಬನ ಕಲ್ಪನೆಯಾಯಿತು, ಆಗ "ತಾವಾ ಏತಾಃ ಪ್ರಜಾಪತೇರಧಿದೇವತಾಃ ಅಸೃಜಂತ ಅಗ್ನಿರಿಂದ್ರಃ ಸೋಮಃ" ಎಂದು ಶತಪಥಬ್ರಾಹ್ಮಣದಲ್ಲಿ ಹೇಳಿರುವುದರಿಂದ ಅಗ್ನಿ ಇಂದ್ರ ಸೋಮ ಮೊದಲಾದ ದೇವತೆಗಳನ್ನು ಹುಟ್ಟಿಸಿದವನು 'ಪ್ರಜಾಪತಿ' ಎಂಬ ಕಲ್ಪನೆಯುಂಟಾದುದು ಕಂಡುಬರುವುದು. ಸೃಷ್ಟಿಯಾದುದಕ್ಕೆಲ್ಲ ಪತಿಯಾದುದರಿಂದ 'ಪ್ರಜಾಪತಿ'-ಎಂಬ ಹೆಸರು ಸಾರ್ಥಕವಾಯಿತು. ಹಿರಣ್ಯದಂತೆ ಮನೋಹರವಾದ ಈ ಜಗತ್ತನ್ನು ಗರ್ಭದಲ್ಲಿಟ್ಟುಕೊಂಡಿದ್ದುದರಿಂದ ಅವನಿಗೆ 'ಹಿರಣ್ಯಗರ್ಭ'-ಎಂಬ ಹೆಸರು ಬಂದುದಾದರೂ ಸಾರ್ಥಕವೇ. ಇಂತಹ ಹಿರಣ್ಯಗರ್ಭ ಪ್ರಜಾಪತಿಯು ಇರುವನೆಂದಮೇಲೆ-ಇನ್ನು ಯಾವ ದೇವನಿಗೆ ಹವಿಸ್ಸನ್ನು ಕೊಡುವುದು?-ಎಂಬ ಪ್ರಶ್ನೆಗಳನ್ನೊಳಗೊಂಡ ಸೂಕ್ತವು ಋಗ್ವೇದದ ದಶಮಮಂಡಲದಲ್ಲಿ ೧೨೧ನೆಯದಾಗಿದೆ. ಅದರ ಮೊದಲನೆಯ ಮಂತ್ರವಿದು :

ಹಿರಣ್ಯಗರ್ಭಃ, ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ।
ಸ ದಾಧಾರ ಪೃಥಿವೀಂ ದ್ಯಾಮುತೇ ಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥

---

ಅರ್ಥ : ಹಿರಣ್ಯಗರ್ಭಃ = ಹಿರಣ್ಯಗರ್ಭನೆಂಬ ಪ್ರಜಾಪತಿಯು, ಅಗ್ರೇ = ಸೃಷ್ಟಿಪೂರ್ವದಲ್ಲಿ, ಏಕಃ = ಇನ್ನೊಬ್ಬನಿಲ್ಲದೆ ತಾನೊಬ್ಬನೆಯಾಗಿ, ಸಂ ಅವರ್ತತ = ತಾನೇತಾನಾಗಿದ್ದನು. ಜಾತಃ = ಹುಟ್ಟಿದಾಗಲೇ ಭೂತಸ್ಯ = ಸರ್ವಭೂತಗಳಿಗೂ, ಪತಿಃ ಆಸೀತ್ = ಸ್ವಾಮಿಯಾಗಿದ್ದನು. ಸಃ = ಅವನು, ಇಮಾಂ = ಈ, ಪೃಥಿವೀಂ = ಭೂಮಿಯನ್ನೂ, ಉತ = ಮತ್ತು, ದ್ಯಾಂ = ದ್ಯುಲೋಕವನ್ನೂ, ದಾಧಾರ = ಧರಿಸುತ್ತಾನೆ. ಕಸ್ಮೈ ದೇವಾಯ = ಯಾವ ದೇವನಿಗೆ ಹವಿಷಾ = ಹವಿಸ್ಸಿನಿಂದ ವಿಧೇಮ = ಉಪಚಾರ ಮಾಡೋಣ?

ಸಾಯಣಭಾಷ್ಯಾಧಾರ : ಹಿರಣ್ಯಗರ್ಭೋ ಹಿರಣ್ಯಮಯಸ್ಯಾಂಡಸ್ಯ ಗರ್ಭಭೂತಃ ಪ್ರಜಾಪತಿಃ.

ಅಗ್ರೇ, ಪ್ರಪಂಚೋತ್ಪತ್ತೇಃ ಪ್ರಾಕ್

## ಐಹಿಕಭೋಗಸಾಧನೆಯಿಂದ ಮೋಕ್ಷಸಾಧನೆಯ ಕಡೆಗೆ ಪ್ರಗತಿ

ಆಧಿಭೌತಿಕ ಶಕ್ತಿಗಳಿಗೆ ಆಧಿದೈವಿಕ ಭಾವನೆಯಿಂದ ಇಷ್ಟಪ್ರಾಪ್ತಿ, ಅನಿಷ್ಟ ನಿವೃತ್ತಿಗಳಿಗಾಗಿ ಹವಿಸ್ಸನ್ನು ಅರ್ಪಿಸುತ್ತಿದ್ದ ಪದ್ಧತಿಗಿಂತ ದೇವನೊಬ್ಬ ನಾಮ ಹಲವು ಎಂಬ ಭಾವನೆ ಬೆಳೆದು ಬಹು ದೇವತೋಪಾಸನೆಯಿಂದ ಏಕ ದೇವತೋಪಾಸನೆಯ ಪದ್ಧತಿಯ ಕಡೆಗೆ ಸಾಗಿದುದು ಪ್ರಗತಿಯೆಂದೇ ಹೇಳಬೇಕು.

ಈ ಮೊದಲು ಇಂದ್ರಾದಿದೇವತೆಗಳನ್ನು ಹವಿಸ್ಸಿನಿಂದ ತೃಪ್ತಿಪಡಿಸಿ ತಮಗೆ ಬೇಕಾದ ಐಹಿಕ ಫಲಗಳನ್ನು ಪಡೆಯುವ ಪ್ರಯತ್ನವು ರೂಢಿಯಲ್ಲಿದ್ದಿತಷ್ಟೆ. ಸೋಮರಸಪ್ರಿಯನಾದ ಇಂದ್ರನಿಗೆ ಯಥೇಚ್ಛೆಯಾಗಿ ಸೋಮಪಾನ ಮಾಡಿಸಿ ಅವನಿಂದ ಧನವನ್ನು ಪಡೆದುಕೊಳ್ಳುವ ಪ್ರಯತ್ನವನ್ನು ಈ ಋಗ್ವೇದ ಮಂತ್ರದಲ್ಲಿ ಕಾಣಬಹುದು.

ತುಭ್ಯೇದೇತೇ ಬಹುಲಾ ಅದ್ರಿದುಗ್ಧಾಶ್ಚ ಮೂಷದಶ್ಚಮಸಾ ಇಂದ್ರಪಾನಾಃ ।
ವ್ಯಶ್ನುಹಿ ತರ್ಪಯಾ ಕಾಮಮೇಷಾಮಥಾ ಮನೋ ವಸುದೇಯಾಯ ಕೃಷ್ವ ॥

ಋ ೧-೫೪-೯

---

ಅರ್ಥ : ತುಭ್ಯಃ = (ಎಲೈ ಇಂದ್ರನೇ) ನಿನಗಾಗಿಯೇ, ಅದ್ರಿದುಗ್ಧಾಃ = ಕಲ್ಲುಗಳಿಂದ ಹಿಂಡಲ್ಪಟ್ಟಿರುವ, ಚಮೂಷದಃ= ಸೌಟುಗಳಲ್ಲಿರುವ, ಇಂದ್ರಪಾನಾಃ= ಇಂದ್ರನು ಕುಡಿಯಲು ಅರ್ಹವಾದ, ಬಹುಲಾಃ= ಅಧಿಕವಾಗಿರುವ ಏತೇಚಮಸಾಃ= ಈ ಸೋಮರಸಗಳು (ಸಿದ್ಧವಾಗಿವೆ.) ವ್ಯಶ್ನುಹಿ= ನೀನು ಅವನ್ನು ಚೆನ್ನಾಗಿ ಕುಡಿ, ಮತ್ತು ಏಷಾಂಕಾಮಂ= ನಿನ್ನ ಇಂದ್ರಿಯಗಳ ಕಾಮವನ್ನು, ತರ್ಪಯ= ತೃಪ್ತಿಪಡಿಸು. ಅಥಃ =ಅನಂತರ, ವಸುದೇಯಾಯ ನಮಗೆ ದ್ರವ್ಯವನ್ನು ಅನುಗ್ರಹಿಸಲು, ಮನಃಕೃಷ್ವ = ಮನಸ್ಸುಮಾಡು.

ಸಾಯಣಭಾಷ್ಯಾಧಾರ : ಏಷಾಂ ತ್ವದೀಯಾನಾಮಿಂದ್ರಿಯಾಣಾಂ, ಕಾಮಮಭಿಲಾಷಂ ತೈಸ್ತರ್ಪಯ ಪೂರಯೇತಿಯಾವತ್. ಅಥಾನಂತರಂ ವಸುದೇಯಾಯ ಅಸ್ಮಭ್ಯಮಿತ ಧನಪ್ರದಾನಾಯ ತ್ವದೀಯಂ ಮನಃ ಕೃಷ್ವ ಕುರುಷ್ವ.

ಇಂದ್ರಾದಿ ನಾನಾ ದೇವತೆಗಳನ್ನು ಐಹಿಕ ಸುಖಸಾಧನೆಗಾಗಿ, ಹವಿಸ್ಸಿನಿಂದ ತೃಪ್ತಿ ಪಡಿಸುತ್ತಿದ್ದಂತೆಯೇ, ಏಕ ದೇವೋಪಾಸನೆಯು ಪ್ರಾರಂಭವಾದವೇಲೂ ಏಕದೇವನಾದ ಪ್ರಜಾಪತಿಯನ್ನಾದರೂ ಹವಿಸ್ಸಿನಿಂದಲೇ ತೃಪ್ತಿಪಡಿಸಿ ಐಹಿಕಸುಖಸಾಧನವಾದ ಧನವನ್ನೂ ಬೇಡುತ್ತಿದ್ದುದು ಕೆಳಗಿನ ಮಂತ್ರದಿಂದ ತಿಳಿದು ಬರುವುದು.

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾಜಾತಾನಿ ಪರಿ ತಾ ಬಭೂವ
ಯತ್ ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ
ರಯೀಣಾಂ (ಋ ೧೦-೧೨೧-೧೦)

ತಾವು ಅರ್ಪಿಸುತ್ತಿದ್ದ ಹವಿಸ್ಸಿಗೆ ಬದಲಾಗಿ, ಅಶಾಶ್ವತವಾದ ಭೋಗಗಳನ್ನು ಪಡೆಯಲು, ಮೊದಲು ಮೊದಲು ಇಂದ್ರಾದಿ ದೇವತೆಗಳನ್ನೂ ತದನಂತರ ಆ ಎಲ್ಲ ದೇವತೆಗಳಿಗೂ ಕಾರಣವಾದ ಪ್ರಜಾಪತಿಹಿರಣ್ಯಗರ್ಭನನ್ನೂ ಪ್ರಾರ್ಥಿಸುತ್ತಿದ್ದುದರಲ್ಲಿ ತೃಪ್ತರಾಗದೆ, ಆರ್ಯ ಋಷಿಗಳು ಶಾಶ್ವತವಾದ ಮೋಕ್ಷ ಸುಖವನ್ನು ಕೊಡಬೇಕೆಂದು ಪ್ರಾರ್ಥಿಸುವ ಕಾಲವೂ ಬಂದಿತು. ಈ ಜಗತ್ತನ್ನು ಸೃಷ್ಟಿಸುವವನು ಬ್ರಹ್ಮನಾದರೆ ರಕ್ಷಿಸುವನು ವಿಷ್ಣುವು ಮತ್ತು ಪ್ರಲಯಕಾಲದಲ್ಲಿ ಇದನ್ನು ಲಯಗೊಳಿಸುವವನು ರುದ್ರನಷ್ಟೆ. ಈ ತ್ರಿಮೂರ್ತಿಗಳು ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣರಾದರೂ ಅಂತಹ ಸೃಷ್ಟಿ

---

ಅರ್ಥ : ಪ್ರಜಾಪತೇ= ಪ್ರಜಾಪತಿಯೇ, ತ್ವತ್= ನಿನ್ನಿಂದ ಹೊರತು, ಅನ್ಯಃ= ಮತ್ತೊಬ್ಬರು ಯಾರೂ, ಏತಾನಿ ವಿಶ್ವಾ ಜಾತಾನಿ= ಹುಟ್ಟಿದವೆಲ್ಲ ಯಾವವಿರುವವೋ, ತಾ= ಅವುಗಳನ್ನೂ, ನಪರಿಬಭೂವ= ಸೃಷ್ಟಿಸಲು ಶಕ್ತನಲ್ಲ. ಯತ್ ಕಾಮಃ= ನಾವು ಯಾವ ಕಾಮನೆಗಳನ್ನು ಬಯಸುತ್ತ, ತೇ= ನಿನಗೆ ಜುಹುಮಃ, = ಹವಿರಾದಿಗಳನ್ನು ಅರ್ಪಿಸುವೆವೋ, ತತ್= ಆಕಾಮನೆಗಳು, ನಃ ಅಸ್ತು= ನಮಗೆ ಉಂಟಾಗಲಿ, ವಯಂಚ= ನಾವೂಸಹಾ, ರಯೀಣಾಂ= ಧನಗಳಿಗೆ, ಪತಯಃಸ್ಯಾಮ= ಒಡೆಯರಾಗಲಿ.

ಸಾಯಣಭಾಷ್ಯಾಧಾರ: ವಯಂಚ ಯತ್ ಕಾಮಾಯತ್ ಫಲಂ ಕಾಮಯಮಾನಾಸ್ತೇ ತುಭ್ಯಂ ಜುಹುಮಃ ಹವೀಂಷಿ ಪ್ರಯಚ್ಛಾಮಃ ತತ್ಫಲಂನೋಽಸ್ಮಾಕಮಸ್ತು, ಭವತು.

ಸ್ಥಿತಿ ಲಯಗಳಿಗೆ ಬಳಗಾಗದ ಅಮರತ್ವವನ್ನು ಕೊಡಲು ಅವರು ಶಕ್ತರಲ್ಲ ವಾಗಿ, ಅಂತಹ ತ್ರಿಮೂರ್ತಿಗಳಿಗೂ ಜನ್ಮದಾಯಕನಾದ ತ್ರ್ಯಂಬಕಶಿವನ ಭಾವನೆಯು ಉಂಟಾಯಿತು. ಅಂತಹ ಪರಶಿವಬ್ರಹ್ಮನನ್ನು, ಶಾಶ್ವತ ಮೋಕ್ಷ ಪ್ರದಾನ ಮಾಡುವಂತೆ ಆರ್ಯ ಋಷಿಗಳು ಪ್ರಾರ್ಥಿಸಿದುದನ್ನು ಋಗ್ವೇದ ಮಂತ್ರವಿದರಲ್ಲಿ ಕಾಣುವೆವು :

ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥

ಈ ಮಂತ್ರದ ಸಾಯಣ ಭಾಷ್ಯದಲ್ಲಿ ತ್ರ್ಯಂಬಕನೆಂದರೆ ಬ್ರಹ್ಮ ವಿಷ್ಣು ರುದ್ರರೆಂಬ ತ್ರಿಮೂರ್ತಿಗಳಿಗೂ ಜನಕನೆಂದು ಹೇಳಿರುವುದು ಗಮನಾರ್ಹ ವಾಗಿದೆ. ಇಲ್ಲಿ ಮೃತ್ಯುವೆಂಬುದು ಒಂದು ಬಂಧನವೆಂದು ಹೇಳಿದೆ; ಮೃತ್ಯುವೆಂಬ ಪದವು ಇಲ್ಲಿ ಜನನ ಮರಣಗಳಿಗೆ ಕಾರಣವಾದ ಸಂಸಾರ ವೆಂಬ ಬಂಧನವನ್ನು ಸೂಚಿಸುತ್ತದೆ. ಆ ಬಂಧನದಿಂದ ಮೋಕ್ಷವನ್ನು ಎಂದರೆ ಬಿಡುಗಡೆಯನ್ನು ಹೊಂದುವುದಕ್ಕಾಗಿ ಆರ್ಯಋಷಿಯ ಪ್ರಾರ್ಥ ನೆಯು ಈ ಮಂತ್ರದಲ್ಲಿ ಕಂಡುಬರುವುದು. ಬಿಡುಗಡೆಯನ್ನು ಹೊಂದು ವುದು ಬಲವಂತದಿಂದ ಜೀವನದ ಮಧ್ಯದಲ್ಲಿ ಅಲ್ಲ; ಜೀವನ ನಡೆಸುವುದರಲ್ಲಿ ಬೇಸರವಿಲ್ಲ; ಹಣ್ಣು ಸಕಾಲದಲ್ಲಿ ತೊಟ್ಟುಕಳಚಿಬೀಳುವಂತೆ ಸಂಸಾರ

---

ಅರ್ಥ : ಸುಗಂಧಿಂ = 'ಪ್ರಸಾರಿತ ಪುಣ್ಯಕೀರ್ತಿರೂಪ' ಸುಗಂಧವುಳ್ಳವನೂ, ಪುಷ್ಟಿವರ್ಧನಂ = ಜಗತ್ ಪುಷ್ಟಿಯನ್ನು ಹೆಚ್ಚಿಸುವವನೂ ಆದ, ತ್ರ್ಯಂಬಕಂ = ತ್ರಿಮೂರ್ತಿಗಳಿಗೂ ಜನ್ಮದಾಯಕನಾದ ಪರಶಿವತತ್ತ್ವ ವನ್ನು, ಯಜಾಮಹೇ = ಪೂಜಿಸುತ್ತೇವೆ. ಬಂಧನಾತ್ = ತೊಟ್ಟಿನ ಬಂಧನದಿಂದ, ಉರ್ವಾರುಕಮಿವ = ಉರ್ವಾರುಕ ಫಲವು ಕಳಚಿಬೀಳುವ ಹಾಗೆ, ಮೃತ್ಯೋಃ ಬಂಧನಾತ್ = ಮರಣ ಧರ್ಮವುಳ್ಳ ಸಂಸಾರ ಬಂಧನ ದಿಂದ, ಮುಕ್ಷೀಯ = ಬಿಡುಗಡೆ ಹೊಂದುವಂತಾಗಲಿ; ಮಾಮೃತಾತ್ = ಅಮರತ್ವದಿಂದ ದೂರವಾಗದಿರಲಿ.

ಸಾಯಣಭಾಷ್ಯಾಧಾರ : ತ್ರ್ಯಂಬಕಂ—ತ್ರಯಾಣಾಂ ಬ್ರಹ್ಮವಿಷ್ಣು ರುದ್ರಾಣಾಂ ಪಿತರಂ.

ದಲ್ಲಿ ಬೆಳೆದು ಬದುಕಿ ಹಣ್ಣಾದ ಮೇಲೆ ಆದರಿಂದ ಬಿಡುಗಡೆ ಹೊಂದ ಬೇಕೆಂಬ ಭಾವ ಸುಂದರವಾಗಿದೆ. ಬಿಡುಗಡೆಹೊಂದುವುದು ಕಾಯನ್ನು ಬಲವಂತದಿಂದ ಕಿತ್ತು ವತ್ತಿಹಾಕಿ ಬಲವಂತದಿಂದ ಹಣ್ಣುಮಾಡಿದಂತಲ್ಲ. ಜೀವಾತ್ಮವು ಸಂಸಾರ ವೃಕ್ಷದ ರಸವನ್ನು ಹೀರಿ ಹೂವಾಗಿ ಹೊರಬಂದು ಮಿಡಿಯಾಗಿ ಹಿಡಿಗಾಯಾಗಿ ಬಲಿತು ಬಣ್ಣವೇರಿ, ಸುಖದುಃಖವೆಂಬ ಮಳೆ ಬಿಸಿಲಿಗೆ ಸಿಲುಕಿ, ಬಿನ್ನಾಣದ ಬಿಗುಹು ಬಯಲಾಗಿ ಪಕ್ವವಾಗಿ ಸುಮಧುರ ಶಾಂತಿರಸದಿಂದ ಪರಿಪೂರ್ಣವಾಗಿ, ತನ್ನನ್ನು ಬಂಧಿಸಿರುವ ಮೋಹವೆಂಬ ತೊಟ್ಟು ತಾನೇತಾನಾಗಿ ಕಳಚಿ ಹೋಗಲು, ಜನನ ಮರಣ ರೂಪವಾದ ಸಂಸಾರ ವೃಕ್ಷದಿಂದ ಬಿಡುಗಡೆ ಹೊಂದಿ ಪರಶಿವಬ್ರಹ್ಮಕ್ಕೆ ಅರ್ಪಣವಾಗಲು ಅರ್ಹವಾಗುವುದು-ಎಂಬುದು ಈ ಮಂತ್ರದ ಅಭಿಪ್ರಾಯ.

ಈ ಮಂತ್ರದಲ್ಲಿರುವ 'ಮೃತ್ಯು' ಮತ್ತು 'ಅಮೃತ' ಎಂಬ ಪದಗಳು ಗಮನಾರ್ಹವಾದುವು. ಏಕೆಂದರೆ ಇದೇ ಅರ್ಥದಲ್ಲಿಯೇ ಈ ಪದಗಳ ಜೋಡಿಯು ಈಶಾವಾಸ್ಯೋಪನಿಷತ್ತಿನಲ್ಲಿ ಉಪಯೋಗವಾಗಿದೆ.

ವಿದ್ಯಾಂಚಾವಿದ್ಯಾಂ ಚ ಯಸ್ತದ್ ವೇದೋಭಯಂ ಸಹ।
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ॥

"ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀಜಠರೇಶಯನಂ" ಎನ್ನುವಂತೆ ಜನನ ಮರಣಗಳಿಗೊಳಗಾಗಿಸುವ ಮರ್ತ್ಯಜೀವನರೂಪಸಂಸಾರ ದ್ಯೋತಕವಾದುದು 'ಮೃತ್ಯು' ಎಂಬ ಪದವು. ಪುನರ್ಜನ್ಮವನ್ನುಂಟು

---

ಅರ್ಥ: ಯಃ= ಯಾರು ವಿದ್ಯಾಂಚಾವಿದ್ಯಾಂ ಚ= ವಿದ್ಯಾವಿದ್ಯೆಗಳೆಂಬ. ತತ್ ಉಭಯಂ ಸಹ= ಆ ಎರಡನ್ನೂ ಸಹ, ವೇದ= ತಿಳಿಯುತ್ತಾನೆಯೋ ಅವನು, ಅವಿದ್ಯಯಾ= ಅವಿದ್ಯೆಯ ಮೂಲಕ, ಮೃತ್ಯುಂ= ಮರಣದ್ಯೋತಕ ವಾದ ಭವಸಂಸಾರವನ್ನು ತೀರ್ತ್ವಾ= ದಾಟಿ, ವಿದ್ಯಯಾ= ವಿದ್ಯೆಯಿಂದ ಅಮೃತಂ= ಅಮರತ್ವವನ್ನು ಅಶ್ನುತೇ= ಹೊಂದುತ್ತಾನೆ. ವಿದ್ಯೆಯೆಂದರೆ ಅರಿವು, ಪರಮಾತ್ಮ ವಿಷಯಕ ಜ್ಞಾನ; ಅವಿದ್ಯೆಯೆಂದರೆ ಕರ್ಮ, ಅರಿವಿಗನು ಸಾರವಾದ ಆಚಾರ.

ಶಾಂಕರಭಾಷ್ಯ: ಅವಿದ್ಯಾಂ-ವಿದ್ಯಾಯಾ ಅನ್ಯಾ ಅವಿದ್ಯಾ, ಕರ್ಮೇತ್ಯರ್ಥಃ

ಮಾಡುವ ಭವಸಂಸಾರರೂಪವಮೃತ್ಯುವನ್ನು ಗೆದ್ದಾಗ ಮರಣವೇ ಇಲ್ಲದ 'ಅಮೃತ' ಸ್ಥಿತಿಯನ್ನು ಪಡೆಯಲು ಸಾಧ್ಯವಾಗುವುದು. ವಿದ್ಯೆಯೆಂದರೆ ಜ್ಞಾನ; ಅವಿದ್ಯೆಯೆಂದರೆ ಕರ್ಮ. ಜ್ಞಾನಕರ್ಮಗಳೆರಡನ್ನೂ ಬಲ್ಲವರು, ಕರ್ಮ(ಅವಿದ್ಯೆ)ದಿಂದ ಮೃತ್ಯು ಎಂದರೆ ಮರ್ತ್ಯಲೋಕವನ್ನು ಕಡೆಹಾಯ್ದು ವಿದ್ಯೆ ಎಂದರೆ ಜ್ಞಾನದಿಂದ ಅಮರತ್ವವನ್ನು ಪಡೆಯುವರೆಂಬುದು ಈ ಶಾವಾಸ್ಯೋಪನಿಷತ್ತಿನ ಈ ಮಂತ್ರದ ಅಭಿಪ್ರಾಯ.

ಶಿವಶರಣರ ಮಾತಿನಲ್ಲಿ ವಿದ್ಯೆ ಅಥವಾ ಜ್ಞಾನವೆಂಬುದೇ ಅರಿವು. 'ಅವಿದ್ಯೆ' ಅಥವ 'ಕರ್ಮ' ಎಂಬುದೇ ಕ್ರಿಯೆ ಅಥವಾ ಆಚಾರ. ಮುಮುಕ್ಷುವಿಗೆ ಅರಿವೂಬೇಕು ಅರಿವಿಗನುಸಾರವಾದ ಆಚಾರವೂಬೇಕು. ಆದುದರಿಂದಲೇ ಚನ್ನಬಸವೇಶ್ವರರು "ಅರಿವು-ಆಚಾರವುಳ್ಳಡೆ ಜಂಗಮ" ಎಂದು ಹೇಳಿರುವುದು. ಈ ಅಭಿಪ್ರಾಯವನ್ನೇ ಅವರು ಈ ಕೆಳಗಿನ ವಚನದಲ್ಲಿ ಚೆನ್ನಾಗಿ ಸ್ಪಷ್ಟಗೊಳಿಸಿದ್ದಾರೆ.

> "ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ. ಜ್ಞಾನವೆಂದರೆ ತಿಳಿಯುವುದು, ಕ್ರಿಯೆಯೆಂದರೆ ತಿಳಿದಂತೆ ಮಾಡುವುದು. ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ; ಅದರಂತೆ ಆಚರಿಸುವುದೇ ಕ್ರಿಯೆ."

ಈ ವಿಷಯವನ್ನೇ ಈಶಾವಸ್ಯೋಪನಿಷತ್ತಿನ ಮೊದಲನೆಯ ಮಂತ್ರದಿಂದ ವಿವರಿಸಬಹುದು. 'ಈಶಾವಾಸ್ಯಮಿದಗ್ಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್' ಎಂದು ಈ ಉಪನಿಷತ್ತಿನ ಮೊದಲನೆಯ ಮಂತ್ರದಲ್ಲಿ ಹೇಳಿರುವುದರಲ್ಲಿಯೂ 'ಎತ್ತೆತ್ತ ನೋಡಿದೊಡತ್ತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಹು ನೀನೇ ದೇವಾ' ಎಂದು ಮೊದಲಾಗಿ ಹೇಳುವ ವಚನದಲ್ಲಿಯೂ ವ್ಯಕ್ತವಾಗುವ ಅಭಿಪ್ರಾಯವು ಒಂದೇ. ಅಣು-ರೇಣು-ತೃಣ-ಕಾಷ್ಠವೆಲ್ಲದರಲ್ಲಿಯೂ ಪರಮಾತ್ಮನು ವ್ಯಾಪಿಸಿರುವನೆಂಬುದು ಅರಿವು. 'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ' ಎಂಬ ವಚನ ಭಾಗದಂತೆ ಎಲ್ಲವೂ ಪರಮಾತ್ಮನಿಂದ ನಮಗೆ ದತ್ತವಾದುದುದು ಎಂಬಂತಹ ಅರಿವನ್ನು ಅರಿದ

ವನ ಆಚರಣೆ ಹೇಗಿರಬೇಕು? ಈಶಾವಾಸ್ಯದಲ್ಲಿ "ತೇನತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಸ್ವಿದ್ಧನಂ" ಎಂದು ಹೇಳಿದಂತೆ-ಎಲ್ಲವೂ ಪರಮಾತ್ಮ ಪ್ರಸಾದವೆಂಬ ಭಾವನೆಯಿಂದ ಅನುಭವಿಸಬೇಕು, ಪರಧನಕ್ಕೆ ಆಸೆಪಡಬಾರದು-ಎಂಬುದು ಅರಿವಿಗೆ ತಕ್ಕಂತಹ ಆಚಾರ; ಇಂತಹ ಜ್ಞಾನಕರ್ಮ ಸಮುಚ್ಚಯದಿಂದ ಮೋಕ್ಷವಾಗುವುದು ಎಂದು ಭಾವ.

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ ।
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥

ಕ್ರಿಯಾವಂತನಾಗಿಯೇ ನೂರು ವರ್ಷ ಬಾಳಲಿಚ್ಛಿಸಬೇಕೇ ಹೊರತು ಬೇರೆಯ ಮಾರ್ಗವೇ ಇಲ್ಲ; ಆದರೆ ಕ್ರಿಯೆಯು ಅಂಟದಂತಿರಬೇಕೆಂದು ಈಶಾವಾಸ್ಯ ಉಪನಿಷತ್ತಿನ ಎರಡನೆಯ ಮಂತ್ರವು ಹೇಳುತ್ತದೆ. ತಾನು-ತನ್ನದು ಎಂಬ ಭಾವವನ್ನು ಬಿಟ್ಟು ಎಲ್ಲವನ್ನೂ ಈಶ್ವರಾರ್ಪಣ ಬುದ್ಧಿಯಿಂದ ಮಾಡುವುದರಿಂದ ಕರ್ಮಲೇಪನವಾಗುವುದಿಲ್ಲ. ಆಗ ಅರಿವು ಆಚಾರದಲ್ಲಿ ಸಮನ್ವಯವಾಗುತ್ತದೆ. ಆ ಚಾ ರ ದಿಂ ದ ಇಹಲೋಕ ಯಾತ್ರೆಯು ಸುಗಮವಾಗಿ, "ಅವಿದ್ಯಾಯಾ ಮೃತ್ಯುಂ ತೀರ್ತ್ವಾ" ಎಂಬಂತೆ ಸಂಸಾರ ಸಾಗರವನ್ನು ದಾಟಲು ಸಾಧ್ಯವಾಗುತ್ತದೆ ಮತ್ತು "ವಿದ್ಯಾಯಾಽಮೃತಮಶ್ನುತೇ" ಎಂಬಂತೆ ಅರಿವಿನಿಂದ ಅಮರನಾಗಲು ಸಾಧ್ಯವಾಗುತ್ತದೆ ಅಥವಾ "ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್" ಎಂಬ ಋಗ್ವೇದೋಕ್ತಿಯು ಸಾರ್ಥಕವಾಗುತ್ತದೆ.

ಒಟ್ಟಿನಲ್ಲಿ ಪರಶಿವದ್ಯೋತಕವಾದ 'ಈಶ' ಎಂಬ ಪದದಿಂದ ಪ್ರಾರಂಭವಾಗುವ ಈಶಾವಾಸ್ಯೋಪನಿಷತ್ತಿನಲ್ಲಿ ತ್ರ್ಯಂಬಕೋಪಾಸ

---

ಅರ್ಥ : ಇಹ = ಈ ಜಗತ್ತಿನಲ್ಲಿ, ಕರ್ಮಾಣಿಏವ = (ನಿಷ್ಕಾಮ) ಕರ್ಮಗಳನ್ನೇ ಅವಶ್ಯವಾಗಿ, ಕುರ್ವನ್ = ಮಾಡುತ್ತ, ಶತಂ ಸಮಾಃ = ನೂರುವರ್ಷಗಳ ವರೆಗೂ, ಜಿಜೀವಿಷೇತ್ = ಜೀವಿಸಲಿಚ್ಛಿಸಬೇಕು, ಇತಃ = ಇದಲ್ಲದೆ ಅನ್ಯಥಾ = ಬೇರೆ ಮಾರ್ಗವು, ನಾಸ್ತಿ = ಇಲ್ಲ, ಏವಂ = ಹೀಗೆ ಮಾಡು ತ್ವಯಿ ನರೇ =ನಿನ್ನಂತಹ ಮನುಷ್ಯನಲ್ಲಿ, ಕರ್ಮ = ಕರ್ಮವು, ನಲಿಪ್ಯತೇ = ಅಂಟಿಕೊಳ್ಳುವುದಿಲ್ಲ.

ಯಿಂದ ಸಂಸಾರರೂಪವಾದ ಬಂಧನವು ಅಳಿದು ಜೀವನ್ಮುಕ್ತಿರೂಪವು ಪ್ರಾಪ್ತಿಯಾಗುವುದೆಂದು ಹೇಳುವ ಋಗ್ವೇದ ಮಂತ್ರದ ವಿವರಣೆಯು ಇದೇ ಎನ್ನಬಹುದು. ಇದೇ ವಿಷಯವೇ ಶಿವಶರಣರ ವಚನಗಳಲ್ಲಿ ವಿಸ್ತಾರ ಗೊಂಡಿದೆ. ಮೃತ್ಯು ಬಂಧನವನ್ನುಳ್ಳ ಈ ಮರ್ತ್ಯ ಜೀವನದಿಂದ ಬಿಡುಗಡೆ ಹೊಂದುವ ಮೊದಲು ಕಾಯಾಗಿ ತೊಟ್ಟಿನ ಬಂಧನದಲ್ಲಿದ್ದುದು ಹಣ್ಣಾದ ಮೇಲೆ ತೊಟ್ಟಿನ ಬಂಧನದಿಂದ ತಾನೆತಾನೆಯಾಗಿ ಕಳಚಿಕೊಳ್ಳುವ ರೀತಿಯಲ್ಲಿ ಮರ್ತ್ಯಲೋಕದ ಬಂಧನದಲ್ಲಿ ಕಾಯಂತೆ ಕಠಿಣವಾಗಿದ್ದವನು ಹಣ್ಣಿನಂತೆ ಮೃದುವಾಗಬೇಕಷ್ಟೆ. ಹೀಗೆ ಶಿವಾರ್ಪಣಕ್ಕೆ ಅರ್ಹನಲ್ಲದ ನರನು ಶಿವಾರ್ಪಣಕ್ಕೆ ಅರ್ಹನಾಗಿ ಅರ್ಪಿಸಿಕೊಂಡು ಶಿವನೇ ಆಗಿಹೋಗುವುದು ಮರ್ತ್ಯ ಜೀವನದಲ್ಲಿ ಹೇಗೆ ಸಾಧ್ಯವೆಂಬುದು ಬಸವೇಶ್ವರ ವಚನವಿದರಿಂದ ತಿಳಿದು ಬರುತ್ತದೆ:

**ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ**
**ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು; ಇಲ್ಲಿ ಸಲ್ಲದವರು**
**ಅಲ್ಲಿಯೂ ಸಲ್ಲರು, ಕೂಡಲ ಸಂಗಮದೇವಾ.**

ನಮ್ಮನ್ನು ಸೃಜಿಸಿದ ಸೃಷ್ಟಿಕರ್ತನೇ ಮರ್ತ್ಯವೆಂಬ ಕಾರ್ಯಾಗಾರವನ್ನು ಸೃಜಿಸಿದನು. ನಮ್ಮನ್ನು ಸೃಜಿಸಿದಂತೆ ಅದನ್ನೂ ಸೃಜಿಸಲು ಕಾರಣವಿರ ಬೇಕು. ಕಾರ್ಯಾಗಾರದಲ್ಲಿ ಕಬ್ಬಿಣವನ್ನು ಕಾಯಿಸಿ ನೀರಿನಲ್ಲಿ ಅದ್ದಿ ಉಕ್ಕನ್ನು ಮಾಡುವರು. ಹಾಗೆಯೇ ಕಷ್ಟವೆಂಬ ಕುಲುಮೆಯಲ್ಲಿ ಜೀವನು ಬೆಂದು ಸುಖವೆಂಬ ತಣ್ಣೀರಿನಲ್ಲಿ ಅದ್ದಲ್ಪಟ್ಟಾಗ ಉಕ್ಕಾಗುವನು; ಸವರನ್ನಂತೆ ಇದ್ದವನು ಅಪರಂಜಿಯಾಗುವನು. ಲೋಹದ ತುಂಡು ಟಂಕಸಾಲೆಯಲ್ಲಿ ನಾಣ್ಯವಾಗಿ ಅಲ್ಲಿ ಸಲ್ಲುವುದಾದರೆ, ಟಂಕಸಾಲೆಯಿಂದ ಹೊರಗೆ ಬಂದಾಗಲೂ ಸಲ್ಲುವುದು. ಹಾಗೆ ಸಲ್ಲುವ ನಾಣ್ಯವಾಗುವ ಮೊದಲು, ಅದು ಕಷ್ಟಕಾರ್ಪಣ್ಯಗಳಿಗೆ ಒಳಗಾಗದೆ ನಾಣ್ಯವಾಗುವುದಿಲ್ಲ. ಅಷ್ಟಾವಕ್ರವಾಗಿದ್ದ ಲೋಹದ ಅದಿರು ಕಾದು ಕರಗಿ ನೀರಾಗಿ ಶುದ್ಧವಾಗಿ ಯಂತ್ರದಲ್ಲಿ ಸುಂದರ ನಾಣ್ಯವಾಗಿ ಹೊರಬೀಳುವುದು. ಮಲತ್ರಯದಿಂದ ಅಶುದ್ಧವಾದ ಮಾನವನು ನಿರ್ಮಲನಾಗುವುದು, ಮರ್ತ್ಯಲೋಕವೆಂಬ ಕಾರ್ಯಾಗಾರದ ಕುಲುಮೆ

ವನ ಆಚರಣೆ ಹೇಗಿರಬೇಕು? ಈಶಾವಾಸ್ಯದಲ್ಲಿ "ತೇನತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಸ್ವಿದ್ಧನಂ" ಎಂದು ಹೇಳಿದಂತೆ-ಎಲ್ಲವೂ ಪರಮಾತ್ಮ ಪ್ರಸಾದವೆಂಬ ಭಾವನೆಯಿಂದ ಅನುಭವಿಸಬೇಕು, ಪರಧನಕ್ಕೆ ಆಸೆಪಡಬಾರದು-ಎಂಬುದು ಅರಿವಿಗೆ ತಕ್ಕಂತಹ ಆಚಾರ; ಇಂತಹ ಜ್ಞಾನಕರ್ಮ ಸಮುಚ್ಚಯದಿಂದ ಮೋಕ್ಷವಾಗುವುದು ಎಂದು ಭಾವ.

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ ।
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥

ಕ್ರಿಯಾವಂತನಾಗಿಯೇ ನೂರು ವರ್ಷ ಬಾಳಲಿಚ್ಛಿಸಬೇಕೇ ಹೊರತು ಬೇರೆಯ ಮಾರ್ಗವೇ ಇಲ್ಲ; ಆದರೆ ಕ್ರಿಯೆಯು ಅಂಟದಂತಿರಬೇಕೆಂದೂ ಈಶಾವಾಸ್ಯ ಉಪನಿಷತ್ತಿನ ಎರಡನೆಯ ಮಂತ್ರವು ಹೇಳುತ್ತದೆ. ತಾನು-ತನ್ನದು ಎಂಬ ಭಾವವನ್ನು ಬಿಟ್ಟು ಎಲ್ಲವನ್ನೂ ಈಶ್ವರಾರ್ಪಣ ಬುದ್ಧಿಯಿಂದ ಮಾಡುವುದರಿಂದ ಕರ್ಮಲೇಪನವಾಗುವುದಿಲ್ಲ. ಆಗ ಅರಿವು ಆಚಾರದಲ್ಲಿ ಸಮನ್ವಯವಾಗುತ್ತದೆ. ಆಚಾರದಿಂದ ಇಹಲೋಕ ಯಾತ್ರೆಯು ಸುಗಮವಾಗಿ, "ಅವಿದ್ಯಾಯಾ ಮೃತ್ಯುಂ ತೀರ್ತ್ವಾ" ಎಂಬಂತೆ ಸಂಸಾರ ಸಾಗರವನ್ನು ದಾಟಲು ಸಾಧ್ಯವಾಗುತ್ತದೆ ಮತ್ತು "ವಿದ್ಯಾಯಾಽಮೃತಮಶ್ನುತೇ" ಎಂಬಂತೆ ಅರಿವಿನಿಂದ ಅಮರನಾಗಲು ಸಾಧ್ಯವಾಗುತ್ತದೆ ಅಥವಾ "ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್" ಎಂಬ ಋಗ್ವೇದೋಕ್ತಿಯು ಸಾರ್ಥಕವಾಗುತ್ತದೆ.

ಒಟ್ಟಿನಲ್ಲಿ ಪರಶಿವದ್ಯೋತಕವಾದ 'ಈಶ' ಎಂಬ ಪದದಿಂದ ಪ್ರಾರಂಭವಾಗುವ ಈಶಾವಾಸ್ಯೋಪನಿಷತ್ತಿನಲ್ಲಿ ತ್ರ್ಯಂಬಕೋಪಾಸನೆ

---

ಅರ್ಥ : ಇಹ = ಈ ಜಗತ್ತಿನಲ್ಲಿ, ಕರ್ಮಾಣಿಏವ = (ನಿಷ್ಕಾಮ) ಕರ್ಮಗಳನ್ನೇ ಅವಶ್ಯವಾಗಿ, ಕುರ್ವನ್ = ಮಾಡುತ್ತ, ಶತಂ ಸಮಾಃ = ನೂರುವರ್ಷಗಳ ವರೆಗೂ, ಜಿಜೀವಿಷೇತ್ = ಜೀವಿಸಲಿಚ್ಛಿಸಬೇಕು, ಇತಃ = ಇದಲ್ಲದೆ, ಅನ್ಯಥಾ = ಬೇರೆ ಮಾರ್ಗವು, ನಾಸ್ತಿ = ಇಲ್ಲ, ಏವಂ = ಹೀಗೆ ಮಾಡುವ ತ್ವಯಿ ನರೇ = ನಿನ್ನಂತಹ ಮನುಷ್ಯನಲ್ಲಿ, ಕರ್ಮ = ಕರ್ಮವು, ನಲಿಪ್ಯತೇ = ಅಂಟಿಕೊಳ್ಳುವುದಿಲ್ಲ.

ಯಿಂದ ಸಂಸಾರರೂಪವಾದ ಬಂಧನವು ಅಳಿದು ಜೀವನ್ಮುಕ್ತಿರೂಪವು ಪ್ರಾಪ್ತಿಯಾಗುವುದೆಂದು ಹೇಳುವ ಋಗ್ವೇದ ಮಂತ್ರದ ವಿವರಣೆಯು ಇದೇ ಎನ್ನಬಹುದು. ಇದೇ ವಿಷಯವೇ ಶಿವಶರಣರ ವಚನಗಳಲ್ಲಿ ವಿಸ್ತಾರ ಗೊಂಡಿದೆ. ಮೃತ್ಯು ಬಂಧನವನ್ನುಳ್ಳ ಈ ಮರ್ತ್ಯ ಜೀವನದಿಂದ ಬಿಡುಗಡೆ ಹೊಂದುವ ಮೊದಲು ಕಾಯಾಗಿ ತೊಟ್ಟಿನ ಬಂಧನದಲ್ಲಿದ್ದುದು ಹಣ್ಣಾದ ಮೇಲೆ ತೊಟ್ಟಿನ ಬಂಧನದಿಂದ ತಾನೇತಾನೆಯಾಗಿ ಕಳಚಿಕೊಳ್ಳುವ ರೀತಿಯಲ್ಲಿ ಮರ್ತ್ಯಲೋಕದ ಬಂಧನದಲ್ಲಿ ಕಾಯಂತೆ ಕಠಿಣವಾಗಿದ್ದವನು ಹಣ್ಣಿನಂತೆ ಮೃದುವಾಗಬೇಕಷ್ಟೆ. ಹೀಗೆ ಶಿವಾರ್ಪಣಕ್ಕೆ ಅರ್ಹನಲ್ಲದ ನರನು ಶಿವಾರ್ಪಣಕ್ಕೆ ಅರ್ಹನಾಗಿ ಅರ್ಪಿಸಿಕೊಂಡು ಶಿವನೇ ಆಗಿಹೋಗುವುದು ಮರ್ತ್ಯ ಜೀವನದಲ್ಲಿ ಹೇಗೆ ಸಾಧ್ಯವೆಂಬುದು ಬಸವೇಶ್ವರ ವಚನವಿದರಿಂದ ತಿಳಿದು ಬರುತ್ತದೆ :

> **ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ**
> **ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು ; ಇಲ್ಲಿ ಸಲ್ಲದವರು**
> **ಅಲ್ಲಿಯೂ ಸಲ್ಲರು, ಕೂಡಲ ಸಂಗಮದೇವಾ.**

ನಮ್ಮನ್ನು ಸೃಜಿಸಿದ ಸೃಷ್ಟಿಕರ್ತನೇ ಮರ್ತ್ಯವೆಂಬ ಕಾರ್ಖಾನೆಯನ್ನು ಸೃಜಿಸಿದನು. ನಮ್ಮನ್ನು ಸೃಜಿಸಿದಂತೆ ಅದನ್ನೂ ಸೃಜಿಸಲು ಕಾರಣವಿರಬೇಕು. ಕಾರ್ಖಾನೆಯಲ್ಲಿ ಕಬ್ಬಿಣವನ್ನು ಕಾಯಿಸಿ ನೀರಿನಲ್ಲಿ ಅದ್ದಿ ಉಕ್ಕನ್ನು ಮಾಡುವರು. ಹಾಗೆಯೇ ಕಷ್ಟವೆಂಬ ಕುಲುಮೆಯಲ್ಲಿ ಜೀವನು ಬೆಂದು ಸುಖವೆಂಬ ತಣ್ಣೀರಿನಲ್ಲಿ ಅದ್ದಲ್ಪಟ್ಟಾಗ ಉಕ್ಕಾಗುವನು ; ಸವರನ್ನಂತೆ ಇದ್ದವನು ಅಪರಂಜಿಯಾಗುವನು. ಲೋಹದ ತುಂಡು ಟಂಕಸಾಲೆಯಲ್ಲಿ ನಾಣ್ಯವಾಗಿ ಅಲ್ಲಿ ಸಲ್ಲುವುದಾದರೆ, ಟಂಕಸಾಲೆಯಿಂದ ಹೊರಗೆ ಬಂದಾಗಲೂ ಸಲ್ಲುವುದು. ಹಾಗೆ ಸಲ್ಲುವ ನಾಣ್ಯವಾಗುವ ಮೊದಲು, ಅದು ಕಷ್ಟಕಾರ್ಪಣ್ಯಗಳಿಗೆ ಒಳಗಾಗದೆ ನಾಣ್ಯವಾಗುವುದಿಲ್ಲ. ಅಷ್ಟಾವಕ್ರವಾಗಿದ್ದ ಲೋಹದ ಅದಿರು ಕಾದು ಕರಗಿ ನೀರಾಗಿ ಶುದ್ಧವಾಗಿ ಯಂತ್ರದಲ್ಲಿ ಸುಂದರ ನಾಣ್ಯವಾಗಿ ಹೊರಬೀಳುವುದು. ಮಲತ್ರಯದಿಂದ ಅಶುದ್ಧವಾದ ಮಾನವನು ನಿರ್ಮಲನಾಗುವುದು, ಮರ್ತ್ಯಲೋಕವೆಂಬ ಕಾರ್ಖಾನೆಯ ಕುಲುಮೆ

ಯಲ್ಲಿ ಕಾದು ಕರಗಿ, ಗುರುವಿನ ಉಪದೇಶದಿಂದ ಪರಿಶುದ್ಧವಾಗುವು ರಿಂದಲೇ. ಮಲತ್ರಯದಿಂದ ಬಿಡುಗಡೆಹೊಂದಲು ಇಹಲೋಕವೆಂಬ ಕಾರ್ಖಾ ಗಾರವಲ್ಲದೆ, ಬೇರೆಯೊಂದಿಲ್ಲ. ಆದುದರಿಂದಲೇ ಕೈಲಾಸದಲ್ಲಿ ಎಡವಿ ದೇವರುಗಳು ಸಹಾ ಇಹಲೋಕಕ್ಕೆ ಬಂದು ಪರಿಹಾರ ಹೊಂದಬೇಕೆಂ ಪುರಾಣಗಳಲ್ಲಿ ಹೇಳಿರುವುದರ ಉದ್ದೇಶ. ಒಟ್ಟಿನಲ್ಲಿ, ಗುರುವೆಂಬ ಕರ್ತಾರನು ಅರಿವೆಂಬ ಅಗ್ನಿಯಲ್ಲಿ ಕಾಸಿ ಕರಗಿಸಿ, ಉಪದೇಶದಿಂದ ಶೋಧಿಸಿ, ಆಚಾ ವೆಂಬ ಅಚ್ಚಿನಲ್ಲಿ ಹೊಯ್ದು ಭವಕಾಯವನ್ನು ಶಿವಕಾಯವನ್ನಾಗಿ ಹೊ ಹೊಮ್ಮಿಸುವನು ; ಅರ್ಥಾತ್ ಸಂಸಾರಿಯು ಜೀವನ್ಮುಕ್ತನಾಗುವನು. ವಚ ವಾಙ್ಮಯದಲ್ಲಿನ ಈ ಅಭಿಪ್ರಾಯವು, ಜೀವನವೆಂಬ ಮಿಡಿಯು ಬಲಿ ಕಾಯಾಗಿ ಹಣ್ಣಾಗಿ ತಾನಾಗಿಯೇ ತೊಟ್ಟುಕಳಚಿ ಬೀಳಬೇಕೆಂದು ಹೇಳು ಋಗ್ವೇದ ಮಂತ್ರದ ಅಭಿಪ್ರಾಯದ ಪರಿಷ್ಕಾರವೇ ಆಗಿದೆ. ಹೀಗೆ ಮೋಕ್ಷ ಕಲ್ಪನೆಯು ಋಗ್ವೇದ ಕಾಲದಿಂದ ಉಪನಿಷತ್ತುಗಳಲ್ಲಿ ಮೊಳೆತು, ವಚ ವಾಙ್ಮಯದಲ್ಲಿ ಪ್ರಗತಿಹೊಂದಿದೆ.

ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಅಕ್ಕ ಮಹಾದೇವಿಯು ಹೇಳುವಂತೆ ಫಲ ಪಕ್ವವಾದಲ್ಲದೆ, ಹೊರಗಣ ಸಿಪ್ಪೆ ಒಪ್ಪಗೆಡದು. ಭಕ್ತಿ ಭಂಡಾರಿಗಳ ಮಾತಿನಲ್ಲಿ:

ಭಕ್ತಿಯೆಂಬ ಪೃಥ್ವಿಯಮೇಲೆ ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು ; ಲಿಂಗವೆಂಬ ಎಲೆಯಮೇಲೆ
ವಿಚಾರವೆಂಬ ಹೂವಾಯಿತ್ತು, ಆಚಾರವೆಂಬ ಕಾಯಾಗಿತ್ತು,
ನಿಷ್ಪತ್ತಿಯೆಂಬ ಹಣ್ಣಾಯಿತ್ತು ; ನಿಷ್ಪತ್ತಿಯೆಂಬ ಹಣ್ಣು
ತೊಟ್ಟು ಕಳಚಿ ಬೀಳುವಲ್ಲಿ ಕೂಡಲ ಸಂಗಮದೇವ
ತನಗೆ ಬೇಕೆಂದು ಎತ್ತಿಕೊಂಡನು

## ಸೃಷ್ಟಿ ಕಲ್ಪನೆಯಲ್ಲಿ ಪ್ರಗತಿ

### ವಿಶ್ವದ ಜನನೀಜನಕರಾದ ದ್ಯಾವಾಪೃಥಿವಿಗಳು

ಆದಿಮಾನವನ ಮನಸ್ಸು, ತನ್ನನ್ನೂ ತನ್ನ ಸುತ್ತಮುತ್ತಲಿನದನ್ನು ಸೃಷ್ಟಿಸಿದವರಾರು ಎಂಬ ಪ್ರಶ್ನೆಯಿಂದ ಚಕಿತವಾಯಿತು. ತನ್ನ ಎದುರಿಗಿರು

ದ್ಯಾವಾ ಪೃಥಿವಿಗಳೇ ಮಾತಾಪಿತೃಗಳಾಗಿರಬೇಕೆನಿಸಿತು. ತಾನು ಹುಟ್ಟಿದ ಮಾತೃಭೂಮಿ ತನಗೆ ಆಹಾರವನ್ನು ಒದಗಿಸುತ್ತಿದ್ದಿತು ; ತನಗೆ ಬೇಕಾದ ಪಶು ಧನವು ಭೂಮಿಯಲ್ಲಿ ಹುಟ್ಟಿ ಭೂಮಿಯಿಂದ ಪರಿಪೋಷಿತವಾದುದೇ ; ಆದರೆ ಅದರಮೇಲೆ ಮುಚ್ಚಳವಾಗಿ ಕಾಣುವ ಆಕಾಶವು ಸೂರ್ಯನ ಬೆಳಕನ್ನು ಕೊಡದಿದ್ದರೆ ಮತ್ತು ಮಳೆಯನ್ನು ಸುರಿಸದಿದ್ದರೆ, ಭೂಮಿಯು ತನ್ನ ಪುತ್ರ ರಾದ ಮಾನವರನ್ನು ಹೇಗೆ ಪೋಷಿಸೀತು? ಆದುದರಿಂದ ಜಗತ್ತಿಗೆ ತಂದೆತಾಯಿ ಗಳ ಸ್ವರೂಪದವರು ದ್ಯಾವಾಪೃಥಿವಿಗಳು. ಋಗ್ವೇದದ ೧೦-೬೫-೮ನೆಯ ಮಂತ್ರದಲ್ಲಿ **" ಪರಿಕ್ಷಿತಾ ಪಿತರಾ ಪೂರ್ವಜಾವರೀ....ದ್ಯಾವಾಪೃಥಿವೀ "** ಎಂದು ಹೇಳಿದೆ. ಇವರಲ್ಲಿ ಸರ್ವತ್ರ ವ್ಯಾಪಿಸಿರುವ ದ್ಯಾವಾಪೃಥಿವಿಗಳು ಎಲ್ಲರಿಗೂ ಮಾತಾಪಿತೃ ಸ್ವರೂಪರೆಂದೂ,ಎಲ್ಲಕ್ಕೂ ಮೊದಲೇ ಉತ್ಪನ್ನರಾದವ ರೆಂದೂ ವರ್ಣಿಸಲ್ಪಟ್ಟಿದ್ದಾರೆ. **'ಪಿತರಾಸರ್ವೇಷಾಂಮಾತಾಪಿತೃಭೂತೇ'** ಎಂಬ ವಿವರಣೆ ಈ ಮಂತ್ರದ ಸಾಯಣ ಭಾಷ್ಯದಲ್ಲಿದೆ. ಋಗ್ವೇದದ ೧-೧೫೯-೨, ೭-೫೩-೨, ३-३-೧೧ನೆಯ ಮಂತ್ರಗಳಲ್ಲಿಯೂ ದ್ಯಾವಾ ಪೃಥಿವಿಗಳು ' ಪಿತರಾ ' ಎಂಬ ಪದದಿಂದಲೇ ವರ್ಣಿಸಲ್ಪಟ್ಟಿದ್ದಾರೆ. ಋಗ್ವೇ ದದ ೧-೮೯-೪ನೆಯ ಮಂತ್ರದಲ್ಲಿ **"ತನ್ಮಾತಾ ಪೃಥಿವೀ ತತ್ಪಿತಾ ದ್ಯೌಃ "** ಎಂದು ಹೇಳಿದೆ. ಈ ಕಲ್ಪನೆಯು ಋಗ್ವೇದದ ಅನೇಕ ಮಂತ್ರಗಳಲ್ಲಿ ಕಂಡು ಬರುವುದು. ತೈತ್ತರೀಯ ಬ್ರಾಹ್ಮಣದ ३-೭-೫-೪-೫ರಲ್ಲಿ **' ದ್ಯೌಃ ಪಿತಾ ಪೃಥಿವೀ ಮಾತಾ '** ಎಂದು ಹೇಳಿದೆ.

ದ್ಯಾವಾಪೃಥಿವಿಗಳು ಮಾನವರಿಗೆ ಮಾತ್ರವೇ ಮಾತಾಪಿತೃಗಳಲ್ಲ ; ದೇವಾದಿದೇವತೆಗಳನ್ನೊಳಗೊಂಡ ವಿಶ್ವಕ್ಕೆಲ್ಲ ಮಾತಾಪಿತೃಗಳೇ. ಋಗ್ವೇದದ ೧-೧೫೯-೧ನೇ ಮಂತ್ರವೇ ಮೊದಲಾದ ಆಧಾರಗಳಲ್ಲಿ ದ್ಯಾವಾಪೃಥಿವಿ ಗಳನ್ನು ' ದೇವಪುತ್ರೇ ' ಎಂದು ಕರೆಯಲಾಗಿದೆ. **" ದೇವಾಃಸರ್ವೇ ಪುತ್ರ ಸ್ಥಾನೀಯಾ ಯಯೋಃ ತೇ ದ್ಯಾವಾಪೃಥಿವ್ಯೌ "** ಎಂದರೆ ಸಕಲ ದೇವತೆ ಗಳನ್ನು ಪುತ್ರರಾಗಿ ಪಡೆದಿರುವರು ದ್ಯಾವಾಪೃಥಿವಿಗಳು. ಋಗ್ವೇದದ ೧೦- ೧೧೦-೯ನೆಯ ಮಂತ್ರದಲ್ಲಿನ **' ಇಮೇ ದ್ಯಾವಾಪೃಥಿವೀ ಜನಿತ್ರೀ '** ಎಂಬ ಪದಗಳ ಸಾಯಣಭಾಷ್ಯದಲ್ಲಿ **'ಜನಿತ್ರೀ ವಿಶ್ವಸ್ಯ ಜನಯಿತ್ರ್ಯಾವಿಮೇ ದ್ಯಾವಾಪೃಥಿವೀ'** ಎಂದು ಹೇಳಿರುವುದರಲ್ಲಿಯೂ ದ್ಯಾವಾಪೃಥಿವಿಗಳು

ಜಗತ್ತಿಗೆಲ್ಲ ಮಾತಾಪಿತೃಗಳೆಂದೇ ಹೇಳಿದೆ. **' ದೇವೀದೇವಸ್ಯ ರೋದಃ ಜನಿತ್ರೀ ಬೃಹಸ್ಪತಿಂ '** ಎಂದು ಮೊದಲಾಗುವ ಋಗ್ವೇದದ ೭-೯೭-೮ನೆ ಮಂತ್ರದಲ್ಲಿ ಪುತ್ರನಾದ ಬೃಹಸ್ಪತಿಯನ್ನು ಅವರು ಪೋಷಿಸಿದುದಾಗಿ ಹೇ ಋಗ್ವೇದದ ೧೦-೨-೭ನೆಯ ಮಂತ್ರದಲ್ಲಿ ದ್ಯಾವಾಪೃಥಿವಿಗಳು ಅಗ್ನಿ ಪಿತೃಗಳೆಂದು ಹೇಳಿದೆ. ಇನ್ನು ಅನೇಕ ಋಗ್ವೇದ ಮಂತ್ರಗಳಲ್ಲಿಯೂ ಇ ಆಧಾರಗಳಲ್ಲಿಯೂ ಅಗ್ನಿಯೇ ಮೊದಲಾದ ದೇವತೆಗಳಿಗೆ ದ್ಯಾವಾಪೃ ಗಳು ಜನಯಿತ್ರಿಯರೆಂದು ಹೇಳಿದೆ. ಶತಪಥ ಬ್ರಾಹ್ಮಣದ ೧೪-೧-೨- ರಲ್ಲಿ **' ಇಯಂ ಪೃಥ್ವೀಭೂತಸ್ಯ ಪ್ರಥಮಜಾ '** ಎಂದರೆ ಇತರ ಭೂತ ಗಿಂತಲೂ ಪೃಥಿವಿಯು ಮೊದಲು ಹುಟ್ಟಿತು ಎಂದು ಹೇಳಿದೆ. ಹೀಗೆ ವಿ ಸೃಷ್ಟಿಗೆ ದ್ಯಾವಾಪೃಥಿವಿಗಳು ಮಾತಾಪಿತೃಸ್ಥಾನಗಳಲ್ಲಿದ್ದರೆಂಬುದು ಮೊ ಪ್ರಚಲಿತವಾದ ಕಲ್ಪನೆಯಾಗಿದ್ದಂತೆ ಕಾಣುತ್ತದೆ.

ಜಗತ್ತಿಗೆ ಮಾತಾಪಿತೃಗಳೆನಿಸಿದ ದ್ಯಾವಾಪೃಥಿವಿಗಳನ್ನು ಯಾ ಸೃಷ್ಟಿಸಿದರು ಎಂಬ ಪ್ರಶ್ನೆಯು ಕಾಲಕ್ರಮದಲ್ಲಿ ಎದ್ದಿತು. ಋಗ್ವೇ ೧೦-೩೧-೭ನೆಯ ಮಂತ್ರದಲ್ಲಿ **' ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ '** ಎಂದರೆ ಯಾವ ವನದ ಯಾ ವೃಕ್ಷದಿಂದ ದ್ಯಾವಾಪೃಥಿವಿಗಳು ನಿರ್ಮಿಸಲ್ಪಟ್ಟರು ಎಂಬ ಪ್ರಶ್ನೆಯುಎದ್ದಿ ಛಾಂದೋಗ್ಯ ಉಪನಿಷತ್ತಿನಲ್ಲಿ ೩-೧೯-೧ ಮತ್ತು ೨ನೆಯ ಮಂತ್ರಗ ' ಅಸತ್ ' ನಿಂದ ' ಸತ್ ' ಹುಟ್ಟಲು, ಅದರಲ್ಲಿ ಒಂದು ಅಂಡವು ಉ ಯಾಗಿ ಒಡೆಯಿತೆಂದೂ, ಅದರಲ್ಲಿ ಬೆಳ್ಳಿಯ ಚಿಪ್ಪು ಭೂಮಿಯಾ ತೆಂದೂ, ಚಿನ್ನದ ಮತ್ತೊಂದು ಚಿಪ್ಪು ದ್ಯುಲೋಕವಾಯಿತೆಂ ಹೇಳಿದೆ. **'ಅಸದೇವೇದಮಗ್ರ ಆಸೀತ್, ತತ್‌ಸದಾಸೀತ್, ತತ್‌ ಭವತ್ತದಾಂಡಂ . . . ತನ್ನಿರಭಿದ್ಯತ ತೇ ಅಂಡ ಕಪಾಲೇ ರಜತಂ ಸುವರ್ಣಂಚಾಭವತಾಂ. ತದ್ಯದ್‌ರಜತಗ್‌ಂ ಸೇಯಂ ಪೃಥಿವೀಯ ಸುವರ್ಣಗ್‌ಂ ಸಾದ್ಯೌಃ'** ಹೀಗೆ ದ್ಯಾವಾಪೃಥಿವಿಗಳು ಸೃಷ್ಟಿಯಾದ ವಿ ದಲ್ಲಿ ಈ ತರದ ಕಲ್ಪನೆಯು ಇತರ ಜನಾಂಗಗಳಲ್ಲಿಯೂ ಇತ್ತು.*

---

* In the beginning there was primal undifferentiated un called by the orphics "Night" within this unity the world

## ಇಂದ್ರನಿಂದ ಸೃಷ್ಟಿಯಾಯಿತೆಂಬ ಕಲ್ಪನೆ

ದೇವದೇವೋತ್ತಮನಾದ ಇಂದ್ರನು ಸೃಷ್ಟಿಕಾರ್ಯವನ್ನು ಮಾಡಿದನೆಂಬ ಕಲ್ಪನೆ ಬಂದುದರಲ್ಲಿ ಅತಿಶಯವಿಲ್ಲ. ಋಗ್ವೇದದ ೧೦-೨೯-೬ನೆಯ ಮಂತ್ರದಲ್ಲಿ 'ಮಾತ್ರೇ' ಎಂದರೆ ಜಗತ್ತನ್ನೇ ನಿರ್ಮಿಸುವರಾದ ದ್ಯಾವಾಪೃಥಿವಿಗಳನ್ನು ಇಂದ್ರನು "ಸುಮಿತೇ" ಎಂದರೆ ನಿರ್ಮಿಸಿದನೆಂದು ಹೇಳಿದೆ. "ಮಾತ್ರೇ ನು ತೇ ಸುಮಿತೇ ಇಂದ್ರ ಪೂರ್ವೀ ದ್ಯೌರ್ಮಜ್ಮನಾ ಪೃಥಿವೀ" ಎಂದು ಪ್ರಾರಂಭವಾಗುವ ಈ ಮಂತ್ರದ ಸಾಯಣಭಾಷ್ಯದಲ್ಲಿ "ಸುಮಿತೇ ನಿರ್ಮಿತೇ, ಮಾತ್ರೇ ನಿರ್ಮಾತ್ರ್ಯೌ" ಎಂದು ಅರ್ಥವನ್ನು ಹೇಳಿದೆ. ಋಗ್ವೇದದ ೧೦-೫೪-೩ನೆಯ ಮಂತ್ರದಲ್ಲಿ ದ್ಯಾವಾಪೃಥಿವಿಗಳೆರಡನ್ನೂ ಒಟ್ಟಿಗೆ ಇಂದ್ರನು ಅವನ ಶರೀರದಿಂದಲೇ ನಿರ್ಮಿಸಿದನೆಂದು ಹೇಳಿದೆ:

ಕ ಉ ನು ತೇ ಮಹಿಮನಃ ಸಮಸ್ಯಾಸ್ಮತ್ ಪೂರ್ವ ಋಷಯೋಽಂತಮಾಪುಃ
ಯನ್ಮಾತರಂ ಚ ಪಿತರಂ ಚ ಸಾಕಮಜನಯಥಾಸ್ತನ್ವಃ ಸ್ವಾಯಾಃ *

was generated or according to some accounts fashioned by Ageless time (Chronos). The egg divided into two halves Heaven and Earth. Mythically Heaven and Earth are the father and mother of all life—Cambridge Ancient History Vol. IV p, 536 (1926).

* ಅರ್ಥ: ಯತ್=ಯಾವ ನಿನ್ನ ಮಾಹಾತ್ಮ್ಯದಿಂದ, ಮಾತರಂ = ಪೃಥ್ವಿಯನ್ನೂ ಪಿತರಂ = ದ್ಯುಲೋಕವನ್ನೂ, ಸಾಕಂ = ಒಟ್ಟಿಗೆ, ಸ್ವಯಾಃ = ನಿನ್ನ, ತನ್ವಃ = ಶರೀರದಿಂದ, ಅಜನಯಥಾಃ = ಉತ್ಪನ್ನ ಮಾಡಿದೆಯೋ ಆ, ತೇ = ನಿನ್ನ, ಸಮಸ್ಯ = ಸಂಪೂರ್ಣವಾದ, ಮಹಿಮನಃ = ಮಾಹಾತ್ಮ್ಯದ, ಅಂತಂ = ತುದಿಯನ್ನು, ಅಸ್ಮತ್ = ನಮ್ಮಲ್ಲಿ, ಪೂರ್ವಋಷಯಃ = ಶ್ರೇಷ್ಠರಾದ ಋಷಿಗಳು, ತೇ = ಯಾರು ತಾನೆ ಆಪುಃ= ಹೊಂದಿದ್ದಾರೆ.

ಸಾಯಣಭಾಷ್ಯಾಧಾರ: ಹೇ ಇಂದ್ರ, ತೇ ತವ ಮಹಿಮನೋ ಮಹಿಮ್ನಃ, ಸಮಸ್ಯ ಸರ್ವಸ್ಯಾಪಿ, ಅಂತಂ ಪಾರಂ. ಅಸ್ಮತ್—ಅಸ್ಮತ್ತಃ, ಪೂರ್ವಋಷಯಃ ಕ ಆಪುಃ ಪ್ರಾಪ್ನುವನ್; ದ್ಯೌಃ ಪಿತಾ ಪೃಥಿವೀ ಮಾತೇತಿ ಹಿ ಶ್ರುತೇಃ; ತೇ ಉಭೇ ಅಪಿ, ಸಾಕಂ ಸಹೈವ, ಸ್ವಾಯಾಃ ತನ್ವಃ ಸ್ವಕೀಯಾತ್, ಶರೀರಾತ್ ಅಜನಯಥಾಃ ಉಪಪಾದಯಃ; ಅತಃ ನಾಪುಃ ಇತಿ ಸಂಬಂಧಃ.

ಇಂದ್ರನು ವಿಶ್ವಸೃಷ್ಟಿಯನ್ನು ಪೂರ್ವದಿಕ್ಕಿನಿಂದ ಪ್ರಾರಂಭಿಸಿದ್ದ ಕಲ್ಪನೆಯಿದೆ. ಜಗತ್ತಿನ ಚಕ್ಷುವಾದ ಸೂರ್ಯನು ಪೂರ್ವ ದಿಕ್ಕಿನಲ್ಲಿ ಯಿಸುವನು. ದೇವತಾರ್ಚನಾದಿ ಕಾರ್ಯಗಳಲ್ಲಿ ಇಂದೂ ಪೂರ್ವ ದಿಕ್ಕಿ ಪ್ರಾಶಸ್ತ್ಯವಿದೆ. ದಿಕ್ಕುಗಳಲ್ಲಿ ಮೊದಲನೆಯದು ಪೂರ್ವ ದಿಕ್ಕು. ಇ ಗೃಹಾದಿಗಳ ನಿರ್ಮಾಣದಲ್ಲಿ ಪೂರ್ವದಿಕ್ಕಿಗೆ ಮಹತ್ವವಿದೆಯಷ್ಟೆ. ಯ ಗೃಹವನ್ನು ಹೇಗೆ ಪೂರ್ವದಿಕ್ಕಿನಿಂದ ಅಳೆದು ನಿರ್ಮಿಸುವರೋ ಹಾಗೆ ಪೂ ದಿಕ್ಕನ್ನು ಅಳೆದು ನಿರ್ಮಿಸಿ ಸೃಷ್ಟಿ ಕಾರ್ಯವನ್ನು ಇಂದ್ರನು ಮಾಡಿದು ಋಗ್ವೇದದ ೨-೧೫-೩ನೆಯ ಮಂತ್ರದಲ್ಲಿ ಹೇಳಿದೆ :

**ಸದ್ಮೇವ ಪ್ರಾಚೋ ವಿ ಮಿಮಾಯ ಮಾನೈರ್ವಜ್ರೇಣ ಖಾನ್ಯತೃಣನ್ನದೀನಾಂ।**
**ವೃಥಾಸೃಜತ್ ಪಥಿಭಿರ್ದೀರ್ಘಯಾಥೈಃ ಸೋಮಸ್ಯ ತಾ ಮದ ಇಂದ್ರಶ್ಚಕಾರ॥**

ಇಂದ್ರನೆಲ್ಲಿರುವನು ? ಅವನು ಇಲ್ಲವೇ ಇಲ್ಲ, ಎಂದು ಕೆಲವ ಇಂದ್ರನ ಅಸ್ತಿತ್ವವೇ ಪ್ರಶ್ನಿಸಲ್ಪಟ್ಟರೂ, ಅವನ ಶತ್ರುನಿಗ್ರಹಾದಿ ಕಾ ಗಳಿಂದ ಅವನ ಇರುವಿಕೆಯನ್ನು ಸಾಧಿಸಿದವರುಂಟು ಎಂಬುದು ಋಗ್ವೇ ಮಂತ್ರ ೨-೧೨-೫ರಿಂದ ತಿಳಿದುಬರುವುದು :

---

* ಅರ್ಥ : ಸದ್ಮ ಇವಮಾನೈಃ = ಯಜ್ಞ ಗೃಹವನ್ನು ಅಳೆದು ನಿರ್ಮಿಸುವಂತೆ, ಪ್ರಾ = ಪೂರ್ವದಿಕ್ಕುಗಳನ್ನು, ವಿ ಮಿಮಾಯ = ಚೆನ್ನಾಗಿ ಅಳೆದು ನಿರ್ಮಿಸಿ ನದೀನಾಂ = ನದಿಗಳಿಗೆ, ಖಾನಿ = ಹರಿಯುವ ದ್ವಾರಗಳನ್ನು, ವಜ್ರೇ ವಜ್ರಾಯುಧದಿಂದ, ಅತೃಣತ್ = ಕೊರೆದನು. ದೀರ್ಘಯಾಥೈಃ = ಬಹು ಪ್ರವಹಿಸುವ, ಪಥಿಭಿಃ = ಮಾರ್ಗಗಳಿಂದ, ವೃಥಾ = ನಿರಾಯಾಸವಾಗಿ ಪ್ರ ಸುವಂತೆ, ಅಸೃಜತ್ = ಸೃಷ್ಟಿಸಿದನು. ಸೋಮಸ್ಯ = ಸೋಮರಸದ ದಿಂದ, ಮದೇ = ಹರ್ಷವುಂಟಾದಾಗ, ತಾ = ಈ ಕಾರ್ಯಗಳನ್ನು, ಇಂದ್ರ ಇಂದ್ರನು, ಚಕಾರ = ಮಾಡಿದನು.

ಸಾಯಣಭಾಷ್ಯಾಧಾರ : ಸದ್ಮೇವ ಯಥಾಯಜ್ಞಗೃಹಾನ್ ಮಾನೈಃ ಷಟ್ತ್ರಿ ಪ್ರಕ್ರಮ ಪ್ರಾಚೀತ್ಯೇವಂ ರೂಪೈಃ ಪರಿಮಾಣೈಃ ಪ್ರಾಕ್‌ಪ್ರವಣಾನ್ ಕು ತದ್ವತ್, ಸಿಂಧೂನ್ ಲೋಕಾನ್ವಾ ನೃಜೂನ್ವಾ ಮಾನೈಃ ಪರಿಮಾಣೈಃ ಪ್ರಾ ಪ್ರಾಙ್‌ಮುಖಾನ್ವಿಮಿಮಾಯ ನಿರ್ಮಿತವಾನ್.

ಯಂ ಸ್ಮಾ ಪೃಚ್ಛಂತಿ ಕುಹ ಸೇತಿ ಘೋರಮುತೇಮಾಹುರ್ನೈಷೋ ಅಸ್ತೀತ್ಯೇನಂ ।
ಸೋ ಅರ್ಯಃ ಪುಷ್ಟೀರ್ವಿಜ ಇವಾ ಮಿನಾತಿ ಶ್ರದಸ್ಮೈ ದತ್ತ ಸ ಜನಾಸ ಇಂದ್ರಃ ॥*

ಆದರೆ ಈ ಮಂತ್ರದ ಸಾಯಣಭಾಷ್ಯದಲ್ಲಿ ಉದಾಹರಿಸಿರುವಂತೆಯೂ ಹಿಂದೆ ಹೇಳಿರುವಂತೆಯೂ, ಋಗ್ವೇದದ ೮-೧೦೦-೩ನೆಯ ಮಂತ್ರದಲ್ಲಿ ಸಹಾ ಇಂದ್ರನ ಅಸ್ತಿತ್ವವು ಪ್ರಶ್ನಿಸಲ್ಪಟ್ಟಿದೆ. ಕ್ರಮೇಣ ಇಂದ್ರ ಮೊದಲಾದ ದೇವತೆಗಳ ಪ್ರಾಮುಖ್ಯತೆಯು ಕಡಮೆಯಾಗುತ್ತ ಹೋಯಿತಾಗಿ, ಇಂದ್ರನು ಸೃಷ್ಟಿಕರ್ತನೆಂಬ ಭಾವನೆಯೂ ಹೋಯಿತು.

ಋಗ್ವೇದದ ೧೦-೫೪-೨ನೆಯ ಮಂತ್ರದಲ್ಲಿ ಇಂದ್ರನು ಮಾಡಿದನೆನ್ನುವ ಅದ್ಭುತ ಕೆಲಸಗಳೆಲ್ಲವೂ ಸುಳ್ಳೆಂದು ಹೇಳಿರುವುದು ಗಮನಾರ್ಹವಾಗಿದೆ.

ಯದಚರಸ್ತನ್ವಾ ವಾವೃಧಾನೋ ಬಲಾನಿಂದ್ರ ಪ್ರಬ್ರುವಾಣೋ ಜನೇಷು ।
ಮಾಯೇತ್ ಸಾ ತೇ ಯಾನಿ ಯುದ್ಧಾನ್ಯಾಹುರ್ನಾದ್ಯ ಶತ್ರುಂ ನನು ಪುರಾವಿವಿತ್ಸೇ ॥ †

---

* ಅರ್ಥ : ಸಃ = ಆ ಇಂದ್ರನು, ಕುಹ ಸ್ಮ ಇತಿ = ಎಲ್ಲಿರುವನೆಂದು, ಘೋರಂ ಯಂ ಪೃಚ್ಛಂತಿ ಏನಂ = ಭಯಂಕರನಾದ ಯಾವನನ್ನು ಕುರಿತು ಕೇಳುತ್ತಾರೆಯೋ ಆವನ ವಿಷಯದಲ್ಲಿ, ಏಷಃ = ಅವನು, ನ ಅಸ್ತಿ ಇತಿ = ಇಲ್ಲವೇ ಇಲ್ಲವೆಂದು, ಆಹುಃ = ಹೇಳುತ್ತಾರೆ. ಸಃ = ಇಂದ್ರನು. ವಿಜಇವ = ಉದ್ವೇಜಕನಾಗಿ, ಅರ್ಯಃ = ಶತ್ರುಗಳಿಗೆ ಸೇರಿದ, ಪುಷ್ಟೀಃ = ಪುಷ್ಟಿಯಾದ ಗವಾಶ್ವಾದಿಗಳನ್ನು, ಆಮಿನಾತಿ = ಸುತ್ತಲೂ ಹಿಂಸಿಸುತ್ತಾನೆ. ಜನಾಸಃ = ಎಲೈ ಜನರೇ, ಇಂದ್ರ ಅಸ್ಮೈ ಶ್ರದ್ಧತ್ತ = ಇಂದ್ರನಲ್ಲಿ ಶ್ರದ್ಧೆ ಇಡಿ.

ಸಾಯಣಭಾಷ್ಯಾಧಾರ : ವಿಜಇವ . . . ಉದ್ವೇಜಕ ಏವ ಸನ್ ಅರ್ಯೋಃ ಅರೇಃ ಸಂಬಂಧೀನಿ, ಪುಷ್ಟೀಃ ಪೋಷಕಾಣಿ ಗವಾಶ್ವಾದೀನಿ ಧನಾನ್ಯಾಮಿನಾತಿ ಸರ್ವತೋ ಹಿನಸ್ತಿ.

† ಅರ್ಥ : ಇಂದ್ರ = ಎಲೈ ಇಂದ್ರನೇ, ತನ್ವಾ = ಸ್ತೋತ್ರದಿಂದ, ವಾವೃಧಾನಃ = ವೃದ್ಧಿಹೊಂದಿ, ಜನೇಷು = ಜನಗಳಲ್ಲಿ, ಬಲಾನಿ = ವೃತ್ರವಧೆಯೇ ಮೊದಲಾದ ಸಾಮರ್ಥ್ಯವನ್ನು, ಪ್ರಬ್ರುವಾಣಃ — ಚೆನ್ನಾಗಿ ಪ್ರಕಟಿಸುತ್ತ, ಅಚರಃ ಯತ್ ತೇ ಸಾ = ಸಂಚರಿಸಿದೆಯೆಂಬುದಾವುದಿದೆಯೋ ಅದು, ಮಾ ಯಾ ಇತ್ = ಖಂಡಿತ ಸುಳ್ಳು. ಯಾನಿಯುದ್ಧಾನಿ ಆಹುಃ = ಯಾವ ಯುದ್ಧಗಳನ್ನು ನೀನು

ಹೀಗೆ ಇಂದ್ರನು ಮಾಡಿದನೆನ್ನುವ ಯುದ್ಧಗಳೂ, ಜಯಿಸಿದನೆನ್ನು ಶತ್ರುಗಳೂ, ಪ್ರಕಟಿಸಿದನೆಂಬ ಸಾಮರ್ಥ್ಯವೂ ಸುಳ್ಳು ಎಂದು ಹೇಳ್ ಕಾಲ ಬಂದಿತೆನ್ನಲು ಅವನ ಸೃಷ್ಟಿ ಕಾರ್ಯವನ್ನು ನಂಬುವರಾರು ?

## ಸಂದೇಹ ನಿವಾರಣಾರ್ಥ ಶ್ರದ್ಧೆಗಾಗಿ ಪ್ರಾರ್ಥನೆ

ನಮ್ಮಂತೆಯೇ ದುಃಖದಲ್ಲಿ ಕುಗ್ಗಿ, ಸುಖದಲ್ಲಿ ಉಬ್ಬಿ, ತಾಪತ್ರಯಗಳಿ ಒಳಗಾಗುವ ಇಂದ್ರಾದಿ ದೇವತೆಗಳಲ್ಲಿ ಈ ವಿಶ್ವವನ್ನು ಸೃಷ್ಟಿಸಿದವ ಯಾರೂ ಇಲ್ಲವೆಂದಾಯಿತು; ಆವರೆಗೂ ದೇವತೆಗಳಲ್ಲಿ ಇದ್ದ ನಂಬು ಹೋಯಿತು. ನಾಸ್ತಿಕರಾಗಲು ಇಷ್ಟವಿಲ್ಲದೆ ಪೂರ್ವಾಹ್ನ, ಮಧ್ಯಾಹ್ನ, ಅಪರಾಹ್ನಗಳಲ್ಲೆಲ್ಲಾ ಶ್ರದ್ಧೆಗಾಗಿ, ಪ್ರಾರ್ಥಿಸಿದುದು ಋಗ್ವೇದ ೧೦-೧೫೧-೫ನೆಯ ಮಂತ್ರವಿದರಲ್ಲಿ ಕಂಡುಬರುವುದು :

ಶ್ರದ್ಧಾಂ ಪ್ರಾತರ್ಹವಾಮಹೇ ಶ್ರದ್ಧಾಂ ಮಧ್ಯಂದಿನಂ ಪರಿ ।
ಶ್ರದ್ಧಾಂ ಸೂರ್ಯಸ್ಯ ನಿಮ್ರುಚಿ ಶ್ರದ್ಧೇ ಶ್ರದ್ಧಾಪಯೇಹ ನಃ ॥ *

ಋಗ್ವೇದದ ೮-೫೮-೧ನೆಯ ಮಂತ್ರವು ಸಚೇತಸಃ ಋತ್ವಿಜಃ ಎಂದ ಸಮಾನ ಪ್ರಜ್ಞರಾದ ಋತ್ವಿಕ್ಕುಗಳನ್ನು ಕುರಿತು ಹೇಳುತ್ತದೆ. ಮುಂದಿ

---

ಮಾಡಿದೆಯೆಂಬುವರೋ ಅದೂ ಸುಳ್ಳು. ಅದ್ಯ = ಈಗ, ಶತ್ರುಂ = ಶತ್ರುವನ್ನ ನವಿವಿತ್ಸೇ = ನೀನು ಹೊಂದಿರುವುದಿಲ್ಲ. ನನು ಪುರಾ = ಹಿಂದೆ ಯಾವ ಶತ್ರು ಗಳು ತಾನೆ ಇದ್ದರು?

ಸಾಯಣಭಾಷ್ಯಾಧಾರ : ಬಲಾನಿಪ್ರಬ್ರುವಾಣಃ-ವೃತ್ರವಧಾದಿ ರೂಪಾಣಿ ಸಾಮರ್ಥ್ಯಾನಿ ಪ್ರಕರ್ಷೇಣ ಕಥಯನ್ನಚರಃ, ನನು ಇತಿಪ್ರಶ್ನೇ ಕಿಂ ಪುರಾಶತ್ರುಮಲಭಥಾ, ತದಪಿ ನೇತ್ಯರ್ಥಃ.

* ಅರ್ಥ : ಶ್ರದ್ಧಾಂ = ಶ್ರದ್ಧಾ ದೇವತೆಯನ್ನು. ಪ್ರಾತಃ = ಪ್ರಾತಃಕಾಲದಲ್ಲಿಯೂ ಮಧ್ಯಂದಿನಂ ಪರಿ = ಮಧ್ಯಾಹ್ನ ಕಾಲದಲ್ಲಿಯೂ, ಶ್ರದ್ಧಾಂ = ಶ್ರದ್ಧಾ ದೇವ ಯನ್ನು, ಸೂರ್ಯಸ್ಯ ನಿಮ್ರುಚಿ = ಸೂರ್ಯನ ಅಸ್ತಮಾನ ಕಾಲದಲ್ಲಿಯೂ ಶ್ರದ್ಧಾಂ = ಶ್ರದ್ಧಾ ದೇವತೆಯನ್ನು, ಹವಾಮಹೇ = ಪ್ರಾರ್ಥಿಸಿ ಕರೆಯುತ್ತೇವೆ ಶ್ರದ್ಧೇ = ಎಲೈ ಶ್ರದ್ಧಾ ದೇವತೆಯೇ, ನಃ = ನಮ್ಮನ್ನು, ಇಹ = ಈ ಲೋಕದಲ್ಲಿ ಶ್ರತ್ ಧಾಪಯ = ಶ್ರದ್ಧಾವಂತರನ್ನಾಗಿ ಮಾಡು.

ಮಂತ್ರದಲ್ಲಿ ಜಗತ್ತು ಒಂದೇ ಮೂಲದಿಂದ ಹೊರಹೊಮ್ಮಿದುದು ಎಂದು ಅವರಿಗೆ ತೋರಿದುವನ್ನು ಹೇಳಿದೆ:

ಏಕ ಏವಾಗ್ನಿರ್ಬಹುಧಾ ಸಮಿದ್ಧ ಏಕಃ ಸೂರ್ಯೋ ವಿಶ್ವಮನುಪ್ರಭೂತಃ ।
ಏಕೈವೋಷಾಃ ಸರ್ವಮಿದಂ ವಿಭಾತ್ಯೇಕಂ ವಾ ಇದಂ ವಿ ಬಭೂವ ಸರ್ವಂ ॥ *

ಒಬ್ಬನೇ ಅಗ್ನಿಯು ನಾನಾ ರೂಪಗಳಲ್ಲಿ ಪ್ರಜ್ವಲಿತನಾಗುವಂತೆ, ಒಬ್ಬನೇ ಸೂರ್ಯನು ನಾನಾ ಕಡೆಗಳಲ್ಲಿ ವಿಶ್ವದಲ್ಲಿ ಪ್ರಕಾಶಿಸುವಂತೆ, ಒಂದೇ ಬೆಳಗಿನ ಬೆಳಗು ವಿಶ್ವವೆಲ್ಲವನ್ನು ಬೆಳಗುವಂತೆ ಒಂದೇ ಮೂಲವು ಸಕಲ ಜಗತ್ತನ್ನೂ ವಿವಿಧವಾಗಿ ಹೊರಹೊಮ್ಮಿಸುತ್ತದೆ ಎಂಬುದು ಈ ಮಂತ್ರದ ಅರ್ಥ.

## ವಿಶ್ವಕರ್ಮ ಸೃಷ್ಟಿಯ ಕಲ್ಪನೆ

ವಿಶ್ವಕ್ಕೆ ಹೀಗೆ ಕರ್ತನಾದ ದೈವಕ್ಕೆ ವಿಶ್ವಕರ್ಮನೆಂದು ಹೆಸರಿಟ್ಟುದು ಸಾರ್ಥಕವೆ. ನಿರುಕ್ತದಲ್ಲಿ "ವಿಶ್ವಕರ್ಮಾ ವಿಶ್ವಸ್ಯ ಕರ್ತಾ" ಎಂದು ಹೇಳಿದೆ. ದುರ್ಗಾಚಾರ್ಯರು ಇದನ್ನು ವಿವರಿಸುವಾಗ 'ಯದಿದಂ ಕಿಂಚಿದ್ ಭೂತಂ ಭವಿಷ್ಯಮಾಣಂ ಕ್ರಿಯಮಾಣಂ ಚ ತಸ್ಯ ಸರ್ವಸ್ಯ ಕರ್ತಾ' ಎಂದು ಹೇಳಿದ್ದಾರೆ. ಇಂದಿನದು ಹಿಂದಿನದು ಮುಂದಿನದು

---

* ಅರ್ಥ: ಏಕ ಏವ ಅಗ್ನಿಃ = ಒಂದೇ ಅಗ್ನಿಯು, ಬಹುಧಾ = ಅನೇಕ ರೂಪಗಳಲ್ಲಿ, ಸಮಿದ್ಧಃ = ಪ್ರಜ್ವಲಿಸುತ್ತಾನೆ; ಏಕಃ ಸೂರ್ಯಃ = ಒಬ್ಬನೇ ಸೂರ್ಯನು, ವಿಶ್ವಂ ಅನು = ಜಗತ್ತೆಲ್ಲವನ್ನೂ ಪ್ರವೇಶಿಸಿ, ಪ್ರಭೂತಃ = ಪ್ರಾದುರ್ಭಾವವಾಗುತ್ತಾನೆ; ಏಕ ಏವ ಉಷಾಃ = ಒಬ್ಬಳೆ ಉಷೆಯು, ಇದಂ ಸರ್ವಂ = ಈ ಜಗತ್ತೆಲ್ಲವನ್ನೂ, ವಿಭಾತಿ = ಪ್ರಕಾಶಪಡಿಸುತ್ತಾಳೆ, ಏಕಂ ವೈ = ಒಂದೇಆದ ಮೂಲವು, ಇದಂ ಸರ್ವಂ = ಜಗತ್ತಿನ ಸಕಲ ರೂಪಗಳಲ್ಲೂ, ವಿಬಭೂವ = ಪರಿಣಮಿಸುತ್ತದೆ.

ಸಾಯಣ ಭಾಷ್ಯಾಧಾರ: ಇದಂ ಆ ಬ್ರಹ್ಮಸ್ತಂಬ ಪರ್ಯಂತಂ ಜಗತ್, ವಿಬಭೂವ = ವಿಶೇಷಣ ಅಭವತ್.

ಏನೇನಿದೆಯೋ ಅದೆಲ್ಲವನ್ನೂ ನಿರ್ಮಿಸುವನು ವಿಶ್ವಕರ್ಮನು ಎಂದು ಇದ
ಅಭಿಪ್ರಾಯ. ವಿಶ್ವಕರ್ಮನ ವಿಷಯವನ್ನು ಋಗ್ವೇದದ ೧೦ನೆಯ ಮಂಡ
ಲದ ೮೧ ಮತ್ತು ೮೨ನೆಯ ಸೂಕ್ತಗಳಲ್ಲಿ ವಿವರವಾಗಿ ಹೇಳಿದೆ. ೮೨ನೆಯ
ಸೂಕ್ತದ ಎರಡನೆಯ ಮಂತ್ರದಲ್ಲಿ "ವಿಶ್ವಕರ್ಮಾ ವಿಮನಾ ಆದ್ವಿಹಾಯಾ
ಧಾತಾ ವಿಧಾತಾ ಸಂದೃಕ್" ಎಂದರೆ ವಿಶ್ವಕರ್ಮನು ವಿಶೇಷ ಪ್ರಜ್ಞೆ
ಯುಳ್ಳವನೂ, ಮಹಾತ್ಮನೂ, ವೃಷ್ಟ್ಯಾದಿಗಳಿಗೆ ಕರ್ತನೂ, ಜಗತ್ತೆಲ್ಲವನ್ನು
ನಿರ್ಮಿಸುವವನೂ, ಶ್ರೇಷ್ಠನೂ, ಸರ್ವಜ್ಞನೂ ಎಂದು ಹೇಳಿದೆ. ಮುಂದಿನ
ಮಂತ್ರದಲ್ಲಿ 'ನಃ ಪಿತಾ ಜನಿತಾ .... ವಿಧಾತಾ' ಎಂದರೆ ನಮಗೆ ಪಾಲ
ಕನೂ, ಉತ್ಪಾದಕನೂ, ಸಕಲ ಜಗತ್ತಿಗೆ ನಿರ್ಮಾಪಕನೂ ಎಂದು ಹೇಳಿದೆ.
ಇದರ ಸಾಯಣ ಭಾಷ್ಯದಲ್ಲಿ ವಿಶ್ವಕರ್ಮಾ ನಃ ಅಸ್ಮಾಕಂ, ಪಿತಾ-ಪಾಲ
ಯಿತಾ, ಜನಿತಾ-ಉತ್ಪಾದಕಃ, ವಿಧಾತಾ-ಸರ್ವಸ್ಯ ಜಗತ ಉತ್ಪಾ
ದಕಃ" ಎಂಬ ವಿವರಣೆಯು ಮೇಲಿನ ಅರ್ಥವನ್ನು ಸಮರ್ಥಿಸುತ್ತದೆ.

## ಹಿರಣ್ಯಗರ್ಭ ಪ್ರಜಾಪತಿಗಳಿಂದ ಸೃಷ್ಟಿಯ ಕಲ್ಪನೆ

ಋಗ್ವೇದದ ಇತರ ಸೂಕ್ತಗಳಲ್ಲಿ ಪ್ರಜಾಪತಿ, ಹಿರಣ್ಯಗರ್ಭ ಮೊದಲಾ
ದವರು ಸೃಷ್ಟಿಕರ್ತರೆಂದು ಬೇರೆ ಬೇರೆ ಋಷಿಗಳು ಹೇಳಿರುತ್ತಾರೆ. ಈಗಿರುವ
ಸಮಸ್ತ ಸೃಷ್ಟಿವಿಕಾರಗಳಾದ ಪಂಚಮಹಾಭೂತಾದಿಗಳನ್ನು ಸೃಷ್ಟಿಮಾಡು
ವರು ನಿನ್ನನ್ನು ಬಿಟ್ಟರೆ ಬೇರೊಬ್ಬರಿಲ್ಲ ಎಂದು ಪ್ರಜಾಪತಿಯನ್ನು ಕುರಿತು
ಹೇಳುವ ಋಗ್ವೇದದ ೧೦-೧೨೧-೧೦ ಮಂತ್ರವಿದು :

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ ।
ಯತ್ ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ
ರಯೀಣಾಂ ॥*

---

* ಅರ್ಥ : ಪ್ರಜಾಪತೇ = ಎಲೈ ಪ್ರಜಾಪತಿಯೇ, ತ್ವತ್ ಅನ್ಯಃ = ನಿನ್ನಿಂದ ಹೊ
ತಾಗಿ ಬೇರೆಯವರು ಯಾರೂ, ಏತಾನಿ ವಿಶ್ವಾ ಜಾತಾನಿ = ಈಗಿರುವ ಸಮ
ಸೃಷ್ಟಿಯಾದವುಗಳು ಯಾವುವೋ, ತಾ = ಅವುಗಳನ್ನು, ನಪರಿಬಭೂವ
ಸೃಷ್ಟಿಮಾಡಲು ಉದ್ಯುಕ್ತರಾಗಲು ಶಕ್ತರಲ್ಲ, ಯತ್‌ಕಾಮಾಃ = ಯಾವ ಕ

ನಿರುಕ್ತದಲ್ಲಿ 'ಪ್ರಜಾಪತಿಃ ಪ್ರಜಾನಾಂ ಪಾತಾ, ವಾ, ಪಾಲಯಿತಾ' ಎಂದರೆ ಪ್ರಜೆಗಳನ್ನು ಸಂರಕ್ಷಿಸುವವನೂ ಪಾಲಿಸುವವನೂ ಪ್ರಜಾಪತಿಯು ಎಂಬ ವಿವರಣೆಯಿದೆ. ಇನ್ನು ಹಿರಣ್ಯಗರ್ಭನ ವಿಷಯಕವಾದ ಋಗ್ವೇದದ ೧೦-೧೨೧-೧ನೆಯ ಮಂತ್ರವನ್ನು ಹಿಂದೆಯೇ ೧೦ನೆಯ ಪುಟದಲ್ಲಿ ಕೊಟ್ಟು ವಿವರಿಸಿದೆ. 'ಹಿರಣ್ಯಗಭೋ್ರ್ಽ ಹಿರಣ್ಮಯೋ ಗಭೋ್ರ್ಽ ಹಿರಣ್ಯಮಯೋ ಗರ್ಭೋಽಸ್ಯೇತಿವಾ' ಎಂಬ ಅರ್ಥವನ್ನು 'ಹಿರಣ್ಯಗರ್ಭ' ಪದಕ್ಕೆ ನಿರುಕ್ತದಲ್ಲಿ ಹೇಳಿದೆ. ಸುವರ್ಣಮಯವಾದ, ಸುವರ್ಣ ಸದೃಶವಾದ ಗರ್ಭವುಳ್ಳವನು ಹಿರಣ್ಯಗರ್ಭನೆಂದರ್ಥ. ಹಿರಣ್ಯಗರ್ಭನ ಗರ್ಭದಲ್ಲಿ, ಮುಂದೆ ಹುಟ್ಟುವ ಜಗತ್ತೆಲ್ಲವು ಚಿನ್ನದಂತೆ ಹೊಳೆಯುತ್ತದೆ ಎಂದಭಿಪ್ರಾಯ. ಹೀಗೆ ಪ್ರಜಾಪತಿಯಿಂದಲೂ ಹಿರಣ್ಯಗರ್ಭನಿಂದಲೂ ಸೃಷ್ಟಿಯಾದುದನ್ನು ಬೇರೆ ಬೇರೆ ಕಡೆಗಳಲ್ಲಿ ಹೇಳಿದೆ.

ಆದರೆ ವಿಶ್ವಕರ್ಮನೇ ಪ್ರಜಾಪತಿಯೆಂದೂ ಹಿರಣ್ಯಗರ್ಭನೆಂದೂ ಶತಪಥ ಬ್ರಾಹ್ಮಣ ಮೊದಲಾದ ಆಧಾರಗಳಲ್ಲಿ ಹೇಳಿದೆ. "ಪ್ರಜಾಪತಿರ್ವೈ ವಿಶ್ವಕರ್ಮಾ" ಎಂದು ಶತಪಥ ಬ್ರಾಹ್ಮಣ ೯-೪-೧-೧೨ರಲ್ಲೂ "ವಿಶ್ವಕರ್ಮಾಭವತ್ ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ" ಎಂದು ಐತರೇಯ ಬ್ರಾಹ್ಮಣ ೪-೨೨ರಲ್ಲೂ ಹೇಳಿದೆ.

ವಿಶ್ವಕರ್ಮನೂ ಪ್ರಜಾಪತಿಯೂ ಒಬ್ಬನೇ ಎಂದು ಹೇಳಿರುವಂತೆಯೇ ಪ್ರಜಾಪತಿಯೂ ಹಿರಣ್ಯಗರ್ಭನೂ ಒಬ್ಬನೇ ಎನ್ನುವುದಕ್ಕೆ ಆಧಾರಗಳಿವೆ. ಉದಾಹರಣೆಗಾಗಿ, ತೈತ್ತರೀಯ ಸಂಹಿತೆಯಲ್ಲಿ 'ಪ್ರಜಾಪತಿರ್ವೈ ಹಿರಣ್ಯಗರ್ಭಃ' ಎಂದು ಹೇಳಿರುವುದನ್ನು ಗಮನಿಸಬಹುದು. ಋಗ್ವೇದದ

---

ಗಳನ್ನು ಬಯಸುತ್ತ, ತೇ = ನಿನಗೆ, ಜುಹುಮಃ = ಹವಿರಾದಿಗಳನ್ನು ಅರ್ಪಿಸಿ ಹೋಮ ಮಾಡುತ್ತೇವೆಯೋ, ತತ್ = ನಾವು ಅಪೇಕ್ಷಿಸುವ ಆ ಫಲವು, ನಃ = ನಮಗೆ, ಅಸ್ತು = ಉಂಟಾಗಲಿ, ಚ = ಮತ್ತು, ವಯಂ = ನಾವು, ರಯೀಣಾಂ = ದ್ರವ್ಯಗಳಿಗೆ, ಪತಯಃ = ಒಡೆಯರು, ಸ್ಯಾಮ = ಆಗುವಂತಾಗಲಿ.

ಸಾಯಣ ಭಾಷ್ಯಾಧಾರ : ನಪರಿಬಭೂವ = ನಪರಿಗೃಹ್ಣಾತಿ, ನವ್ಯಾಪ್ನೋತಿ, ತ್ವಮೇವ ಏತಾನಿ ಪರಿಗೃಹ್ಯಸ್ರಷ್ಟುಂ ಶಕ್ನೋಷೀತಿಭಾವಃ.

೧೦-೧೨೧-೭ನೆಯ ಮಂತ್ರದ ಸಾಯಣ ಭಾಷ್ಯದಲ್ಲಿ 'ವಿಯದಾದಿ ಭೂತಜಾತಂ ಜನಯಂತೀಃ-ಜನಯಂತ್ಯಃ, ತದರ್ಥಂ ಗರ್ಭಂ ಹಿರಣ್ಮಯಾಂಡಸ್ಯ ಗರ್ಭಭೂತಂ ಪ್ರಜಾಪತಿಂ ದಧಾನಾಃ-ಧಾರಯಂತ್ಯಃ ಆಪಃ' ಎಂದು ಹೇಳಿರುವುದನ್ನು ಆ ಮಂತ್ರದಲ್ಲಿ ಸ್ಪಷ್ಟಪಡಿಸಿದೆ. ಪಂಚ ಭೂತಗಳ ಉತ್ಪತ್ತಿಗಾಗಿ ಉದಕವು ಧರಿಸಿದ್ದ ಹಿರಣ್ಮಯ ಅಂಡದಲ್ಲಿ ಪ್ರಜಾಪತಿಯು ಗರ್ಭದೊಳಗಿದ್ದು ಉತ್ಪನ್ನನಾದುದನ್ನು ಹೇಳಿದೆಯೆಂದಾಯಿತು. ಆದುದರಿಂದ ವಿಶ್ವಕರ್ಮನೂ ಪ್ರಜಾಪತಿಯೂ ಹಿರಣ್ಯಗರ್ಭನೂ ಒಂದೇ ವ್ಯಕ್ತಿಯೆಂದು ಹೇಳಬಹುದು. ಆದರೆ ವಿಶ್ವಕರ್ಮನು ಸೃಜಿಸಿದ ಜಲದಲ್ಲಿ ಮುಂದಾಗುವ ಸುವರ್ಣ ಸದೃಶವಾದ ಅಥವಾ ಸುವರ್ಣದಂತೆ ಮೋಹಕವಾದ ಜಗತ್ತನ್ನು ಹೊರಹೊಮ್ಮಿಸುವ ಮೊದಲು ಅದನ್ನು ಗರ್ಭೀಕರಿಸಿಕೊಂಡಿದ್ದ ಕಾಲದಲ್ಲಿ ಅವನನ್ನು ಹಿರಣ್ಯಗರ್ಭನೆಂದೂ, ಸೃಷ್ಟಿಯಾದ ಮೇಲೆ ಪ್ರಜೆಗಳನ್ನು ಪಾಲಿಸುವ ಸ್ಥಿತಿಯಲ್ಲಿ ಅವನನ್ನೇ ಪ್ರಜಾಪತಿಯೆಂದೂ ಕರೆವುದು ಹೆಚ್ಚು ಸೂಕ್ತವಾದುದು.

## ಉದಕದಿಂದ ಜಗದುತ್ಪತ್ತಿಯ ಕಲ್ಪನೆಯಲ್ಲಿ ಪ್ರಗತಿ

ಹಿರಣ್ಯಗರ್ಭನು ಉದಿಸಿದ ಉದಕವು ವಿಶ್ವಕರ್ಮನಿಂದ ನಿರ್ಮಿತವಾದುದೆಂದು ಋಗ್ವೇದದ ೧೦-೮೨-೧ನೆಯ ಮಂತ್ರವಿದರಲ್ಲಿ ಹೇಳಿದೆ:

ಚಕ್ಷುಷಃ ಪಿತಾ ಮನಸಾ ಹಿ ಧೀರೋ ಘೃತಮೇನೇ ಅಜನನ್ನಮ್ನಮಾನೇ।
ಯದೇದಂತಾ ಅದದೃಹಂತ ಪೂರ್ವ ಅದಿದ್ದ್ಯಾವಾ ಪೃಥಿವೀ ಅಪ್ರಥೇತಾಂ॥ *

---

* ಅರ್ಥ: ಚಕ್ಷುಷಃ = ನೇತ್ರಾದಿ ಇಂದ್ರಿಯಗಳಿಂದ ಉಪಲಕ್ಷಿತವಾದ ಶರೀರಕ್ಕೆ, ಪಿತಾ = ಉತ್ಪಾದಕನು, ಮನಸಾಧೀರಃ = ನನ್ನ ಸಮಾನರಿಲ್ಲವೆಂಬ ತಿಳುವಳಿಕೆಯಿಂದ ಧೀರನಾದ ವಿಶ್ವಕರ್ಮನು, ಘೃತಂ = ಉದಕವನ್ನು, ಅಜನತ್ = ಉತ್ಪಾದಿಸಿದನು; ನಮ್ನಮಾನೇ = ಆ ಉದಕದಲ್ಲಿ ತೇಲಾಡುತ್ತಿರುವ, ಏನೇ = ದ್ಯಾವಾ ಪೃಥಿವಿಗಳನ್ನು ಸೃಜಿಸಿದನು, ಯದೇತ್ = ಯಾವಾಗ, ಪೂರ್ವೇ = ಪ್ರಾಚೀನವಾದ, ಅಂತಾಃ = ದ್ಯಾವಾ ಪೃಥಿವಿಗಳಿಗೆ ಸೇರಿದ ದಿಗಂತಗಳು

ಋಗ್ವೇದದ ೧೦–೧೨೧–೯ನೆಯ ಮಂತ್ರದಲ್ಲಿ "ಯಶ್ಚಾಪಶ್ಚಂದ್ರಾ ಬೃಹತೀರ್ಜಜಾನ" ಎಂದು ಹೇಳಿರುವುದರಲ್ಲಿಯೂ ವಿಶ್ವಕರ್ಮ ಪ್ರಜಾಪತಿಯು ಉದಕವನ್ನು ಸೃಷ್ಟಿಸಿದುದನ್ನು ಹೇಳಿದೆ. ಆದರೆ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಉದಕವೇ ಎಲ್ಲಕ್ಕೂ ಮೂಲವೆಂದು ಹೇಳಿದೆ. ಉದಕದಿಂದ ಸತ್ಯವೂ ಸತ್ಯದಿಂದ ಬ್ರಹ್ಮನೂ ಬ್ರಹ್ಮನಿಂದ ಪ್ರಜಾಪತಿಯೂ ಪ್ರಜಾಪತಿಯಿಂದ ಸಕಲ ದೇವತೆಗಳೂ ಹುಟ್ಟಿದುದಾಗಿ ಬೃಹದಾರಣ್ಯಕ ಉಪನಿಷತ್ತಿನ ೫–೫–೧ರಲ್ಲಿ ಹೇಳಿದ ಭಾಗವಿದು: "ಆಪ ಏವೇದಮಗ್ರ ಆಸುಸ್ತಾ, ಅಪಃ ಸತ್ಯಮಸೃಜಂತ, ಸತ್ಯಂಬ್ರಹ್ಮ, ಬ್ರಹ್ಮ ಪ್ರಜಾಪತಿಂ ಪ್ರಜಾಪತಿರ್ದೇವಾಂ" ಇದೇ ಅಭಿಪ್ರಾಯವು ಛಾಂದೋಗ್ಯ ಉಪನಿಷತ್ತಿನ ೭–೧೦–೧ ರಲ್ಲಿ ಹೇಳಿದೆ. ಆದರೆ ಉದಕವನ್ನು ಪರಬ್ರಹ್ಮವೆಂದೇ ಉಪಾಸಿಸುವವರು ಸಕಲ ಇಷ್ಟಾರ್ಥಗಳನ್ನು ಪಡೆವರೆಂದು ಮುಂದಿನ ಮಂತ್ರದಲ್ಲಿ ಹೇಳಿರುವ ಭಾಗವಿದು: "ಸ ಯೋಽಪೋಽ ಬ್ರಹ್ಮೇತ್ಯುಪಾಸ್ತ ಆಪ್ನೋತಿ ಸರ್ವಾನ್ ಕಾಮಾಂಸ್ತೃಪ್ತಿಮಾನ್ ಭವತಿ." ಮುಂದೆ ಹೇಳುವಂತೆ ನಾಸದೀಯ ಸೂಕ್ತದಲ್ಲಿಯೂ ಉದಕದ ವಿಷಯವಿದೆ. ಆದರೆ ನಾಸದೀಯ ಸೂಕ್ತದ ಮೊದಲನೆಯ ಮಂತ್ರದಲ್ಲಿ 'ಅಂಭಃ ಕಿಮಾಸೀತ್‌ಗಹನಂ ಗಭೀರಂ' ಎಂದು ಹೇಳಿರುವುದರಿಂದ ಮೊದಲು ಉದಕವಿರಲಿಲ್ಲವೆಂದಾಗುವುದು. ಇದರ ಎರಡನೆಯ ಮಂತ್ರದಲ್ಲಿ ಸ್ವಧಾ ಎಂದರೆ ಮಾಯಾ ಶಕ್ತಿಯ ಆವಿರ್ಭಾವವನ್ನು ಹೇಳಿದೆ. ಆಮೇಲೆ 'ಸಲಿಲಂ ಸರ್ವಮಾ ಇದಂ' ಎಂದು ಹೇಳಿರುವುದರಲ್ಲಿ ಉದಕವು ಆಗ ಇದ್ದುದನ್ನು ಹೇಳಿದೆ. ಇಲ್ಲಿ ಸಲಿಲವೆಂದರೆ ಪರಶಿವ.

---

ಆದದೃಹಂತ = ದೃಢವಾಗಿ ನಿಯಮಿತವಾದವೋ, ಅಧಿತ್ = ಆಗಲೇ, ದ್ಯಾವಾ ಪೃಥಿವೀ = ದ್ಯಾವಾ ಪೃಥಿವಿಗಳು, ಅಪ್ರಥೇತಾಂ = ವಿಸ್ತಾರವಾದವು.

ಸಾಯಣ ಭಾಷ್ಯಾಧಾರ: ಚಕ್ಷುಷಃ = ಚಕ್ಷುರುಪಲಕ್ಷಿತಸ್ಯ ಇಂದಿಯಸಂಘಾತ್ಮಕಸ್ಯ ಶರೀರಸ್ಯ, ಪಿತಾ = ಉತ್ಪಾದಯಿತಾ, ಧೀರೋಧೃಷ್ಟೋ ವಿಶ್ವಕರ್ಮಾ; ಘೃತಂ = ಉದಕಂ, ಅಜನತ್ = ಅಜನಯತ್; ಏನೇ = ದ್ಯಾವಾ ಪೃಥಿವ್ಯಾ; ಅಂತಾಃ = ಪರ್ಯಂತ ಪ್ರದೇಶಾಃ; ಅಪ್ರಥೇತಾಂ = ಯಥಾಕಾಮಂ ಪ್ರಥಿತೇ ಅಭೂತಾಂ; ಮನಸಾ = ನಹಿಮತ್ಸಮೋಽಸ್ತಿ ಕಶ್ಚಿದಿತಿ ಬುದ್ಧ್ಯಾ.

ಬ್ರಹ್ಮದ ಮಾಯೆಯೆಂದೇ ತಿಳಿಯಬೇಕೆಂದು ನಾಸದೀಯ ಸೂಕ್ತದ ವಿವರಣೆ ಯಲ್ಲಿ ತೋರಿಸಲಾಗುವುದು. ಹೀಗೆ ಉದಕಕ್ಕೂ ಜಗತ್ಕಾರಣಕ್ಕೂ ಇರುವ ಸಂಬಂಧ ಕಲ್ಪನೆಯಲ್ಲಿ ಪ್ರಗತಿಯಾಗಿದೆ.

## ಜಗತ್ ಸೃಷ್ಟಿಯು ಹೇಗಾಯಿತೆಂಬ ವಿಚಾರ

ಸೃಷ್ಟಿಗೆ ಮೊದಲು ಏನೇನೂ ಇರಲಿಲ್ಲವೆಂದರೆ-ಕರ್ತನು ಯಾವ ಸಾಮಗ್ರಿಯಿಂದ ಜಗತ್ತನ್ನು ಸೃಷ್ಟಿಸಿದನು ? ಏತರ ಮೇಲೆ ನಿಂತು ಸೃಷ್ಟಿ ಕಾರ್ಯವನ್ನು ಮಾಡಿದನು ?-ಎಂಬಂತಹ ಕ್ಲಿಷ್ಟವಾದ ಪ್ರಶ್ನೆಗಳು ಆರ್ಯ ಋಷಿಗಳ ಮನಸ್ಸಿನಲ್ಲಿ ಉದ್ಭವಿಸಿದವು. ಇಂತಹ ಪ್ರಶ್ನೆಗಳು ಆರ್ಯ ಋಷಿಗಳಿಗೆ ಅವರ ಸ್ವಂತ ಅನುಭವದಿಂದ ತೋರಿದಂತವುಗಳು. ಒಂದು ಒಡವೆಯನ್ನೋ, ಪಾತ್ರೆಯನ್ನೋ ಮಾಡಲು ಅದಕ್ಕೆ ಅವಶ್ಯವಾದ ಲೋಹವು ಬೇಕು ; ಅದನ್ನು ಯಾವನಾದರೂ ಮಾಡುವವನಾಗಬೇಕು; ಅವನ್ನು ಮಾಡಲು ಆಯುಧಗಳು ಬೇಕು; ಆ ಆಯುಧಗಳನ್ನು ಉಪ ಯೋಗಿಸಿಕೊಂಡು ಆ ವಸ್ತುವನ್ನು ತಯಾರಿಸಲು ಒಂದು ಸ್ಥಳಬೇಕು. ವಿಶ್ವನಿರ್ಮಾಣಮಾಡುವಾಗಲೂ ಇಂತಹವುಗಳೆಲ್ಲ ಬೇಕೆಂದು ಮನಸ್ಸಿಗೆ ಹೊಳೆಯಿತು. ಹಾಗೆಯೇ ಗೃಹ ನಿರ್ಮಾಣ ಮಾಡುವ ಅನುಭವವಾದರೂ ಅವರಿಗಿದ್ದಿತು. ಅದಕ್ಕೆ ಮುಖ್ಯವಾಗಿ ಅಂದು ಅವಶ್ಯವಾದ ವಸ್ತುವು ಯಾವು ದೆಂದರೆ ಮರ. ಇದಕ್ಕಾಗಿ ಯಾವುದಾದರೂ ಕಾಡಿಗೆ ಹೋಗಬೇಕು. ಮನೆಯನ್ನು ಕಟ್ಟಲು ಅನುಕೂಲವಾದ ಮರವನ್ನು ಅಲ್ಲಿ ಹುಡುಕಬೇಕು. ಮನೆಯನ್ನು ಕಟ್ಟಲು ಸರಿಯಾದುದೊಂದು ಸ್ಥಳವನ್ನು ಆರಿಸಿಕೊಂಡು ಅದನ್ನು ಅಳೆದು ಸಿದ್ಧಪಡಿಸಿಕೊಳ್ಳಬೇಕು. ಮರವನ್ನು ಕಡಿದು ತಂದು ಅದರಿಂದ ತೊಲೆ ಕಂಬವೇ ಮೊದಲಾದುವನ್ನು ತಯಾರಿಸಿಕೊಳ್ಳಬೇಕು. ವಿಶ್ವವೆಂಬ ಗೃಹವನ್ನು ನಿರ್ಮಾಣ ಮಾಡಲು ಇದರಂತೆಯೇ ಪದಾರ್ಥಗಳೂ, ನಿಲ್ಲಲು ಆಧಾರವೂ, ಸೃಷ್ಟಿ ಕರ್ತನೊಬ್ಬನೂ ಬೇಕೆಂದು ತೋರಿದುದು ಸ್ವಭಾವಿಕವೇ. ಋಗ್ವೇದದ ೧೦-೮೧-೪ನೆಯ ಮಂತ್ರವಿದು ಈ ತೆರದ ಪ್ರಶ್ನೆಗಳನ್ನು ಒಳಗೊಂಡಿದೆ :

ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾ ಪೃಥಿವೀ ನಿಷ್ಟತಕ್ಷುಃ ।
ಮನೀಷಣೋ ಮನಸಾ ಪೃಚ್ಛತೇದು ತದ್ಯದಧ್ಯತಿಷ್ಠದ್ಭುವನಾನಿ ಧಾರಯನ್ ॥ *

ಯಾವ ವನದ ಮರದಿಂದ ಸೃಷ್ಟಿಕರ್ತರು ದ್ಯಾವಾಪೃಥಿವಿಗಳನ್ನು ನಿರ್ಮಿಸಿದರೋ ಆ ವನವು ಯಾವುದು ? ಆ ಮರವು ಯಾವುದು ? ಮಹರ್ಷಿಗಳೇ ಈ ವಿಷಯವನ್ನು ಧ್ಯಾನರೂಪದಲ್ಲಿ ವಿಮರ್ಶಿಸಿ ತಿಳಿಯಿರಿ—ಎಂಬುದು ಈ ಮಂತ್ರದ ಅಭಿಪ್ರಾಯ. ಈ ವಿಷಯದಲ್ಲಿ ಯಾರೋ ಏನೋ ಹೇಳುತ್ತಿದ್ದುದನ್ನು ನಂಬತಕ್ಕದ್ದಲ್ಲ; ಮನಸ್ಸಿಗೆ ಧ್ಯಾನರೂಪದಲ್ಲಿದ್ದಾಗ ತೋರಿದುದನ್ನು ವಿಮರ್ಶಿಸಿ ನಿಷ್ಕರಿಸಬೇಕೆಂಬುದು ಈ ಮಂತ್ರದ ಅಭಿಪ್ರಾಯ. ಇದೇ ರೀತಿಯ ವಿಮರ್ಶಾತ್ಮಕ ಮಂತ್ರವು ಋಗ್ವೇದ ೧೦-೩೧-೭ ರಲ್ಲಿ ಇದೆ :

ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾ ಪೃಥಿವೀ ನಿಷ್ಟತಕ್ಷುಃ ।
ಸಂತಸ್ಥಾನೇ ಅಜರೇ ಇತಊತೀ ಅಹಾನಿ ಪೂರ್ವೀರುಷಸೋ ಜರಂತ ॥

ಈ ಮಂತ್ರದಲ್ಲಿ ಮುಖ್ಯಭಾಗವಾದ ಮೊದಲರ್ಧದ ಅರ್ಥವನ್ನು ಆಗಲೇ ವಿವರಿಸಿದುದಾಗಿದೆ. ಈ ತೆರದ ಪ್ರಶ್ನೆಗಳು ಋಗ್ವೇದದ ೧೦-೮೧-೪ನೆಯ ಮಂತ್ರದಲ್ಲಿರುವುದು ಗಮನಾರ್ಹವಾಗಿದೆ :

---

* ಅರ್ಥ : ಯತಃ ದ್ಯಾವಾ ಪೃಥಿವೀ ನಿಷ್ಟತಕ್ಷುಃ = ದ್ಯಾವಾ ಪೃಥಿವಿಗಳನ್ನು ಯಾವುದರಿಂದ ನಿರ್ಮಿಸಿದರೋ ಅಂತಹ, ವನಂ = ವನವು, ಕಿಂಸ್ವಿತ್ = ಯಾವುದು? ಸಃ ವೃಕ್ಷಃ = ಆ ವೃಕ್ಷವು, ಕ ಉ ಆಸ = ಯಾವುದು? ಮನೀಷಣಃ = ಎಲೈ ಪ್ರಾಜ್ಞರೇ, ಮನಸಾ = ಧ್ಯಾನರೂಪದಲ್ಲಿ, ಪೃಚ್ಛತೇದು = ವಿಮರ್ಶಿಸಿರಿ; ಯತ್ = ಯಾವ ಕರ್ತೃವು, ಭುವನಾನಿ = ಲೋಕಗಳನ್ನು, ಧಾರಯನ್ = ಧರಿಸಿ, ಅಧ್ಯತಿಷ್ಠತ್ = ಆಧಾರವಾಗಿದ್ದಿತೋ, ತತ್ = ಅದನ್ನು ವಿಮರ್ಶಿಸಿರಿ.

ಸಾಯಣಭಾಷ್ಯಾಧಾರ : ಜಗತ್ಸ್ರಷ್ಟಾರೋ ಯತೋ ಯಸ್ಮಾದ್ವನಾದ್ಯಂ ವೃಕ್ಷಮಾದಾಯ ದ್ಯಾವಾ ಪೃಥಿವೀ ನಿಷ್ಟತಕ್ಷುಃ-ತಕ್ಷಣೇನ ದ್ಯಾವಾ ಪೃಥಿವ್ಯಾ ನಿಷ್ಪಾದಿತವಂತಃ; ತದ್ವನಂ ಕಿಂ ಸ್ವಿತ್-ಕಿಂನಾಮಸ್ಯಾತ್ ; ತಥಾ ಕ ಉ ಸ ವೃಕ್ಷ ಆಸ; ಮನಸಾ-ಜಿಜ್ಞಾಸಾ ಯುಕ್ತೇನ, ಪೃಚ್ಛತೇದು ಪೃಚ್ಛತೈವ. ಕಿಂಚೇಶ್ವರೋ ಭುವನಾನಿ ಧಾರಯನ್ ಯತ್ಸ್ಥಾನಮಧ್ಯತಿಷ್ಠತ್ ತದಪಿ ಪೃಚ್ಛತ.

**ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ ಸ್ವಿತ್ ಕಥಾಸೀತ್।**
**ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿದ್ಯಾಮೌರ್ಣೋನ್ಮಹಿನಾ**
**ವಿಶ್ವಚಕ್ಷಾಃ॥**

ವಿಶ್ವಚಕ್ಷುವಾದ ವಿಶ್ವಕರ್ಮನು ಯಾವ ಆಧಾರದ ಮೇಲೆ ನಿಂತು ಯಾ ಸಾಮಗ್ರಿಯಿಂದ ದ್ಯಾವಾ ಪೃಥಿವಿಗಳನ್ನು ನಿರ್ಮಿಸಿದನು ಎಂಬ ಪ್ರಶ್ನೆಯನ್ನು ಋಷಿಯು ಎತ್ತಿರುವನು. ಇದರ ಸಾಯಣಭಾಷ್ಯದಲ್ಲಿ ಹೇಳಿದಂತೆ ಲೋ ದಲ್ಲಿ ಮಡಕೆಯನ್ನು ಮಾಡುವ ಕುಂಬಾರನು ತಾನು ವಾಸ ಮಾಡು ಮನೆಯೇ ಮುಂತಾದುವುಗಳಲ್ಲಿ ನಿಂತು ಮಣ್ಣೆಂಬ ಸಾಮಗ್ರಿಯಿಂದ ಚಕ್ರಾ ಉಪಕರಣಗಳಿಂದ ಮಡಕೆಯನ್ನು ಮಾಡಿದಂತೆ ಈಶ್ವರನು ಯಾವ ಆಧಾ ಮೇಲೆ ನಿಂತು ಯಾವ ದ್ರವ್ಯದಿಂದ ಸೃಷ್ಟಿ ಕ್ರಿಯೆಯನ್ನು ಮಾಡಿದ ಎಂದು ಹೇಳುವುದಾದರೆ, ಆ ಆಧಾರವನ್ನು ಮತ್ತು ಆ ದ್ರವ್ಯವನ್ನು ಯಾ ಏತರಮೇಲೆ ನಿಂತು ಯಾವ ದ್ರವ್ಯದಿಂದ ಮಾಡಿದನು ಎಂಬ ಮ ಪ್ರಶ್ನೆಯು ಹುಟ್ಟುವುದು. ಆದುದರಿಂದ ವಿಶ್ವಕರ್ತನು ಬೇರೆ ಯಾ ಆಧಾರವೂ ಇಲ್ಲದೆ ಬೇರೆ ಯಾವ ಸಾಮಗ್ರಿಯೂ ಇಲ್ಲದೆ ತನ್ನೊಳಗಿನಿಂದ

---

* ಅರ್ಥ : ವಿಶ್ವಚಕ್ಷಾಃ = ಎಲ್ಲವನ್ನೂ ನೋಡಬಲ್ಲ, ವಿಶ್ವಕರ್ಮಾ = ವಿಶ್ವಕರ್ಮ ಯತಃ = ಯಾವುದರಿಂದ, ಭೂಮಿಂ = ಭೂಮಿಯನ್ನು, ಜನಯನ್ = ಸೃ ಸಿದನೋ, ಮಹಿನಾ = ತನ್ನ ಮಹಿಮೆಯಿಂದ, ದ್ಯಾಂ = ದ್ಯುಲೋಕವನ್ನು ವಿಔರ್ಣೋತ್ = ಉತ್ಪನ್ನಮಾಡಿದನೋ ಅಂತಹ, ಅಧಿಷ್ಠಾನಂ = ಆಧ ಸ್ಥಾನವು, ಕಿಂ ಸ್ವಿದಾಸೀತ್ = ಯಾವುದಿದ್ದೀತು ? ಆರಂಭಣಂ = ಉಪಾದಾ ಕಾರಣವು, ಕತಮತ್ ಸ್ವಿತ್ = ಯಾವುದಿದ್ದೀತು ? ಕಥಾಸೀತ್ = ಯಾ ರೀತಿಯದಿದ್ದೀತು ?

ಸಾಯಣಭಾಷ್ಯಾಧಾರ : ಲೋಕೇಹಿ ಘಟಂ ಚಿಕೀರ್ಷುಃ ಕುಲಾಲೋ ಗೃಹಾದಿ ಕಿಂಚಿತ್ ಸ್ಥಾನಮಧಿಷ್ಠಾಯ, ಮೃದ್‌ರೂಪೇಣ ಆರಂಭದ್ರವ್ಯೇಣ ಚಕ್ರಾ ರೂಪೈಃ ಉಪಕರಣೈಃ ಘಟಂ ನಿಷ್ಪಾದಯತಿ; ತದ್‌ವತ್ ಈಶ್ವರಸ್ಯ ದಾಶ್ರಯ ದ್ಯಾವಾ ಪೃಥಿವ್ಯೋಃ ಉತ್ಪಾದನ ವೇಲಾಯಾಂ ಅಧಿಷ್ಠಾನಂ ಸ್ವಿತ್‌ಆಸೀತ್? ಕಿಂ ನಾಮಾಭೂತ್? ನ ಕಿಂಚಿದಿತ್ಯರ್ಥಃ ; ಆರಂಭಣ ಉಪಾದಾನ ಕಾರಣಂ.

ಜಗತ್ತನ್ನು ಸೃಷ್ಟಿಸಿದನು ಎಂಬುದೇ ಸರಿಯಾದ ಉತ್ತರ. ಜೇಡರ ಹುಳುವು ತನ್ನೊಳಗಿನಿಂದ ತಂತುವನ್ನು ಹೊರತೆಗೆದು ಆ ತಂತುವಿನ ಮೇಲೇ ನಿಂತು ತನ್ನ ಜಗಜ್ಜಾಲವನ್ನು ನಿರ್ಮಿಸಿಕೊಳ್ಳುತ್ತದೆ. ಈ ಅಭಿಪ್ರಾಯವನ್ನೇ ಮುಂಡಕೋಪನಿಷತ್ತಿನಲ್ಲಿ '**ಯಥೋರ್ಣನಾಭಿಃಸೃಜತೇ....ತಥಾಕ್ಷರಾತ್ ಸಂಭವತೀಹ ವಿಶ್ವಂ**' ಎಂಬ ಮಂತ್ರಭಾಗದಲ್ಲಿ ಹೇಳಿದೆ. ಇಂದ್ರನೇ ಜಗತ್ತನ್ನು ನಿರ್ಮಿಸುವನೆಂದು ಹೇಳುತ್ತಿದ್ದ ಕಾಲದಲ್ಲಿಯೇ ಈ ಪ್ರಶ್ನೆಯು ಎದ್ದು ಹಿಂದೆ ಹೇಳಿದ ಆಧಾರದಲ್ಲಿ ಅದಕ್ಕೆ ಉತ್ತರವು ದೊರೆತಿದೆ. '**ಮಾತರಂ ಚ ಪಿತರಂ ಚ ಸಾಕಮಜನಯಥಾಃ ತನ್ವಃ ಸ್ವಾಯಾಃ**' ಎಂದರೆ ತನ್ನ ಶರೀರದಿಂದಲೇ ಸಂಪೂರ್ಣವಾಗಿ ಮಾತಾಪಿತೃಗಳೆನಿಸಿದ ದ್ಯಾವಾ ಪೃಥಿವಿಗಳನ್ನು ಇಂದ್ರನು ಸೃಜಿಸಿದನು ಎಂಬುದೇ ಆ ಪ್ರಶ್ನೆಗೆ ಉತ್ತರ. ಹಾಗೆಯೇ '**ಕಿಂ ಸ್ವಿತ್ ವನಂ ಕ ಉ ಸ ವೃಕ್ಷಃ**' ಎಂದು ಮೊದಲಾಗುವ ಪ್ರಶ್ನೆಗಳಿಗೆ **ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀತ್**' ಎಂಬ ಉತ್ತರವನ್ನು ತೈತ್ತರೀಯ ಬ್ರಾಹ್ಮಣದ ೨-೮-೯-೬ರಲ್ಲಿ ಕಾಣಬಹುದು. ಈ ವಿಶ್ವವು ಯಾವ ವನದ ಯಾವ ವೃಕ್ಷದಿಂದ ನಿರ್ಮಿಸಲ್ಪಟ್ಟಿದೆ?-ಎಂಬ ಪ್ರಶ್ನೆಗೆ ಸೃಷ್ಟಿಕರ್ತೃವಾದ, ಬ್ರಹ್ಮವೇ ವನ, ಬ್ರಹ್ಮವೇ ವೃಕ್ಷ-ಎಂಬ ಉತ್ತರವು ಮೇಲಿನ ಆಧಾರದಲ್ಲಿ ಬಂದಿದೆ. ಬ್ರಹ್ಮವೆಂಬ ಪದವು ಋಗ್ವೇದದಲ್ಲಿ ಮಂತ್ರ, ಪ್ರಾರ್ಥನೆ ಎಂಬ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವುದಾದರೂ, ತೈತ್ತರೀಯ ಉಪನಿಷತ್ತಿನಲ್ಲಿ ಹೇಳಿರುವ ಅಭಿಪ್ರಾಯವು ಋಗ್ವೇದಕ್ಕೆ ಹೊಸ ದಲ್ಲ. ಸೃಷ್ಟಿಕರ್ತನು ತನ್ನೊಳಗಿನಿಂದಲೇ ಜಗತ್ತನ್ನು ನಿರ್ಮಿಸಿದನು ಅಥವಾ ತನ್ನ ಅಂಶದಿಂದ ಜಗತ್ತಾಗಿ ಪರಿಣಮಿಸಿದನು ಎಂಬ ಭಾವನೆ ಋಗ್ವೇದದ ಲ್ಲಿಯೂ ಇದೆ. ಆದರೆ ಉತ್ತಮವಾದ ಉದಾಹರಣೆಗಳನ್ನು ಮುಂಡಕೋಪ ನಿಷತ್ತಿನಲ್ಲಿ ಕೊಟ್ಟಿರುವುದರಿಂದ ಅದರ ಒಂದೆರಡು ಮಂತ್ರಗಳನ್ನು ಇಲ್ಲಿ ವಿವರಣೆಗಾಗಿ ತೆಗೆದುಕೊಳ್ಳಬಹುದು.

**ಯಥಾ ಸುದೀಪ್ತಾತ್ ಪಾವಕಾದ್ ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ ।**
**ತಥಾಕ್ಷರಾದ್ ವಿವಿಧಾಃ ಸೋಮ್ಯ ಭಾವಾಃ ಪ್ರಜಾಯಂತೇ ತತ್ರಚೈವಾಪಿಯಂತಿ ॥** *

---

* ಅರ್ಥ : ಯಥಾ = ಹೇಗೆ, ಸುದೀಪ್ತಾತ್ =ಪ್ರಜ್ವಲಿಸುವ, ಪಾವಕಾತ್ = ಅಗ್ನಿ ಯಿಂದ, ಸಹಸ್ರಶಃ = ಸಾವಿರಾರು, ವಿಸ್ಫುಲಿಂಗಾಃ = ಕಿಡಿಗಳು, ಪ್ರಭವಂತೇ =

ಹೇಗೆ ಪ್ರಜ್ವಲಿಸುವ ಅಗ್ನಿಯಿಂದ ಸಹಸ್ರಾರು ಕಿಡಿಗಳು ಹೊರಹೊಮ್ಮುತ್ತವೆಯೋ ಹಾಗೆಯೇ ನಾಶರಹಿತನಾದ ಪುರುಷನಿಂದ ನಾನಾ ವಿಧವಾದ ಪದಾರ್ಥಗಳು ಹೊರಹೊಮ್ಮಿ ಕೊನೆಗೆ ಆ ಪುರುಷನಲ್ಲಿಯೇ ಲಯವಾಗುತ್ತವೆ ಎಂದು ಅಭಿಪ್ರಾಯ. ಅಂತಹ ಪರಾತ್ಪರ ಪುರುಷನ ಸ್ವರೂಪವು ಮುಂದಿನ ಮಂತ್ರದಲ್ಲಿ ವರ್ಣಿಸಲ್ಪಟ್ಟಿದೆ:

ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ |
ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ ಪರತಃ ಪರಃ ||

ಆ ದಿವ್ಯ ಪುರುಷನು ಆಕಾರವಿಲ್ಲದವನು, ಒಳಗೂ ಹೊರಗೂ ಇರುವವನು, ಹುಟ್ಟಿಲ್ಲದವನು, ಪ್ರಾಣಮನಗಳಿಲ್ಲದವನು, ಶುದ್ಧನು, ಅವ್ಯಕ್ತಕ್ಕಿಂತ ಶ್ರೇಷ್ಠನು ಎಂದರ್ಥ.

ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರ ಸೂರ್ಯೌ ದಿಶಃ ಶ್ರೋತ್ರೇವಾಗ್ವಿವೃತಾಶ್ಚ ವೇದಾಃ |
ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ ||

ಮುಂಡಕೋಪನಿಷತ್ತಿನ ಈ ಮಂತ್ರದ ಅಭಿಪ್ರಾಯವನ್ನು ಬಸವೇಶ್ವರರ ವಚನವಿದರಿಂದ ವಿವರಿಸಬಹುದು :

ರುದ್ರಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜನ ಜನನವು ; ಇಂದ್ರ ಪಾದದಲ್ಲಿ, ಚಂದ್ರಮನದಲ್ಲಿ, ಚಕ್ಷುವಿನಲ್ಲಿ ಸೂರ್ಯನ ಜನನವು ; ನೊಸಲಲಗ್ನಿಯು, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷದ ಜನನವು ; ಶಿರದಲಿ ಉದಯ ತೆತ್ತೀಸಕೋಟ ದೇವರ್ಕಳು, ಪಾದತಳದಲ್ಲಿ ಭೂಮಿ ಜನನವು, ಶ್ರೋತ್ರದಲ್ಲಿ ದಶದಿಕ್ಕು ; ಜಗವನಿಶ್ವೇ

---

ಹುಟ್ಟುತ್ತವೆಯೋ, ತಥಾ =ಹಾಗೆ, ಸೋಮ್ಯ = ಸೋಮಪಾನಾರ್ಹನಾದ (ಶೌನಕ) ನೇ, ಅಕ್ಷರಾತ್ = ನಾಶರಹಿತನಾದ ಪುರುಷನಿಂದ, ವಿವಿಧಾಃ =ನಾನಾ ವಿಧಗಳಾದ, ಸರೂಪಾಃ = ಅದೇ ರೂಪದ ಎಂದರೆ ಚೈತನ್ಯವುಳ್ಳ, ಭಾವಾಃ = ಸೃಷ್ಟಿ ಪದಾರ್ಥಗಳು, ಪ್ರಜಾಯಂತೇ = ಹುಟ್ಟುವುವು, ಚ =ಮತ್ತು, ತತ್ರೈವ = ಆ ಪುರುಷನಲ್ಲಿಯೇ, ಅಪಿಯಂತಿ = ಐಕ್ಯವನ್ನು ಹೊಂದುವುವು.

ಪಿಸಿದ ಕುಕ್ಷಿಯೊಳಕ್ಷಯನಗಣಿತ ನೀನು ಸಾಸಿರಮುಖ, ಸಾಸಿರಕಣ್ಣು ಸಾಸಿರಭುಜ, ಸಾಸಿರಪಾದ, ಸಾಸಿರಸನ್ನಿಹಿತ ನಮ್ಮ ಕೂಡಲ ಸಂಗಮ ದೇವರು.

ಹೀಗೆ ವಚನೋಪನಿಷತ್ತುಗಳಲ್ಲಿ ಬೆಳೆದಿರುವ–ವಿರಾಟ್‌ಪುರುಷನು ಜಗವಾಗಿ ತನ್ನೊಂದು ಅಂಶದಿಂದ ಪರಿಣಮಿಸಿರುವನು–ಎಂಬ ಕಲ್ಪನೆಯು ವೇದಗಳಲ್ಲೇ ಇದೆ.

## ವಿರಾಟ್‌ಪುರುಷನಿಂದ ಜಗತ್‌ಸೃಷ್ಟಿ

ಎಲ್ಲೆಲ್ಲಿಯೂ ಒಳಗೂ ಹೊರಗೂ ವ್ಯಾಪಿಸಿರುವ ದಿವ್ಯ ಅಮೂರ್ತ ವಿರಾಟ್‌ಪುರುಷನ ಸ್ವರೂಪವು ಋಗ್ವೇದದ ಮಂತ್ರವಿದರಲ್ಲಿ' ಹೇಳಿದೆ:

ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಃ ಸ್ಪಾತ್ ।
ಸಂಬಾಹುಭ್ಯಾಂ ಧಮತಿ ಸಂಪತತ್ರೈರ್ದ್ಯಾವಾ ಭೂಮೀ ಜನಯನ್ ದೇವ ಏಕಃ ॥ *

ಎಲ್ಲೆಲ್ಲಿಯೂ ಪ್ರಸರಿಸಿದ ಕಣ್ಣು–ಮುಖ–ಬಾಹು–ಪಾದಗಳುಳ್ಳ ವಿಶ್ವಕರ್ಮನು ತನ್ನ ಬಾಹುಗಳ ಮತ್ತು ಪಾದಗಳ ಸಂಚಲನದಿಂದ ಜಗತ್ತನ್ನು ಸೃಷ್ಟಿಸುತ್ತಾನೆಂದರ್ಥ.

---

ಅರ್ಥ: ವಿಶ್ವತಃಚಕ್ಷುಃ = ಎಲ್ಲೆಲ್ಲಿಯೂ ಪ್ರಸರಿಸಿದ ಕಣ್ಣುಗಳುಳ್ಳವನೂ, ಉತ = ಮತ್ತು, ವಿಶ್ವತೋಮುಖಃ = ಎಲ್ಲೆಲ್ಲಿಯೂ ಪ್ರಸರಿಸಿದ ಮುಖವುಳ್ಳವನೂ, ವಿಶ್ವತೋಬಾಹುಃ = ಎಲ್ಲೆಲ್ಲೂ ಪ್ರಸರಿಸಿದ ಬಾಹುಗಳುಳ್ಳವನೂ, ಉತ = ಮತ್ತು ವಿಶ್ವತಸ್ಪಾತ್ = ಎಲ್ಲೆಲ್ಲಿಯೂ ಪ್ರಸರಿಸಿದ ಪಾದಗಳುಳ್ಳವನೂ ಆದ ವಿಶ್ವಕರ್ಮನು, ಬಾಹುಭ್ಯಾಂ = ಬಾಹುಗಳಿಂದ ಸಂಧಮತಿ = ಸಂಚಲನ ಮಾಡುತ್ತಾನೆ, ಪತತ್ರೈಃ = ಪಾದಗಳಿಂದಲೂ ಸಂ (ಧಮತಿ) = ಸಂಚಲನ ಮಾಡುತ್ತಾನೆ. ದ್ಯಾವಾಭೂಮೀ ಜನಯನ್ = ದ್ಯಾವಾ ಪೃಥಿವಿಗಳನ್ನು ಉತ್ಪನ್ನ ಮಾಡುತ್ತ, ಏಕಃ = ಅದ್ವಿತೀಯನಾಗಿ ದೇವಃ = ಪ್ರಕಾಶಮಾನನಾಗಿ ಇರುತ್ತಾನೆ.

ಸಾಯಣಭಾಷ್ಯಾಧಾರ: ವಿಶ್ವತಶ್ಚಕ್ಷುಃ–ಸರ್ವತೋವ್ಯಾಪ್ತಚಕ್ಷುಃ ; ಸಂಧಮತಿ – ಧಮತಿರ್ಗತಿಕರ್ಮಾ.

ಸೃಷ್ಟಿಕರ್ತನು ಅದ್ವಿತೀಯನಾದುದರಿಂದ ಅವನಿಂದ ಹೊರತಾ ಏನೂ ಇಲ್ಲವಷ್ಟೆ.

ಸಕಲ ನಿಷ್ಕಲವ ಕೂಡಿಕೊಂಡಿಪ್ಪೆಯಾಗಿ ಸಕಲ ನೀನೇ ದೇವಾ, ನಿಷ್ಕಲ ನೀನೇ ಕಂಡಯ್ಯ, ವಿಶ್ವತಶ್ಚಕ್ಷು ನೀನೇ ದೇವಾ, ವಿಶ್ವತೋಮುಖ ನೀನೇ ದೇವಾ, ವಿಶ್ವತೋಬಾಹು ನೀನೇ ದೇವಾ, ಕೂಡಲ ಸಂಗಮದೇ

ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ, ಸಕಲ ವಿಸ್ತಾರದರೂಪು ನೀನೇ ದೇ
ವಿಶ್ವತೋಚಕ್ಷು ನೀನೇ ದೇವಾ, ವಿಶ್ವತೋಮುಖ ನೀನೇ ದೇವಾ,
ವಿಶ್ವತೋಬಾಹು ನೀನೇ ದೇವಾ, ವಿಶ್ವತೋಪಾದ ನೀನೇ ದೇವಾ,
ಕೂಡಲ ಸಂಗಮ

ಜಗತ್ತಿನಲ್ಲಿ ಎಲ್ಲ ಭಾಗಗಳನ್ನೂ ಬಿಡದೆ ನೋಡಲು ಶಕ್ತನಾ ರಿಂದ 'ವಿಶ್ವತಶ್ಚಕ್ಷು'ವು ; ಈ ಕಡೆ ಆ ಕಡೆಯೆನ್ನದೆ ಎಲ್ಲ ಕಡೆಯಲ್ಲಿ ಮುಖ ಮಾಡಿರುವವನಾದುದರಿಂದ 'ವಿಶ್ವತೋಮುಖ'ನು ; ಇಲ್ಲಿ ಅಲ್ಲಿ ಎಲ್ಲೆಲ್ಲಿಯೂ ತನ್ನ ಬಾಹುಗಳಿಂದ ವಿಶ್ವವನ್ನು ಧರಿಸಿರುವುದರಿಂದ 'ವಿಶ್ವ ಬಾಹು'ವು ; ಎಲ್ಲೆಲ್ಲಿಯೂ ಇರುವುದರಿಂದ 'ವಿಶ್ವತಃ ಸ್ಪಾತ್' ಅಲ್ಲದೆ ದಲ್ಲಿ ಎಲ್ಲರ ಕಣ್ಣುಗಳೂ, ಎಲ್ಲರ ಮುಖಗಳೂ, ಎಲ್ಲರ ಬಾಹುಗಳೂ, ಪಾದಗಳೂ ಅವನವೇ ಆಗಿ ಆಯಾ ಇಂದ್ರಿಯಗಳಿಗೆ ಅವವುಗಳ ಕಾ ವನ್ನು ಮಾಡುವ ಶಕ್ತಿಯನ್ನು ಕೊಟ್ಟು ಅವುಗಳೆಲ್ಲಕ್ಕೂ ಆಧಾರವಾದ ಯಾದುದರಿಂದ ಅವನು ವಿಶ್ವತಶ್ಚಕ್ಷುವೂ ಅಹುದು ವಿಶ್ವತೋಮು ಅಹುದು. ವಿಶ್ವವು ಅವನಿಂದಲೇ ಹೊರಹೊಮ್ಮಿ ಅವನ ಬಾಹುಬಲದಿ ಸ್ಥಿರವಾಗಿ ನಿಂತು ಅವನಿಂದಲೇ ಚೈತನ್ಯವನ್ನು ಪಡೆದು, ಅದ್ವಿತೀಯ ಅವನಂಗವಾಗಿಯೇ ಹೊರಹೊಮ್ಮಿ, ಅವನಂಗವಾಗಿಯೇ ಉಳಿದು, ಆ ಳಗೇ ಕಡೆಯಲ್ಲಿ ಐಕ್ಯವಾಗುವುದೆಂಬ ಕಲ್ಪನೆ ಈ ಮಂತ್ರದಲ್ಲಿದೆ. ಈ ಮ ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ತೈತ್ತರೀಯ ಸಂಹಿತೆಯಲ್ಲಿಯೂ ಉ ವಾಗಿದೆ. ಶ್ವೇತಾಶ್ವತರ ಉಪನಿಷತ್ತಿನಲ್ಲಿರುವ ಈ ಮಂತ್ರದ ಶ ಭಾಷ್ಯದಲ್ಲಿ–ಪಕ್ಷಿಗಳಿಗೆ ರೆಕ್ಕೆಗಳನ್ನೂ ಮನುಷ್ಯಾದಿಗಳಿಗೆ ಬಾಹುಗ ಆ ದಿವ್ಯಪುರುಷನು ಸಂಯೋಜನೆ ಮಾಡುತ್ತಾನೆಂಬುದು ಈ ಮಂತ್ರದ

ರಾರ್ಥದ ಅಭಿಪ್ರಾಯವೆಂದು ಹೇಳಿದೆ. "ಸಂಬಾಹುಭ್ಯಾಂ ಧಮತಿ ಸಂಯೋಜಯತಿ ಇತ್ಯರ್ಥಃ....ಪಕ್ಷಿಣಶ್ಚ ಧಮತಿ ದ್ವಿಪಾದೋ ಮನುಷ್ಯಾದೀಂಶ್ಚ ಪತತ್ರೈಃ" ಎಂಬುದು ಶಾಂಕರ ಭಾಷ್ಯ ಭಾಗ. ಶ್ವೇತಾಶ್ವತರ ಉಪನಿಷತ್ತಿನಲ್ಲಿ ಈ ಮಂತ್ರದ ಹಿಂದಿನ ಮಂತ್ರದಲ್ಲಿ ಸೃಷ್ಟಿ–ಸ್ಥಿತಿ–ಲಯ ಕಾರ್ಯಗಳೆಲ್ಲಕ್ಕೂ ರುದ್ರನೇ ಕಾರಣನೆಂದೂ, ಅವನಲ್ಲದೆ ಮತ್ತೊಬ್ಬನಾರೂ ಇಲ್ಲವೆಂದೂ ಹೇಳಿದೆ. ಆ ಮಂತ್ರದ ಶಾಂಕರ ಭಾಷ್ಯದ ಕಡೆಯಲ್ಲಿ ಆ ಮಂತ್ರದಲ್ಲಿ ಉಕ್ತನಾದ ವಿರಾಟ್ ಆತ್ಮನ ಸೃಷ್ಟಿಕ್ರಿಯೆಯನ್ನು 'ವಿಶ್ವತಶ್ಚಕ್ಷುಃ' ಎಂದು ಮೊದಲಾಗುವ ಈ ಮಂತ್ರದಲ್ಲಿ ಹೇಳುವುದೆಂದು ತಿಳಿಸಿದೆ. ಆ ಮಂತ್ರವಿದು:

ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುರ್ಯ ಇಮಾಲ್ಲೋಕಾನೀಶತ ಈಶನೀಭಿಃ।
ಪ್ರತ್ಯಙ್ ಜನಾಸ್ತಿಷ್ಠತಿ ಸಂಚುಕೋಚಾಂತಕಾಲೇ ಸಂಸೃಜ್ಯ ವಿಶ್ವಾ ಭುವನಾನಿ ಗೋಪಾಃ॥ *

ಇದನ್ನು ಹೀಗೆ ಕನ್ನಡಿಸಬಹುದು:

ಕಂದ॥ ಒರ್ವನೆ ದಲ್ ರುದ್ರಂ ಪೆರ|
ತೊರ್ವಂ ದೇವಂ ಸಟೆ, ಪೊರೆವಂ ಶಕ್ತಿಗಳಿಂ ||
ಸರ್ವಜಗತ್ತಿದನಾಳ್ವಂ |
ಸರ್ವಾಂತರ್ಯಾಮಿ ಸೃಷ್ಟಿಲಯಗಳ ಕರ್ತಂ ||

---

* ಅರ್ಥ: ಯಃ = ಯಾರು, ಇಮಾನ್‌ಲೋಕಾನ್ = ಈ ಲೋಕಗಳನ್ನು, ಈಶನೀಭಿಃ = ತನ್ನ ಶಕ್ತಿಗಳಿಂದ, ಈಶತೇ = ಆಳುತ್ತಾನೋ, ರುದ್ರಃ = ಆ ರುದ್ರನು, ಏಕಃ = ಅದ್ವಿತೀಯನು, ನದ್ವಿತೀಯಾಯ ತಸ್ಥುಃ = ಎರಡನೆಯವನು ಯಾರೂ ಇಲ್ಲ. ಜನಾಃ = ಎಲ್ಲೈ ಮನುಷ್ಯರೇ, ಪ್ರತ್ಯಙ್‌ತಿಷ್ಠತಿ = ಎಲ್ಲರೊಳಗೆ ಅಂತರ್ಯಾಮಿಯಾಗಿದ್ದಾನೆ. ವಿಶ್ವಾಭುವನಾನಿ = ಎಲ್ಲ ಲೋಕಗಳನ್ನು, ಸಂಸೃಜ್ಯ ಸೃಷ್ಟಿಸಿ, ಗೋಪಾಃ = ಪಾಲಕನೂ ಆಗಿದ್ದಾನೆ; ಅಂತಕಾಲೇ = ಪ್ರಲಯ ಕಾಲದಲ್ಲಿ, ಸಂಚುಕೋಚ = ತನ್ನೊಳಗೇ ಲಯಗೊಳಿಸಿಕೊಳ್ಳುತ್ತಾನೆ.

ಶಾಂಕರ ಭಾಷ್ಯಾಧಾರ: ಉತ್ತರೋ ಮಂತ್ರಸ್ತಸ್ಯೈವ ವಿರಾಡಾತ್ಮನಾವಸ್ಥಾನಂ ಸತ್ ಸ್ರಷ್ಟೃತ್ವಂ ಪ್ರತಿಪಾದಯತಿ.

ವಚನಕಾರರ ನಿಲುವಾದರೂ ಇದೇ :

‘ ಓಂ ದ್ಯಾವಾ ಭೂಮೀ ಜನಯುನ್ ದೇವ ಏಕಃ ’
‘ ಏಕೋಹಿ ರುದ್ರೋ ನದ್ವಿತೀಯಾಯ ತಸ್ಥಃ ’
ಎಂದು ನಂಬುವುದು ಕಾಣಿರಣ್ಣಾ
‘ ಚಕಿತಮಭಿಧತ್ತೇ ’ ಎಂದು ಶ್ರುತಿಸಾರುತ್ತೈದಾವೆ.
ಜಗದಕರ್ತ ಕೂಡಲ ಸಂಗಮನೊಬ್ಬನೇ ಕಾಣಿರಣ್ಣಾ.

ಈಶಾವ್ಯಾಸ್ಯೋಪನಿಷತ್ತಿನಲ್ಲಿ ‘ **ಈಶಾವಾಸ್ಯಮಿದಂ ಸ** **ಯತ್ಕಿಂ ಚ ಜಗತ್ಯಾಂಜಗತ್** , ಎಂದರೆ ‘ ಈಶನಿಂ ವಾಸ್ಯಮಿದು ಸಚಾರಚರಂ ’ಎಂದು ಹೇಳಿರುವಂತೆ ಪರಮೇಶ್ವರನು ಅಣುರೇಣುತೃಣ ವನ್ನೂ ಬಿಡದೆ ಎಲ್ಲವನ್ನೂ ವ್ಯಾಪಿಸಿ ಚೈತನ್ಯದಾಯಕನಾಗಿರುವುದರಿ ಎಲ್ಲ ಪ್ರಾಣಿಗಳ ಕಣ್ಣಿಗೆ, ಕಾಣುವ ಶಕ್ತಿ ಬಂದಿದೆ. ಎಲ್ಲ ಪ್ರಾಣಿಗಳ ಕೇಳುವ ಶಕ್ತಿ ಬಂದಿದೆ. ಹಾಗೆಯೇ ಎಲ್ಲ ಪ್ರಾಣಿಗಳ ಇತರ ಅಂಗಗ ಅವವುಗಳ ಕಾರ್ಯವನ್ನು ಮಾಡುವ ಶಕ್ತಿ ಬಂದಿರುವುದರಿಂದ ಪರಮೇ ನನ್ನು ವಿಶ್ವತಶ್ಚಕ್ಷುಃ, ವಿಶ್ವತೋಮುಖಃ, ವಿಶ್ವತೋಬಾಹುಃ, ವಿಶ್ವತೋ ಎಂದು ಮೊದಲಾಗಿ ಹೇಳಬಹುದಾದರೂ, ಅವನೇ ಜಗತ್ತಾಗಿ ಪರಿ ಸಿದನು ಎಂಬುದಕ್ಕೆ ಆಕ್ಷೇಪವೊಂದುಂಟು. ಅದು ಹೀಗಿದೆ:

“ ಜಗವಪ್ಪುದು ಮೇಣೀಶ್ವರನಿಂದ |
ಬಗೆ, ಕಾರಣನೀಶ್ವರನದರಿಂದ |
ಎನಲು ಮರನೆ ಮಾಳಿಗೆಯಾದಂತೆ |
ಪುನರಪಿ ಮರ ನಿಲ್ಲದೆ ಪೋದಂತೆ |
ಪರಶಿವನೇ ಜಗದಾಕೃತಿಯಾಗಿ |
ಪರಿಣಮಿಸಿದೊಡಂತವನಿಲ್ಲಾಗಿ |
ಲೋಕನಿಯಾಮಕನಿಲ್ಲವೆನಿಕ್ಕು |
ಈ ಕಲ್ಪನೆ ವಿಧಿಯಲ್ಲದದಕ್ಕು |

ಈ ಆಕ್ಷೇಪದ ನಿಲುವು ಹೀಗಿದೆ—ಒಂದು ಮರವನ್ನು ಕಡಿದು ತೊಲೆಗಳಿಂದ ಮಾಳಿಗೆಯನ್ನು ಮಾಡಿದರೆ, ಮತ್ತೆ ಆ ಮರವು ಹೇಗೆ ಇರು

ಲ್ಲವೋ ಹಾಗೆಯೇ ಪರಮೇಶ್ವರನು ಪ್ರಪಂಚವಾಗಿ ಮಾರ್ಪಟ್ಟರೆ ಆ ಪ್ರಪಂಚವನ್ನು ಕಾಪಾಡುವ ಈಶ್ವರನೇ ಇಲ್ಲದಂತಾಗುವುದು; ಅದರಿಂದ ವಿಶ್ವವು ಪರಮೇಶ್ವರನ ಪರಿಣಾಮದಿಂದ ಆಗುವುದೆಂಬ ವಾದವು ಸರಿಯಲ್ಲ–ಎಂಬುದೇ ಈ ಆಕ್ಷೇಪ. ಆದರೆ ಜೇಡನು ತನ್ನ ಒಂದು ಅಂಶದಿಂದ ಅದರ ಜಗಜ್ಜಾಲವನ್ನು ನಿರ್ಮಿಸಿಯೂ ಅದು ಉಳಿದು ಅದರ ಜಗತ್ತನ್ನು ಆಳುವಂತೆ ಪರಮಾತ್ಮನು ತನ್ನ ಕಿಂಚಿದಂಶದಿಂದ ಜಗತ್ತನ್ನು ನಿರ್ಮಿಸಿ, ಬಹ್ವಂಶದಿಂದ ತಾನು ನಿರ್ಮಿಸಿದ ಜಗತ್ತನ್ನು ಆಳುವನು. ಇದಕ್ಕೆ ಋಗ್ವೇದದ ಪುರುಷಸೂಕ್ತದ ಮೊದಲಮಂತ್ರದಲ್ಲಿಯೇ ಆಧಾರವಿದೆ:

ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ ॥ *

ಈ ಮಂತ್ರವನ್ನು ಹೀಗೆ ಕನ್ನಡಿಸಬಹುದು:

ಸಾವಿರದ ತಲೆಯವನು ಸಾವಿರದ ಕಣ್ಣವನು ।
ಸಾವಿರದ ಪದದವನು ಪರಮಪುರುಷೋನ್ನತನು ।
ಆವರಿಸಿ ಮೂಜಗವ ಬಿಡದೆಯದನೆಲ್ಲವನು ।
ಭಾವಿಸೆ ದಶಾಂಗುಲಮತಿಕ್ರಮಿಸಿ ನಿಂದಿಹನು ।

---

* ಅರ್ಥ: ಪುರುಷಃ = ಪರಮೇಶ್ವರನು, ಸಹಸ್ರಶೀರ್ಷಾ = ಅನಂತವಾದ ತಲೆಗಳುಳ್ಳವನು, ಸಹಸ್ರಾಕ್ಷಃ = ಅನಂತವಾದ ಕಣ್ಣುಗಳುಳ್ಳವನು, ಸಹಸ್ರಪಾತ್ = ಅನಂತ ಪಾದಗಳುಳ್ಳವನು, ಸಃ = ಅವನು, ಭೂಮಿಂ = ಲೋಕವನ್ನು, ವಿಶ್ವತಃ = ಎಲ್ಲೆಲ್ಲಿಯೂ, ವೃತ್ವಾ = ವ್ಯಾಪಿಸಿ, ದಶಾಂಗುಲಂ = ಹತ್ತು ಅಂಗುಲದಷ್ಟು, ಅತ್ಯತಿಷ್ಠತ್ = ಅತಿಕ್ರಮಿಸಿ ನಿಂದಿರುವನು.

ಸಾಯಣಭಾಷ್ಯಾಧಾರ: ಸಹಸ್ರ ಶಬ್ದಸ್ಯ ಉಪಲಕ್ಷಣತ್ವಾತ್ ಅನಂತೈಃ ಶಿರೋಭಿಃ ಯುಕ್ತಃ, ಯಾನಿ ಸರ್ವಪ್ರಾಣಿನಾಂ ಶಿರಾಂಸಿ ತಾನಿ ಸರ್ವಾಣಿ ತದ್ದೇಹಾಂತಃಪಾತಿತ್ವಾತ್ ತದೀಯಾನ್ಯೇವ ಇತಿ ಸಹಸ್ರಶೀರ್ಷತ್ವಂ; ದಶಾಂಗುಲ ಪರಿಮಿತಂ ದೇಶಂ, ಅತ್ಯತಿಷ್ಠತ್ ಅತಿಕ್ರಮ್ಯ ವ್ಯವಸ್ಥಿತಃ; ದಶಾಂಗುಲಂ ಇತಿ ಉಪಲಕ್ಷಣಂ ಬ್ರಹ್ಮಾಂಡಾತ್ ಬಹಿರಪಿ ಸರ್ವತೋ ವ್ಯಾಪ್ಯಾವಸ್ಥಿತಃ–ಇತಿ ಅರ್ಥಃ.

ಸಾವಿರದಷ್ಟು ತಲೆ ಕಣ್ಣು ಪಾದವೇ ಮೊದಲಾದವುಗಳನ್ನು ಉ
ವನು ಎಂದರೆ ಎಣಿಸಿದಂತೆ ಸಾವಿರ ತಲೆ ಕಣ್ಣು ಪಾದ ಮೊದಲಾದವುಗಳ
ವನು ಎಂದರ್ಥವಲ್ಲ. ಸಾವಿರವೆಂದರೆ ಲೆಕ್ಕವಿಲ್ಲದಷ್ಟು ತಲೆ ಮೊದಲ
ಅಂಗಗಳುಳ್ಳವನೆಂದು ಅಭಿಪ್ರಾಯ. ವಿಶ್ವವ್ಯಾಪಕನಾದ ಪರಮಾತ್ಮನೊ
ಅನಂತ ಪ್ರಾಣಿಗಳ ಅಂಗಗಳಿರುವುದರಿಂದ ಪರಮಾತ್ಮನು ಅನಂತವಾದ
ಮೊದಲಾದ ಅಂಗಗಳುಳ್ಳವನೆಂದು ಹೇಳಿದೆ. ದಶಾಂಗುಲವೆಂದು ಹೇ
ಹತ್ತೇ ಅಂಗುಲವೆಂದಲ್ಲ. ಹತ್ತು ಅಂಗುಲವೆಂಬುದನ್ನು ಉಪಲಕ್ಷಣಾರ್ಥವಾ
ತಿಳಿಯಬೇಕು. ಬ್ರಹ್ಮಾಂಡವನ್ನು ವ್ಯಾಪಿಸಿರುವುದಲ್ಲದೆ ಅದರ ಮೇಲೆಯ
ಅದನ್ನು ಅತಿಕ್ರಮಿಸಿರುವನೆಂದು ಭಾವಿಸಬೇಕು. ವಚನಕಾರರ ನಿಲು
ದರೂ ಇದೇ :

ಶ್ರುತಿ ತತಿ ಶಿರದ ಮೇಲೆ ಅತ್ಯತಿಷ್ಠತ್ ದಶಾಂಗುಲನ
ನಾನೇನೆಂಬೆನಯ್ಯಾ, ಘನಕ್ಕೆ ಘನಮಹಿಮನ, ಮನಕ್ಕಗೋಚರನ
ಅಣೋರಣೀಯನ ಮಹತೋ ಮಹೀಯನ
ಮಹಾದಾನಿ ಕೂಡಲಸಂಗಮ ದೇವನ

ವೇದೋಪನಿಷತ್ತುಗಳ ಆಧಾರದ ಮೇಲೆ ನಿಂತು ಬೆಳೆದು ಬಂದಿ
ವಚನ ವಾಙ್ಮಯದ ನಿರ್ಮಾಪಕರನ್ನು ಅವೈದಿಕರು ಎಂದುಕೊಳ್ಳುವ ಕೆ
ಆಧುನಿಕ ವೀರಶೈವ ವಿದ್ವಾಂಸರು ಇಂತಹ ವಚನಗಳನ್ನು ಕಣ್ತೆ
ನೋಡಬೇಕು.

ಪುರುಷಸೂಕ್ತದ ಮತ್ತೊಂದು ಮಂತ್ರವಿದೂ ಉಲ್ಲೇಖಾರ್ಹವಾಗಿ

ಏತಾವಾನಸ್ಯ ಮಹಿಮಾತೋ ಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂದಿವಿ ॥ *

* ಅರ್ಥ : ಏತಾವಾನ್ = ಈ ಹಿಂದೆ ಹೇಳಿದ ಚರಾಚರಾತ್ಮಕ ಪ್ರಪಂಚನೆಲ್ಲ
ಅಸ್ಯ = ಆ ಪುರುಷನ, ಮಹಿಮಾ = ಸಾಮರ್ಥ್ಯವೇ ಆಗಿದೆ ; ಚ = ಮತ್ತು
ಪುರುಷಃ = ಆ ಪುರುಷನು, ಅತಃ = ಈ ಜಗತ್ತೆಲ್ಲಕ್ಕಿಂತಲೂ, ಜ್ಯಾಯಾನ್
ಅಧಿಕನು, ವಿಶ್ವಾಭೂತಾನಿ =ಭೂತಗಳೆಲ್ಲವೂ, ಅಸ್ಯ = ಅವನ, ಪಾದಃ = ಕಾ

ಈ ಮಂತ್ರವನ್ನು ಹೀಗೆ ಕನ್ನಡಿಸಬಹುದು :

ಇದು ಎಲ್ಲಮುಂ ಪರಮಪುರುಷನಾ ಮಹಿಮೆಯೇ|
ಇದು ಎಲ್ಲಕುಂ ಪರಮಪುರುಷನಧಿಕನೇ|
ಇದು ಎಲ್ಲ ಭೂತಮುಂ ಪರಮನ ಚತುರ್ಥಾಂಶ|
ಪದಮುಲಮೃತಂ ದಿವಿಯೊಳುಳಿದ ಮುಕ್ಕಾಲಂಶ|

ಈ ಎರಡು ಮಂತ್ರಗಳಿಂದ ತಿಳಿದುಬರುವಂತೆ, ಪರಮೇಶ್ವರನು ತನ್ನ ಕಿಂಚಿದಂಶದಿಂದ ಈ ಅಪರ ಜಗತ್ತಾಗಿ ಪರಿಣಮಿಸಿರುವನಾದರೂ ಅವನ ಬಹ್ವಂಶವನ್ನು ಪರವಾಗಿಯೇ ಉಳಿಸಿಕೊಂಡು ತನ್ನ ಅಂಗವೇ ಆದ ಕಿಂಚಿದಂಶ ಜಗತ್ತನ್ನು ಆಳುವನು ಎಂದು ಭಾವಿಸಬೇಕು. ಮುಪ್ಪಾಗಂಶವು ಜಗತ್ತಾಗದೆ ಉಳಿಯುವುದೆಂದರೆ ಬಹ್ವಂಶವು ಜಗತ್ತಾಗದೆ ಉಳಿಯುವುದೆಂದು ತಿಳಿಯ ಬೇಕು. ಸಾಯಣಭಾಷ್ಯದಲ್ಲಿ ಹೇಳಿದಂತೆ ದಶಾಂಗುಲವೆಂಬುದನ್ನು ಉಪ ಲಕ್ಷಣವಾಗಿ ಅರಿಯಬೇಕೆನ್ನುವಂತೆಯೇ, ಮುಕ್ಕಾಲಂಶ ಕಾಲಂಶ ಮೊದಲಾದ ಅರ್ಥವುಳ್ಳ ಪದಗಳೂ ಉಪಲಕ್ಷಣವಾಗಿ ಉಪಯೋಗಿಸಲ್ಪಟ್ಟಿವೆ. ಜಗತ್ತಾ ಗದೆ ಉಳಿದಿರುವ ಬಹ್ವಂಶವು ಜಗವಾಗಿರುವ ಕಿಂಚಿದಂಶವನ್ನು ಒಳಗೂ ಹೊರಗೂ ಎಲ್ಲೆಲ್ಲಿಯೂ ವ್ಯಾಪಿಸಿ ತಾನೇ ತಾನಾಗಿ ಇರುವುದೆಂದು ಭಾವ. ಹೀಗೆ ಎಲ್ಲೆಲ್ಲಿಯೂ ಪರಮಾತ್ಮನು ನಿಬಿಡವಾಗಿ ವ್ಯಾಪಿಸಿರುವುದರಿಂದಲೇ ಪ್ರಾಣಿಗಳೆಲ್ಲವೂ ಚೈತನ್ಯವನ್ನು ಪಡೆದಿರುವುವು ; ಅವುಗಳ ಕಣ್ಣು ಕಿವಿ ಮೊದ ಲಾದ ಇಂದ್ರಿಯಗಳು ಪರಮಾತ್ಮನಿಂದ ಚೈತನ್ಯವನ್ನು ಪಡೆಯುವುವು ಎಂಬು ದನ್ನು ಕೇನೋಪನಿಷತ್ತನ್ನು ವಿವರಿಸುವಾಗ ಸುಸ್ಪಷ್ಟಗೊಳಿಸುವುದಾದರೂ

---

ಭಾಗ ಮಾತ್ರ, ಅಸ್ಯ = ಅವನ, ತ್ರಿಪಾತ್ = ಮುಪ್ಪಾಗಪಾಲು ಭಾಗವು, ದಿವಿ = ಸ್ವಪ್ರಕಾಶದಲ್ಲಿ, ಅಮೃತಂ = ಅಕ್ಷರವಾಗಿರುತ್ತದೆ.

ಸಾಯಣ ಭಾಷ್ಯಾಧಾರ : ಮಹಿಮಾ–ಸ್ವಕೀಯ ಸಾಮರ್ಥ್ಯ ವಿಶೇಷಃ ; ಅಸ್ಯ–ಪುರು ಷಸ್ಯ, ವಿಶ್ವಾ–ಸರ್ವಾಣಿ ಭೂತಾನಿ, ಪಾದಃ–ಚತುರ್ಥೋಽಂಶಃ, ಅಸ್ಯ–ಪುರು ಷಸ್ಯ, ಅವಶಿಷ್ಟಂ–ತ್ರಿಪಾತ್ ಸ್ವರೂಪಂ, ಅಮೃತಂ–ವಿನಾಶ ರಹಿತಂ, ದಿವಿ– ದ್ಯೋತ ನಾತ್ಮಕೇ ಸ್ವಪ್ರಕಾಶಸ್ವರೂಪೇ ವ್ಯವಸ್ಥಿತಃ–ಇತಿ ಶೇಷಃ.

ಪ್ರಕೃತ ವಿಷಯದಲ್ಲಿ ಸ್ವಲ್ಪ ಬೆಳಕನ್ನು ಚೆಲ್ಲಲು ಕೇನೋಪನಿಷತ್ತಿನ ಮೊ...
ಮಂತ್ರಗಳ ಭಾಷಾಂತರವನ್ನಿಲ್ಲಿ ಕೊಟ್ಟಿದೆ:

ಯಾರಿಚ್ಛೆಯಿಂ ಮನವು ವಿಷಯುಗಳೊಳೆರಗುವುದು? |
ಯಾರ ಯೋಜನೆಯಿಂದ ಮೊದಲುಸಿರು ಚಲಿಸುವುದು? |
ಯಾರಿಚ್ಛೆಯಿಂ ಜನರು ಮಾತುಗಳನಾಡುವುದು? |
ಯಾರದೋ ಕಿವಿ ಕಣ್ಣ ನಿಯಮಿಸುವ ದೈವಮದು? | *

ಅದು ಕಿವಿಯ ಒಳಕಿವಿಯು, ಅದು ಮನದ ಒಳ ಮನವು |
ಅದು ವಾಕ್ಕಿನೊಳವಾಕ್ಕು, ಅದು ಜೀವದೊಳಜೀವ |
ಅದು ಕಣ್ಣಿನೊಳಗಣ್ಣು ; ಮೃತಿಹೊಂದಿ ಲೌಕಿಕಕೆ |
ಇದಂ ತ್ಯಜಿಸಿ ಧೀರರ್ ಪಡೆವರಮೃತತ್ವಮಂ | †

ಹೀಗೆ ಚಕ್ಷುರಾದಿ ಇಂದ್ರಿಯಗಳಿಗೆ ವಿಶ್ವವ್ಯಾಪಕನಾದ ಪರಮಾತ್ಮ... ಚೈತನ್ಯದಾಯಕನಾಗಿರುವುದರಿಂದಲೇ ಪುರುಷಸೂಕ್ತವೇ ಮೊದಲಾದ ಮ... ಗಳಲ್ಲಿ ಅವನು 'ವಿಶ್ವತಃ ಚಕ್ಷುಃ' ಎಂದು ಮೊದಲಾಗಿ ವರ್ಣಿಸಲ್ಪಟ್ಟಿ... ನೆಂಬುದು ವ್ಯಕ್ತವಾಗುವುದು. ನಮ್ಮ ದೇಹದಿಂದ ಹೊರಹೊಮ್ಮಿದ ... ಚರಣಾದಿಗಳ ಚಲನವಲನಗಳಿಗೆ ಅವುಗಳು ನಮ್ಮ ದೇಹದಿಂದಲೇ ... ಯನ್ನು ಪಡೆಯುತ್ತವೆ. ಪರಮಾತ್ಮನಿಂದಲೇ ಚೈತನ್ಯವನ್ನು ಪ... ಬ್ರಹ್ಮಾದಿಯಾಗಿ ಸ್ಥಾವರಾಂತವಾದ ಪ್ರಪಂಚವೆಲ್ಲವೂ ಆ ಪರಮಾತ್ಮ... ಕಿಂಚಿದಂಶದಿಂದಲೇ ಉತ್ಪನ್ನವಾಗಿದೆಯೆಂಬುದು ಸ್ಪಷ್ಟ.

---

* ಕೇನೇಷಿತಂ ಪತತಿ ಪ್ರೇಷಿತಂ ಮನಃ? |
ಕೇನ ಪ್ರಾಣಃ ಪ್ರಥಮಃ ಪ್ರೈತಿಯುಕ್ತಃ? |
ಕೇನೇಷಿತಾಂ ವಾಚಮಿಮಾಂ ವದಂತಿ? |
ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ? |

† ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ |
ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ |
ಚಕ್ಷುಷಶ್ಚಕ್ಷುರತಿಮುಚ್ಯ ಧೀರಾಃ |
ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ |

## ಜಗತ್ತಿನ ಆವಿರ್ಭಾವ

ಪಂಚಭೂತಗಳಲ್ಲೊಂದರಿಂದಲೋ ಅಥವಾ ಮತ್ತಾವುದೊಂದರಿಂದಲೋ ಜಗತ್ತು ಆವಿರ್ಭಾವವಾಯಿತೆಂಬ ಕಲ್ಪನೆಯು ಆರ್ಯ ಋಷಿಗಳಿಗೆ ಹೊಳೆಯದೆ ಹೋಗಲಿಲ್ಲ. ಅಷ್ಟೇಕೆ-ಕಾಲ, ಸ್ವಭಾವ, ನಿಯತಿ, ಯದೃಚ್ಛೆ ಮೊದಲಾದವುಗಳೇ ಜಗತ್ತಿಗೆ ಮೂಲಕಾರಣವೆಂದು ಒಂದು ಕಾಲದಲ್ಲಿ ಭಾವಿಸಿದ್ದರೆಂಬುದು ಅದನ್ನು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಖಂಡಿಸಿರುವುದರಿಂದ ತಿಳಿದುಬರುವುದು. ಇನ್ನು ಪಂಚಭೂತಗಳಲ್ಲಿ ಪ್ರಮುಖವಾದ ಪೃಥ್ವಿ ತತ್ತ್ವವೇ ಜಗತ್ಕಾರಣವೆಂಬ ಕಲ್ಪನೆಯು ಬಾರದಿರುವುದಕ್ಕೆ ಅದರ ಮೂರ್ತಸ್ವರೂಪವೇ ಕಾರಣವಾಗಿರಬೇಕು.

## ಉದಕವೇ ಜಗತ್ಕಾರಣವು

ಪೃಥ್ವಿತತ್ತ್ವಕ್ಕಿಂತ ಸೂಕ್ಷ್ಮವಾದ ಉದಕವೇ ಜಗತ್ಕಾರಣವೆಂದು ಭಾವಿಸಲ್ಪಟ್ಟಿದ್ದಿತೆಂಬುದಕ್ಕೆ ಆಧಾರವನ್ನು ಹಿಂದೆಯೇ ಕೊಟ್ಟಿದೆ. ‘ **ಆಪಃ ಸತ್ಯಮುಸೃಜಂತ, ಸತ್ಯಂ ಬ್ರಹ್ಮ, ಬ್ರಹ್ಮ ಪ್ರಜಾಪತಿಂ, ಪ್ರಜಾಪತಿರ್ದೇವಾನ್** ’ ಎಂದು ಹೇಳಿರುವ ಈ ಬೃಹದಾರಣ್ಯಕ (೫--೫-೧) ಮಂತ್ರದಲ್ಲಿ ನೀರಿನಿಂದ ಸತ್ಯವೂ, ಸತ್ಯದಿಂದ ಹಿರಣ್ಯಗರ್ಭನೆಂಬ ಬ್ರಹ್ಮನೂ, ಬ್ರಹ್ಮನಿಂದ ಪ್ರಜಾಪತಿಯೂ, ಪ್ರಜಾಪತಿಯಿಂದ ದೇವತೆಗಳೂ ಉತ್ಪನ್ನರಾದರೆಂದು ಹೇಳಿರುವುದಷ್ಟೆ. ಸತ್ಯವೆಂದರೆ ಇಂದ್ರಿಯಗಳಲ್ಲಿ ಮನಸ್ಸಿಗಾದರೂ ಗೋಚರವಾಗುವಂತಹುದೆನ್ನಬಹುದು. ಉದಕದಿಂದ ಅದಕ್ಕಿಂತಲೂ ಸೂಕ್ಷ್ಮವಾದುದೆನ್ನಬಹುದಾದ ಸತ್ಯವು ಉತ್ಪನ್ನವಾಯಿತೆನ್ನುವುದು ಆಶ್ಚರ್ಯವೆ; ಆದರೆ ನಾಸದೀಯ ಸೂಕ್ತದ ವಿವರಣೆಯಲ್ಲಿ ತೋರಿಸುವಂತೆ ಆಪ್, ಸಲಿಲ ಎಂದು ಹೇಳಲ್ಪಟ್ಟಿರುವ ಈ ಉದಕ ತತ್ತ್ವವೆಂದರೆ ಪರಶಿವಬ್ರಹ್ಮದ ಮಾಯೆ ಶಕ್ತಿತತ್ತ್ವವೇ. ಆದುದರಿಂದ, ಸತ್ಯವು ಅದರಿಂದ ಉದಯಿಸಿತೆನ್ನುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಇನ್ನು ಸತ್ಯದಿಂದ ಬ್ರಹ್ಮವು ಉದಯವಾಯಿತೆಂಬುದರಲ್ಲಿ, ಬ್ರಹ್ಮ ಎಂದರೆ ಜಗತ್ಕಾರಣವಾದ ಪರಬ್ರಹ್ಮವಲ್ಲ. ಇಲ್ಲಿ ಸತ್ಯವೆಂದರೆ

ವಿಶ್ವಕರ್ಮನೆಂದೂ, ಬ್ರಹ್ಮ ಎಂದರೆ ಹಿರಣ್ಯಗರ್ಭನೆಂದೂ ಅರ್ಥಮಾಡ ಬೇಕು. ಇದು ಹೇಗೇ ಇರಲಿ. ಉದಕವೇ ಮೊದಲು ಎಲ್ಲೆಲ್ಲಿಯೂ ಆವರಿ ದ್ದಿತು; ಅದರಿಂದಲೇ ಸೃಷ್ಟಿ ಪ್ರಾರಂಭವಾಯಿತೆಂದು ಹೇಳುವ ವಿಪುಲ ಆಧಾ ಗಳು ಉಂಟು. 'ಆಪೋ ವಾ ಇದಗ್ಂ ಸರ್ವಂ' ಎಂಬ ಶ್ರುತಿಯಿ 'ಆಪೋ ವಾ ಇದಮಗ್ರೇ ಸಲಿಲಮಾಸೀತ್' ಎಂದು ತೈತ್ತರೀಯ ಸಂಹಿತೆ (೭-೧-೫-೧) ಯಲ್ಲಿ ಹೇಳಿದೆ.

## ವಾಯುವೇ ಜಗತ್ತಿಗೆ ಆದಿಯು, ಅಂತ್ಯವು

ವಾಯುವೇ ಜಗತ್ತಿನ ಎಲ್ಲ ವಸ್ತುಗಳ ಲಯಸ್ಥಾನವೆನ್ನುವುದು ರೈಕ್ವ ನೆಂಬ ಋಷಿಯ ಸಿದ್ಧಾಂತವು. ಇದರ ವಿಷಯವು ಛಾಂದೋಗ್ಯ ಉಪನಿಷತ್ತಿ ನಲ್ಲಿ ಹೇಳಿದೆ. ಜಾನಶ್ರುತಿಯೆಂಬ ಅರಸನು ರೈಕ್ವ ಋಷಿಯ ಬಳಿ ಜ್ಞಾನಾರ್ಜನೆಗಾಗಿ ಹೋಗಿ ಗೋದಾನ ಭೂದಾನ ಕನ್ಯಾದಾನಾದಿ ದಾನ ಳಿಂದ ಅವನನ್ನು ತೃಪ್ತಿಪಡಿಸಿದನಂತರ ಆ ಋಷಿಯು ಅರಸನಿಗೆ ಹೀ ಉಪದೇಶಿಸಿದನು:

"ವಾಯುರ್ವಾವ ಸಂ ವರ್ಗಃ, ಯದಾ ವಾ ಅಗ್ನಿರುದ್ವಾಯ ವಾಯುಮೇವಾಪ್ಯೇತಿ; ಯದಾ ಸೂರ್ಯೋಽಸ್ತಮೇತಿ ವಾಯುಮೇ ವಾಪ್ಯೇತಿ; ಯದಾ ಚಂದ್ರೋಽಸ್ತಮೇತಿ ವಾಯುಮೇವಾಪ್ಯೇತಿ; ಯದಾಪ ಉಚ್ಛುಷ್ಯಂತಿ ವಾಯುಮೇವಾಪಿಯಂತಿ; ವಾಯುರ್ಹ್ಯೇ ವೈತಾನ್ ಸರ್ವಾನ್ ಸಂವೃಂಕ್ತೇ ಇತಿ ಅಧಿದೈವತಂ" ವಾಯುವೇ ಸಂವರ್ಗವು ಎಂದರೆ ಅದು ಎಲ್ಲವನ್ನೂ ತನ್ನೊಳಗೇ ಲಯಗೊಳಿಸಿಕೊಳ್ಳು ವಂಥದು. ಅಗ್ನಿಯು ಆರಿಹೋಗುವಾಗ ವಾಯುವಿನಲ್ಲಿ ಲಯವಾಗುತ್ತದೆ ಸೂರ್ಯನು ಮುಳುಗಿದಾಗ ವಾಯುವಿನಲ್ಲಿ ಅಸ್ತಮಿಸುತ್ತಾನೆ; ಚಂದ್ರನ ಮುಳುಗಿದಾಗ ವಾಯುವಿನಲ್ಲಿ ಅಸ್ತಮಿಸುತ್ತಾನೆ. ನೀರು ಒಣಗಿದಾ ಅದು ವಾಯುವಿನಲ್ಲಿ ಸೇರಿಹೋಗುತ್ತದೆ; ವಾಯುವೇ ಎಲ್ಲವನ್ನೂ ತನ್ನೊ ಳಗೆ ಲಯಗೊಳಿಸಿಕೊಳ್ಳುತ್ತದೆ—ಇದೇ ಆಧಿದೈವಿಕ ಜ್ಞಾನವು.

ಹೀಗಿರುವ ರೈಕ್ವನ ಅಭಿಪ್ರಾಯದಂತೆ ವಾಯುವು ಎಲ್ಲದರ ಲಯ ಸ್ಥಾನವು. 'ಯದ್‌ದೃಷ್ಟಂ ತನ್ನಷ್ಟಂ' ಎಂದರೆ ಯಾವುದರಲ್ಲಿ ಹುಟ್ಟಿ

ವುದೋ ಅದರಲ್ಲಿಯೇ ಲಯವು ಎಂಬ ನಿಯಮದಂತೆ ವಾಯುವೇ ಎಲ್ಲದರ ಲಯಸ್ಥಾನವೆಂದಮೇಲೆ ವಾಯುವೇ ಎಲ್ಲದರ ಉತ್ಪತ್ತಿಸ್ಥಾನವೆಂದಾಯಿತು. ಅದು ಜಗತ್ತಿನ ಜನ್ಮಸ್ಥಾನವೆಂಬುದಕ್ಕೆ ಋಗ್ವೇದದ ೧೦-೧೬೮-೪ನೆಯ ಮಂತ್ರವಿದು ಆಧಾರವಾಗಿದೆ :

> ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ
> ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ॥*

ವಾಯುದೇವನು ಇಂದ್ರಾದಿ ದೇವತೆಗಳಿಗೆಲ್ಲ ಆತ್ಮರೂಪನಾಗಿಯೂ ಸಮಸ್ತ ಜಗತ್ತಿನ ಗರ್ಭ ಎಂದರೆ ಜನನಕ್ಕೆ ಸ್ಥಾನನಾಗಿಯೂ ಇದ್ದಾನೆ—ಎಂದು ಮೊದಲಾಗಿ ವಾಯುವು ನುತಿಸಲ್ಪಟ್ಟಿದ್ದಾನೆ. ವಾಯುವು ಇಲ್ಲದೆ ಯಾವ ಪ್ರಾಣಿಯೂ ಬದುಕಿರಲಾರದಾದುದರಿಂದ ವಾಯವಿನ ವಿಷಯದಲ್ಲಿ ಅದು ಪ್ರಾಣಿಗಳಿಗೆ ಗರ್ಭರೂಪವಾದುದೆಂದು ಹೇಳಿದೆ. ಈ ಮಂತ್ರದ ಇಂಗ್ಲಿಷ್ ಭಾಷಾಂತರದಂತೆ ವಾಯುವು—The soul of the gods, the germ of the world ಎಂದರೆ ವಾಯುವು ದೇವತೆಗಳ ಆತ್ಮ, ಜಗತ್ತಿನ ಜನನ ಕಾರಣ.

---

* ಅರ್ಥ: ಏಷಃ ದೇವಃ = ಈ (ವಾಯು) ದೇವನು, ದೇವನಾಂ = ಇಂದ್ರಾದಿ ದೇವತೆಗಳಿಗೆ, ಆತ್ಮಾ = ಆತ್ಮರೂಪನಾಗಿದ್ದಾನೆ. ಭುವನಸ್ಯ ಗರ್ಭಃ = ಜಗತ್ತಿಗೆ ಜನನ ಕಾರಣವಾಗಿದ್ದಾನೆ. ಯಥಾವಶಂ = ತನ್ನ ಇಷ್ಟಬಂದಂತೆ, ಚರತಿ = ಸಂಚರಿಸುತ್ತಾನೆ, ಅಸ್ಯ = ಇವನ, ಘೋಷಾ ಇತ್ = ಅರ್ಭಟವಾದ ಶಬ್ದವು ಮಾತ್ರ, ಶೃಣ್ವಿರೇ = ಕೇಳಿಸುತ್ತದೆ, ರೂಪಂ = ವಾಯುವಿನ ರೂಪವು, ನದೃಶ್ಯತೇ = ಕಾಣಿಸುವುದಿಲ್ಲ, ತಸ್ಮೈ ವಾತಾಯ = ವಾಯುದೇವನಾದವನಿಗೆ, ಹವಿಷಾ = ಹವಿಸ್ಸಿನಿಂದ, ವಿಧೇಮ = ಉಪಚರಿಸುತ್ತೇವೆ.

ಸಾಯಣಭಾಷ್ಯಾಧಾರ : ಅಯಂ ವಾಯುಃ ದೇವಾನಾಂ ಇಂದ್ರಾದೀನಾಮಪಿ ಆತ್ಮಾ ಜೀವರೂಪೇಣ ತೇಷು ಅವಸ್ಥಾನಾತ್, ಭುವನಸ್ಯಾಪಿ ಭೂತಜಾತಸ್ಯ ಗರ್ಭೋ ಗರ್ಭವತ್ ಪ್ರಾಣರೂಪೇಣ ಅಂತಃ ವರ್ತಮಾನ ಏಷ ಈದೃಶೋದೇವಃ— ಇತ್ಯಾದಿ ಸಾಯಣ ಭಾಷ್ಯದಲ್ಲಿ 'ಭುವನಸ್ಯಗರ್ಭಃ' ಎಂಬ ಪದಗಳಿಗೆ ಪ್ರಾಣಿಗಳಲ್ಲಿ ಪ್ರಾಣರೂಪನಾಗಿರುವವನು—ಎಂದು ಅರ್ಥಮಾಡಿದೆ. ಇಂಗ್ಲಿಷ್ ಭಾಷಾಂತರದಲ್ಲಿ ಹೇಳಿದಂತೆ—'the germ of the world' ಎಂದರೆ ಜಗತ್ತಿನ ಜನನಸ್ಥಾನವೆಂಬ ಸ್ಪಷ್ಟವಾದ ಅರ್ಥವನ್ನು ಬಿಡಲು ಕಾರಣವಿಲ್ಲ.

## ಅಗ್ನಿಯು ಜಗತ್ತಿಗೆ ಮೂಲತತ್ತ್ವವೆ?

ಅಗ್ನಿಯೇ ಜಗತ್ತಿನ ಮೂಲತತ್ತ್ವವೆಂಬ ಕಲ್ಪನೆಯಿದ್ದಿತೆಂಬುದಕ್ಕೆ ಕಠೋಪನಿಷತ್ತಿನ ೨-೨-೯ನೆಯ ಮಂತ್ರವಿದನ್ನು ಸಾಮಾನ್ಯವಾಗಿ ಉದಾಹರಿಸುವುದುಂಟು: '**ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿರೂಪೋಬಭೂವ**'–ಎಂದರೆ ಅಗ್ನಿಯು ವಿಶ್ವವನ್ನು ಪ್ರವೇಶಿಸಿ ನಾನಾ ರೂಪವನ್ನು ಧರಿಸುವಂತೆ, **ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ** ಎಂದರೆ ಸರ್ವಭೂತಗಳಿಗೂ ಅಂತರಾತ್ಮವಾಗಿರುವ ತತ್ತ್ವವು ನಾನಾ ರೂಪವನ್ನು ಧರಿಸುತ್ತದೆ ಎಂದು ಹೇಳುವ ಈ ಮಂತ್ರದಲ್ಲಿ ಅಗ್ನಿಯು ಜಗತ್ತಿನ ಮೂಲತತ್ತ್ವವೆಂಬ ಭಾವನೆಯಿಲ್ಲ. ಯಾವ ಯಾವ ವಸ್ತುವನ್ನು ಅಗ್ನಿಯು ಪ್ರವೇಶಿಸುವುದೋ ಆಯಾ ವಸ್ತುವಿನ ರೂಪವನ್ನು ಅದು ಹೊಂದುವುದೆಂಬ ಉದಾಹರಣೆಯನ್ನು ಇಲ್ಲಿ ಕೊಟ್ಟಿದೆ. ಸರ್ವವನ್ನೂ ದಹಿಸುವ ಅಗ್ನಿಯು ಜಗತ್ತಿನ ಆದಿತತ್ತ್ವವೆಂಬ ಕಲ್ಪನೆಯು ಬರುವುದು ಸಂಭವನೀಯವಲ್ಲ.

## ಆಕಾಶ ತತ್ತ್ವವು ಜಗತ್ತಿಗೆ ಮೂಲತತ್ತ್ವವು

ಪಂಚಭೂತಗಳಲ್ಲಿ ಅತಿಸೂಕ್ಷ್ಮವಾದುದೆನಿಸಿದ ಆಕಾಶತತ್ತ್ವದಿಂದಲೇ ಉಳಿದ ತತ್ತ್ವಗಳ ಉದಯವಾಗಿ ಅದು ಜಗತ್ತಿಗೆ ಮೂಲಕಾರಣವಾಯಿತೆಂಬ ಕಲ್ಪನೆ ಬಂದುದರಲ್ಲಿ ಆಶ್ಚರ್ಯವಿಲ್ಲ. ಈ ಲೋಕದ ಗತಿ ಯಾವದು?-ಎಂಬ ಪ್ರಶ್ನೆಗೆ ಉತ್ತರವಾಗಿ, ಆಕಾಶವು ಎಂದು ಪ್ರವಾಹಣಜೈವಲಿಯು ಛಾಂದೋಗ್ಯ ಉಪನಿಷತ್ತಿನ ೧-೯-೧ನೆಯ ಮಂತ್ರದಲ್ಲಿ ಉತ್ತರ ಹೇಳಿರುವನು. ಆಕಾಶದಿಂದಲೇ ಈ ಭೂತಗಳೆಲ್ಲದರ ಉತ್ಪತ್ತಿ; ಆಕಾಶದಲ್ಲಿಯೇ ಅವುಗಳು ಕೊನೆಗೆ ಲಯವಾಗುವುವು; ಆದುದರಿಂದ ಆಕಾಶವೇ ಎಲ್ಲಕ್ಕೂ ದೊಡ್ಡದು, ಅದೇ ಎಲ್ಲದರ ಅಂತ್ಯವು. ಆ ಮಂತ್ರಭಾಗವಿದು: **ಅಸ್ಯ ಲೋಕಸ್ಯ ಕಾಗತಿರಿತ್ಯಾಕಾಶ ಇತಿ ಹೋವಾಚ; ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ, ಆಕಾಶಂ ಪ್ರತ್ಯಸ್ತಂಯಂತಿ, ಆಕಾಶೋ ಹಿ ಏವ ಏಭ್ಯೋ ಜ್ಯಾಯಾನ್, ಆಕಾಶಃ ಪರಾಯಣಂ.**

## ಪ್ರಾಣವೇ ಜಗತ್ತಿಗೆ ಮೂಲಕಾರಣ

ಛಾಂದೋಗ್ಯ ಉಪನಿಷತ್ತಿನ ೧-೧೧-೫ನೆಯ ಮಂತ್ರದಲ್ಲಿ ಉಷಸ್ತಿ ಚಕ್ರಾಯಣನು ಇವೆಲ್ಲ ಭೂತಗಳೂ ಕೊನೆಗೆ ಪ್ರಾಣವನ್ನೇ ಪ್ರವೇಶಿಸುವುವೆಂದೂ, ಪ್ರಾಣದಲ್ಲಿಯೇ ಇವುಗಳೆಲ್ಲದರ ಉತ್ಪತ್ತಿಯೆಂದೂ ಹೇಳಿರುವನು. ಆ ಭಾಗವಿದು: **"ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ, ಪ್ರಾಣಮಭ್ಯುಜ್ಜಿಹತೇ"** ಇಲ್ಲಿ ಉಸಿರೇ ಪ್ರಾಣವೆಂಬ ಭಾವನೆಯಿದೆ. ಏಕೆಂದರೆ ಉಸಿರಾಡುವುದು ನಿಂತರೆ ಪ್ರಾಣವಿರುವುದಿಲ್ಲ.

ರೈಕ್ವನು **"ವಾಯುರ್ಹ್ಯೇವ ವೈತಾನ್ ಸರ್ವಾನ್ ಸಂವೃಂಕ್ತೇ, ಇತಿ ಅಧಿದೈವತಂ"** ಎಂದು ಹೇಳಿದ ಅನಂತರ **"ಅಥಾಧ್ಯಾತ್ಮಂ ಪ್ರಾಣೋವಾವ ಸಂವರ್ಗಃ"** ಎಂದು ಹೇಳಿದ್ದಾನೆ. ವಾಯುವು ಎಲ್ಲವನ್ನು ತನ್ನಲ್ಲಿ ಲಯಗೊಳಿಸಿಕೊಳ್ಳುವುದೆಂದು ಹೇಳುವುದು ಆಧಿದೈವಿಕ ದೃಷ್ಟಿಯಿಂದಲೆಂದೂ, ಆಧ್ಯಾತ್ಮಿಕ ದೃಷ್ಟಿಯಿಂದಲಾದರೋ ಪ್ರಾಣವೇ ಎಲ್ಲವನ್ನು ತನ್ನೊಳಗೆ ಲಯಗೊಳಿಸಿಕೊಳ್ಳುವುದೆಂದು ಹೇಳಬೇಕಾಗುತ್ತೆಂಬುದೂ ಇದರ ಅಭಿಪ್ರಾಯ. ರೈಕ್ವನು ಮುಂದುವರೆದು, **'ತೌ ವಾ ಏತೌ ದ್ವೌ ಸಂವರ್ಗೌ ವಾಯುರೇವ ದೇವೇಷು ಪ್ರಾಣಃ ಪ್ರಾಣೇಷು'** ಎಂದರೆ ದೇವತೆಗಳಲ್ಲಿ ಲಯಸ್ಥಾನವು ವಾಯುವೆಂದೂ ಪ್ರಾಣಿಗಳಲ್ಲಿ ಲಯಸ್ಥಾನವು ಪ್ರಾಣವೆಂದೂ ಹೇಳಿದ್ದಾನೆ. ರೈಕ್ವಋಷಿಯ ಕಲ್ಪನೆಯು ಇಹಲೋಕದ ದೃಷ್ಟಿಯಿಂದ ಪ್ರಾಣವೇ ಜಗದುತ್ಪತ್ತಿಲಯಗಳ ಸ್ಥಾನವೆಂದೇ ಇರಬೇಕು.

## 'ಸತ್'ನಿಂದ ಜಗದುತ್ಪತ್ತಿ

'ಅಸತ್' ನಿಂದ ಜಗದುತ್ಪತ್ತಿಯಾಯಿತೆಂಬ ವಿಷಯದಲ್ಲಿ ಛಾಂದೋಗ್ಯ ಉಪನಿಷತ್ತಿನ ೬-೨-೧ನೆಯ ಮಂತ್ರದಲ್ಲಿ **'ಸದೇವ ಸೋಮ್ಯೇದಮಗ್ರ ಆಸೀತ್'** ಎಂದರೆ ಜಗದುತ್ಪತ್ತಿಗೆ ಮೊದಲು 'ಸತ್' ಇದ್ದಿತು ಎಂದು ಹೇಳಿದೆ. 'ಸತ್' ಎಂಬ ಪದವು ಅಸ-ಭುವಿ ಎಂದರೆ ಇರುವುದು ಎಂಬ ಅರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿದೆ. ಅವ್ಯಕ್ತವಾದರೂ ಇರುವಿಕೆಯು ಯಾವುದರಲ್ಲಿ ಆರಂಭವಾಯಿತೋ ಅದು 'ಸತ್' ಎಂಬ ದೃಷ್ಟಿಯಲ್ಲಿ ಇದು ಜಗತ್ತಿಗೆ ಮೂಲವೆಂದು ಗಣಿಸಲ್ಪಟ್ಟಿದೆ.

## 'ಅಸತ್' ನಿಂದ ಜಗದುತ್ಪತ್ತಿ

'ಸತ್' ಎಂಬ ಪದದಲ್ಲಿ ಗೋಚರವಾದುದು ಎಂಬ ಕಲ್ಪನೆಯಿರುವು ರಿಂದ 'ಸತ್' ಎಂಬುದು ಇರುವುದಕ್ಕೆ ಮೊದಲು 'ಅಸತ್' ಇದ್ದಿತು ಎಂ ಕಲ್ಪನೆಯಾದಂತೆ ತೋರುವುದು. ತೈತ್ತರೀಯ ಉಪನಿಷತ್ತಿನ ೨-೭ರ 'ಅಸದ್ವಾ ಇದಮಗ್ರ ಆಸೀತ್, ತತೋ ವೈ ಸದಜಾಯತ, ತದ ತ್ಮಾನಂ ಸ್ವಯಮಕುರುತ' ಎಂದರೆ ಮೊದಲು 'ಅಸತ್' ಇದ್ದಿತು ಅ ರಿಂದ 'ಸತ್' ಹುಟ್ಟಿತು ಎಂದು ಹೇಳಿದೆ. ಇಲ್ಲಿ ಎರಡು ಕಡೆಗಳ ಹೇಳಿರುವ ಅಭಿಪ್ರಾಯವು ಒಂದೇ. 'ಸತ್' ಎಂದರೆ ವ್ಯಕ್ತವಾದು ಎಂಬರ್ಥ ಬರುವ ದೃಷ್ಟಿಯಿಂದ 'ಅಸತ್' ಶಬ್ದವನ್ನು ಆರಿಸಿಕೊಂಡ ಆದರೆ 'ಅಸತ್' ಪದದಲ್ಲಿ ಅಭಾವವೆಂಬ ಅರ್ಥ ಬರುವುದರಿಂದ ಇದ್ದು ಇಲ್ಲದುದರಿಂದ ಹೇಗಾಗುವುದು ಎಂಬ ಆಕ್ಷೇಪಣೆಯು ಛಾಂದೋಗ 'ಕಥಮಸತಃ ಸಜ್ಜಾಯತೇತಿ' ವಾಕ್ಯದಲ್ಲಿ ಕಂಡುಬರುವುದು.

## ಸೃಷ್ಟಿಕಲ್ಪನೆಯಲ್ಲಿ ಪ್ರಗತಿಯ ಸಮೀಕ್ಷಣೆ

ಪಂಚಭೂತಗಳಲ್ಲಿ ಪೃಥ್ವಿತತ್ತ್ವವೇ ಸ್ಥೂಲವಾದುದು. ಪೃಥ್ವಿ ವಿಶ್ವಕ್ಕೆ ಮಾತೆಯೆಂಬ ಕಲ್ಪನೆಯು ಮೊದಲನೆಯದು. ಇದಕ್ಕೂ ಸೂಕ್ಷ್ಮ ವಾದ ಉದಕವೇ ಎಲ್ಲಕ್ಕೂ ಮೊದಲು ಇದ್ದಿತು ಎಂದು ಹೇ ಅದನ್ನು ಸೃಷ್ಟಿಗೆ ಮೂಲವೆಂದು ಹೇಳಿದುದರಲ್ಲಿ ಪ್ರಗತಿಯಿದೆ. ಕಣ್ಣಿ ಕಾಣುವ ಉದಕಕ್ಕಿಂತಲೂ ಕಣ್ಣಿಗೆ ಕಾಣದ ವಾಯುವು ಜಗತ್ತಿಗೆ ಮೂ ಎಂಬ ರೈಕ್ವನ ಕಲ್ಪನೆ ಜಲವೇ ಸೃಷ್ಟಿಗೆ ಮೂಲವೆಂಬುದಕ್ಕಿಂತ ಉತ್ತ ವಾದುದು. ವಾಯುವು ಸ್ಪರ್ಶಕ್ಕೆ ಸಿಗುವುದು ಆದರೆ ಆಕಾಶವೇ ಜಗತ್ತಿ ಮೂಲವೆಂಬ ಪ್ರವಾಹಣ ಜೈವಲಿಯ ಸಿದ್ಧಾಂತವು ವಾಯುವೇ ಜಗತ್ತಿ ಮೂಲವೆಂಬುದಕ್ಕಿಂತ ಉತ್ತಮವಾದುದು. ಇನ್ನು ಆಕಾಶದಲ್ಲಿಲ್ಲದ ಚೈತ ಸ್ಫುರಣೆಯುಳ್ಳ ಪ್ರಾಣವೇ ಸೃಷ್ಟಿಗೆ ಮೂಲವೆಂಬ ಉಷಸ್ತಿ ಚಕ್ರಾಯಣ ಸಿದ್ಧಾಂತವು ಹೆಚ್ಚು ಮೇಲ್ಮಟ್ಟದ ವಿವೇಚನೆಯ ಫಲವು. ಪ್ರಾಣ ಶ್ರೇಷ್ಠತೆಯ ವಿಷಯದಲ್ಲಿ ಪ್ರಶ್ನೋಪನಿಷತ್ತಿನಲ್ಲಿ ಒಂದು ಆಖ್ಯಾಯಿಕೆ ಇ

**"ತದ್ ಯಥಾ ಮಕ್ಷಿಕಾ ಮಧುಕರ ರಾಜಾನಮುತ್ಕ್ರಾಮಂತಂ ಸರ್ವಾ ಏವೋತ್ಕ್ರಾಮಂತೇ ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವಾ ಏವ ಪ್ರತಿಷ್ಠಂತೇ ಏವಂ ವಾಙ್ಮನಶ್ಚಕ್ಷುಃ ಶ್ರೋತ್ರಂ"** ಎಂದರೆ–ರಾಣಿ ಜೇನು ಗೂಡನ್ನು ಬಿಟ್ಟು ಹೊರಟು ಹೋಗಲು ಉಳಿದ ಜೇನುಗಳು ಅದರೊಡನೆ ಹೊರಟುಹೋಗುವಂತೆ, ವಾಕ್, ಮನಸ್ಸು, ಕಣ್ಣು, ಕಿವಿ ಮೊದಲಾದ ಇಂದ್ರಿಯಗಳು ಪ್ರಾಣದೊಡನೆ ದೇಹವನ್ನು ಬಿಟ್ಟು ಹೋಗುವುವು. ಅದು ತಿರುಗಿಬಂದರೆ ಅವು ಹಿಂತಿರುಗುವುವು. ಮೇಲ್ಕಂಡ ಆಖ್ಯಾಯಿಕೆಯಲ್ಲಿ ಕಂಡ ಸಿದ್ಧಾಂತವು ಪ್ರಾಣದ ಹಿರಿಮೆಯನ್ನು ತೋರಿಸುತ್ತದೆ. ಗ್ರಹಿಸಲು ಸಾಧ್ಯವಾದ ಮೇಲ್ಕಂಡ ಕಾರಣಗಳನ್ನು ಬಿಟ್ಟು, ಯಾವುದರಿಂದ ಸತ್ ಎಂದರೆ ಇರುವಿಕೆಯು ಪ್ರಾರಂಭವಾಯಿತೋ ಅಂತಹ ಸೃಷ್ಟಿಯ ಮೂಲಕ್ಕೆ 'ಸತ್' ಎಂದೇ ಹೆಸರಿಟ್ಟುದರಲ್ಲಿ ಜಾಣ್ಮೆಯಿದೆ. ಇನ್ನು 'ಸತ್' ಎಂದು ಹೇಳುವುದರಲ್ಲಿ ಇರುವಿಕೆಯ ಕಲ್ಪನೆಯು ಇರುವುದರಿಂದ ಅದು ಸೃಷ್ಟಿಯೊಳಗೆ ಸೇರಿದುದಾಯ್ತೆಂದು ಭಾವಿಸಿ ಅದಕ್ಕಿಂತಲೂ ಹಿಂದಿನದು 'ಅಸತ್' ಎಂಬುದನ್ನು ಕಲ್ಪಿಸಿ, ಅದರಿಂದ ಸತ್ ಹುಟ್ಟಿತು ಎಂದು ಹೇಳುವುದರಲ್ಲಿ ಪ್ರಗತಿಯ ಅಂತ್ಯವು ಮುಟ್ಟಿತೆಂದು ಕಾಣುವುದು. ಆದರೆ ಸದಸತ್ ಕಲ್ಪನೆಗೂ ಮೀರಿದುದು ಸೃಷ್ಟಿಯ ಮೂಲವು ಎಂದು ಪ್ರಾರಂಭವಾಗುವ ನಾಸದೀಯ ಸೂಕ್ತದಲ್ಲಿ ಸೃಷ್ಟಿಕಲ್ಪನೆಯ ಶಿಖರವನ್ನು ಕಾಣಬಹುದು. ಆ ಶಿಖರದ ದರ್ಶನವಾಗುವ ಮೊದಲು ವಿವಿಧ ಸೃಷ್ಟಿಕಲ್ಪನೆಗಳಲ್ಲಿ ಹೊಂದಾಣಿಕೆಯನ್ನು ಬ್ರಹ್ಮಸೂತ್ರದಲ್ಲಿ ತೋರಿಸಿರುವುದನ್ನು ಉಲ್ಲೇಖಿಸಬೇಕಾಗುವುದು.

## ಬ್ರಹ್ಮಸೂತ್ರದಲ್ಲಿ ಕಂಡುಬರುವ ಸೃಷ್ಟಿಕಲ್ಪನೆಗಳಲ್ಲಿ ಏಕವಾಕ್ಯತೆ

ಶ್ರೀ ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರಭಾಷ್ಯದ ಜನ್ಮಾದ್ಯಧಿಕರಣ ಭಾಷ್ಯದಲ್ಲಿ ಹೇಳಿದಂತೆ–**"ವೇದಾಂತವಾಕ್ಯಕುಸುಮಗ್ರಥನಾರ್ಥತ್ವಾತ್ ಸೂತ್ರಾಣಾಂ"** ಎಂದರೆ ವೇದಾಂತ ವಾಕ್ಯಗಳೆಂಬ ಕುಸುಮಗಳನ್ನು ಕಟ್ಟುವ ಸೂತ್ರವೇ ವೇದಾಂತಸೂತ್ರ ಅಥವಾ ಬ್ರಹ್ಮಸೂತ್ರ. ಪೃಥ್ವಿ, ಜಲ, ವಾಯು, ಆಕಾಶ, ಪ್ರಾಣ ಮೊದಲಾದವುಗಳಲ್ಲಿ ಯಾವುದಾದ

ರೊಂದು ಸೃಷ್ಟಿಗೆ ಮೂಲವೆಂದು ಒಂದು ಕಡೆ ಹೇಳಿದರೆ, ಇನ್ನೊಂದು ಇವುಗಳಲ್ಲಿ ಮತ್ತೊಂದು ಸೃಷ್ಟಿಗೆ ಮೂಲಕಾರಣವೆಂದು ಹೇಳುವ ವೈವಿಧ್ಯತೆಯಿದೆ. ಇವುಗಳಲ್ಲಿಯೂ ಇಂತಹ ಇತರ ವೇದಾಂತ ಗಳಲ್ಲಿಯೂ ಏಕವಾಕ್ಯತೆಯನ್ನು ಸಾಧಿಸುವ ಪ್ರಯತ್ನವು ಬ್ರಹ್ಮಸೂತ್ರ ನಡೆದಿದೆ. ಜಗತ್ತಿಗೆ ಮೂಲಕಾರಣವಾದುದು ಯಾವುದೆಂದು ತಿಳಿಯುವ ಹೇಗೆ? ಎಂಬುದನ್ನು ಮೊದಲು ತಿಳಿಯಬೇಕು. ಇದಕ್ಕೆ ಛಾಂದೋ ಉಪನಿಷತ್ತಿನಲ್ಲಿ ಸಾಕಾದಷ್ಟು ಮಾರ್ಗದರ್ಶನವಿದೆ.

ಛಾಂದೋಗ್ಯೋಪನಿಷತ್ತಿನಲ್ಲಿ (೩-೧೪-೧): '**ಸರ್ವಂ ಖಲ್ವಿ ಬ್ರಹ್ಮ, ತಜ್ಜಲಾನಿತಿ ಶಾಂತ ಉಪಾಸೀತ**' ಎಂದರೆ, ಇದೆಲ್ಲವು ಬ್ರಹ್ಮ 'ತಜ್ಜಲಾನ್' ಎಂದರೆ ಅದರಲ್ಲಿಯೇ ಹುಟ್ಟಿ, ಅದರಲ್ಲಿಯೇ ಜೀ ಅದರಲ್ಲಿಯೇ ಲಯಿಸುವುದು; ಆದುದರಿಂದ ಅದನ್ನು, ಶಾಂತವಾಗಿ ಉಪಾ ಮಾಡಬೇಕೆಂದು ಹೇಳಿದೆ. ಇದರ ಶಾಂಕರ ಭಾಷ್ಯದಲ್ಲಿ: "**ತಸ್ಮಾ ಬ್ರಹ್ಮಣೋ ಜಾತಂ . . . ಸರ್ವಂ ಅತಃ ತಜ್ಜಂ . . . ತಸ್ಮಿನ್ನೇ ಬ್ರಹ್ಮಣಿ ಲೀಯತೇ . . . ಇತಿತಲ್ಲಂ, ತಥಾ ತಸ್ಮಿನ್ನೇವ ಸ್ಥಿತಿಕಾ ಅನಿತಿ ಪ್ರಾಣಿತಿ ಜೇಷ್ಟತ ಇತಿ ತದನಂ**" ಎಂದು ಹೇಳಿದೆ. ತಜ್ಜಲಾ ಎಂಬುದನ್ನು ತಜ್ಜ, ತಲ್ಲ, ತದನ ಎಂದು ವಿಭಾಗಿಸಿ, ಈ ವಿಶ್ವವೆಲ್ಲವೂ ಅದ ಹುಟ್ಟಿ, ಅದರಲ್ಲಿ ಲಯವಾಗುವುದಲ್ಲದೆ ಈ ಮಧ್ಯೆ ಅದರಿಂದಲೇ ಜೀವಿಸ ಸಾಧ್ಯವೆಂದರ್ಥಮಾಡಿದೆಯಾಗಿ ತಜ್ಜಲಾನ್ ಪದವು ಸಾರ್ಥಕವಾಗು ಯಾವುದರಲ್ಲಿ ಜಗತ್ತು ಹುಟ್ಟಿ, ಯಾವುದರಿಂದ ಜೀವಿಸಿ, ಯಾವುದರಲ್ಲಿ ವಾಗುವುದೋ ಅದೇ ಬ್ರಹ್ಮವೆಂದು ಛಾಂದೋಗ್ಯದಲ್ಲಿ ಸಿದ್ಧಾಂತಮಾಡಿ ಯಿತು. ತೈತ್ತರೀಯ ಉಪನಿಷತ್ತಿನಲ್ಲಿಯೂ (೩-೧) ಇದೇ ರೀತಿ ಬ್ರಹ್ಮವೆಂದರೆ ಯಾವುದೆಂಬುದನ್ನು ತಿಳಿಸಿದೆ: "**ಯತೋವಾ ಇಮ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯ ಪ್ರಯಂತ್ಯಭಿಸಂವಿಶಂತಿ ತದ್ ವಿಜಿಜ್ಞಾಸಸ್ವ ತದ್ ಬ್ರಹ್ಮೇತಿ**" ಆಧಾರಗಳಿಂದ ಬ್ರಹ್ಮವೆಂದರೇನೆಂಬುದು ಸ್ಪಷ್ಟ. ಆದರೆ ಛಾಂದೋ ಉಪನಿಷತ್ತಿನಲ್ಲಿಯೇ (೧-೯-೧) '**ಸರ್ವಾಣಿ ಹ ವಾ ಇಮಾನಿ ಭೂ ಆಕಾಶಾದೇವ ಸಮುತ್ಪದ್ಯಂತೇ, ಆಕಾಶಂ ಪ್ರತ್ಯಸ್ತಂಯಂತಿ**'

ಈ ಭೂತಗಳೆಲ್ಲವೂ ಆಕಾಶದಲ್ಲಿಯೇ ಹುಟ್ಟಿ ಆಕಾಶದಲ್ಲಿಯೇ ಲಯವಾಗುತ್ತವೆಂದೂ ಮತ್ತೊಂದು ಕಡೆ (೧-೧೧-೫) '**ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ ಪ್ರಾಣಮಭ್ಯುಜ್ಜಿಹತೇ**' - ಎಂದರೆ ಈ ಭೂತಗಳೆಲ್ಲವು ಪ್ರಾಣದಲ್ಲಿಯೇ ಲಯಹೊಂದುತ್ತವೆ, ಅದರಲ್ಲಿಯೇ ಅವು ಹುಟ್ಟಿದ್ದು ಎಂದೂ ಹೇಳಿದೆಯಷ್ಟೆ. ಹೀಗೆ ಭಿನ್ನಾಭಿಪ್ರಾಯಗಳು, ಯಾವುದರಲ್ಲಿ ಎಲ್ಲ ಭೂತಗಳು ಹುಟ್ಟಿ ಯಾವುದರಲ್ಲಿ ಲಯವಾಗುತ್ತವೆ ಎಂಬ ವಿಷಯದಲ್ಲಿ ಕಂಡುಬರುವುವು. ಈ ತೊಡಕನ್ನು ಬ್ರಹ್ಮಸೂತ್ರವು, ಆಕಾಶಸ್ತ-ಲ್ಲಿಂಗಾತ್ ಮತ್ತು '**ಅತಏವಪ್ರಾಣಃ**' ಎಂಬ ಸೂತ್ರಗಳಲ್ಲಿ ಬಿಡಿಸಿದೆ. ವೇದಾಂತದೀಪದಲ್ಲಿ ಹೇಳಿದಂತೆ "**ಆಕಾಶಶಬ್ದ ನಿರ್ದಿಷ್ಟಂ ಜಗತ್ಕಾರಣಂ;**" ಆಕಾಶವೆಂದರೆ ಪಂಚಭೂತಗಳಲ್ಲಿ ಒಂದಾದುದಲ್ಲ. ಆಕಾಶವೆಂದರೆ, ಯಾವುದು ಜಗತ್ಕಾರಣವೋ ಅದು, ಅರ್ಥಾತ್ ಅದು ಬ್ರಹ್ಮವೇ. ಶ್ರೀ ಶಂಕರಾಚಾರ್ಯರಿಗೂ ಶ್ರೀ ರಾಮಾನುಜಾಚಾರ್ಯರಿಗೂ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ಶ್ರೀ ಭಾಷ್ಯದಲ್ಲಿ "**ಅತ್ರಪ್ರಾಣ ಶಬ್ದೋऽಪಿ ಆಕಾಶ ಶಬ್ದವತ್ ಪ್ರಸಿದ್ಧ ಪ್ರಾಣವ್ಯತಿರಿಕ್ತೇ ಪರಸ್ಮಿನ್ನೇವ ಬ್ರಹ್ಮಣಿ ವರ್ತತೇ, ತತ್ ಅಸಾಧಾರಣ ನಿಖಿಲಜಗತ್‌ಪ್ರವೇಶನಿಷ್ಕ್ರಮಣಾದಿ ಲಿಂಗಾತ್ ಪ್ರಸಿದ್ಧವತ್ ನಿರ್ದಿಷ್ಟಾತ್**" ಎಂದು ಹೇಳಿದೆ. ಛಾಂದೋಗ್ಯ ಶ್ರುತಿಯಲ್ಲಿ ಹೇಳಿರುವ ಪ್ರಾಣವು ಯಾವುದೆಂದರೆ ಪ್ರಾಣವೆಂದು ಪ್ರಸಿದ್ಧವಾಗಿದೆಯೆಲ್ಲ ಅದಲ್ಲ; ಏಕೆಂದರೆ ಜಗತ್ತೆಲ್ಲವೂ ಅದರಲ್ಲಿ ಪ್ರವೇಶಿಸುವುದೆಂದೂ ನಿಷ್ಕ್ರಮಿಸುವುದೆಂದೂ ಗುರುತು ಹೇಳಿದೆ; ಆದುದರಿಂದ ಛಾಂದೋಗ್ಯ ಮಂತ್ರದಲ್ಲಿ ಪ್ರಾಣವೆಂದರೆ ಬ್ರಹ್ಮವೇ; ಮೊದಲು ಹೇಳಿದ ಆಧಾರಗಳಂತೆ ಸೃಷ್ಟಿಸ್ಥಿತಿ ಲಯಗಳುಳ್ಳುದೆಂಬ ಲಕ್ಷಣದಿಂದ ಮೇಲ್ಕಂಡ ಆಕಾಶ ಮತ್ತು ಪ್ರಾಣಶಬ್ದಗಳಿಗೆ ಪರಬ್ರಹ್ಮವೆಂದೇ ಅರ್ಥಮಾಡಬೇಕೆಂಬುದು ಬ್ರಹ್ಮಸೂತ್ರದ ಅಭಿಪ್ರಾಯ. ಈ ನಿಷ್ಕರ್ಷೆಯು ಜಗತ್ಕಾರಣವೆಂದು ಹೇಳುವ ವಾಯು ಮೊದಲಾದವುಗಳಿಗೂ ಅನ್ವಯಿಸುವುದೆನ್ನಬಹುದು. ವಿಚಾರಪರರಾದ ಋಷಿಗಳಿಗೆ ಜಗತ್ಕಾರಣವನ್ನು ವಾಯುವೆಂದೋ ಜಲವೆಂದೋ ಆಕಾಶವೆಂದೋ ಪ್ರಾಣವೆಂದೋ, ಸತ್ ಎಂದೋ, ಅಸತ್ ಎಂದೋ ಅವರವರಿಗೆ ತೋರಿದಂತೆ ಹೇಳಿರಬಹುದಾದರೂ, ಋಷಿಗಳೆಲ್ಲರ ವಾಕ್ಯಗಳನ್ನು ಸಮನ್ವಯಗೊಳಿಸುವ ಭಾರ ಬ್ರಹ್ಮಸೂತ್ರಕಾರರ

ಮೇಲೆ ಬಿದ್ದು, ವಿಧವಿಧವಾಗಿ ತೋರುವ ಹೇಳಿಕೆಗಳನ್ನು ಬಹಳ ಸಮ
ಯಿಂದ ಹೊಂದಾಣಿಕೆ ಮಾಡಿದ್ದಾರೆಂಬುದಲ್ಲಿ ಸಂದೇಹವಿಲ್ಲ.

ಋಗ್ವೇದದಲ್ಲಿ ಉಕ್ತವಾದ ಸೃಷ್ಟಿಕಲ್ಪನೆಯಲ್ಲಿ ಹೇಗೆ ಪ್ರಗತಿಯಾ
ತೆಂಬುದು ಸ್ಪಷ್ಟವಾಗಿ ಕಂಡುಬರುವುದು. ದ್ಯಾವಾಪೃಥಿವಿಗಳೇ ಜಗ
ತಂದೆತಾಯಿಗಳೆಂಬ ಕಲ್ಪನೆಗಿಂತ ಇಂದ್ರನೇ ಜಗತ್ತಿನ ಸೃಷ್ಟಿಕರ್ತನು ಎ
ಕಲ್ಪನೆ ಮೇಲು; ಅದಕ್ಕಿಂತ ವಿಶ್ವಕರ್ಮ ಹಿರಣ್ಯಗರ್ಭ ಪ್ರಜಾಪತಿಗಳಿಂದ ಸೃ
ಯಾಯಿತೆಂಬ ಕಲ್ಪನೆ ಮೇಲು; ಅದಕ್ಕಿಂತ ಭವ್ಯವಾದ ಕಲ್ಪನೆ ಪುರುಷಸೂ
ದಲ್ಲಿರುವ ಸೃಷ್ಟಿಯ ಕಲ್ಪನೆ. ಜಗತ್ತು ವಿಕಾಸವಾಯಿತೆಂಬ ಕಲ್ಪನೆಯಲ್ಲಿ
ಪ್ರಗತಿಯು ಕಂಡುಬರುವುದು. ಉದಕವೇ ಜಗತ್ತಿಗೆ ಮೂಲವೆಂಬ ಕ
ಗಿಂತ ವಾಯುವೇ ಮೂಲವೆಂಬುದೂ, ಅದಕ್ಕಿಂತಲೂ ಆಕಾಶವೇ ಜಗ
ಮೂಲವೆನ್ನುವುದೂ ಅದಕ್ಕಿಂತಲೂ ಪ್ರಾಣವೇ ಜಗತ್ತಿಗೆ ಮೂಲವೆನ್ನು
ಹೆಚ್ಚು ಪ್ರಗತಿಯ ಲಕ್ಷಣವೆನ್ನಬಹುದು. ಇವೆಲ್ಲವನ್ನು ಬಿಟ್ಟು ಇರುವಿ
ಯಾವುದರಿಂದ ಪ್ರಾರಂಭವಾಯಿತೋ ಅದನ್ನು ಸತ್ ಎಂದು ಕರೆದ
ತೆನ್ನುವುದು ಈ ವಿಷಯದಲ್ಲಿ ಹೆಚ್ಚು ಪ್ರತಿಭೆಯನ್ನು ತೋರಿಸುತ್ತ
ಇರುವುದು ಎನ್ನುವುದರಲ್ಲಿಯೂ ಸೃಷ್ಟಿಯಾಗಲೇ ಆಗಿದೆ ಎಂಬ ಭಾ
ಬರುವುದರಿಂದ ಅದಕ್ಕಿಂತ ಹಿಂದಿನ ಸ್ಥಿತಿಗೆ 'ಅಸತ್' ಎಂದು ಕ
ದಾಯಿತು. ಅಸತ್ ಎಂದರೆ ಏನು ಇಲ್ಲದಿರುವುದು; ಈ ಅರ್ಥವುಳ್ಳದ್ದ
'ಸತ್' ಎಂಬುದು ಹೇಗಾಯಿತೆಂದು ಆಲೋಚಿಸಿದುದರಲ್ಲಿ, ಹಾಗೆ ಆಲೋ
ದವರ ಬುದ್ಧಿ ಎಷ್ಟು ಸೂಕ್ಷ್ಮವಾದುದು ಎಂಬುದರ ಅರಿವಾಗುತ್ತದೆ. ಇ
ತೊಡಕುಗಳನ್ನೆಲ್ಲ ಪರಿಹರಿಸಿ ಸದಸತ್ತುಗಳಿಗೂ ಮೀರಿದ ಪರಬ್ರಹ್ಮದ ಕ
ಯನ್ನು ನಾವು ನಾಸದೀಯ ಸೂಕ್ತದಲ್ಲಿ ಕಾಣುತ್ತೇವೆ. ಈ ಸೂಕ್ತ
ವಿಚಾರ ಶೀಲತೆಯ ಶಿಖರವನ್ನು, ಅದರ ಅಂತಿಮ ಎಲ್ಲೆಯನ್ನು ಕಾಣಬಹು
ವೇದಗಳಲ್ಲಿ ಪ್ರಥಮ ಸ್ಥಾನವಿರುವುದು ಋಗ್ವೇದಕ್ಕೆ. ಋಗ್ವೇದದಲ್ಲಿ ಶ್ರೇಷ್ಠ
ಭಾಗಗಳೆಂದರೆ ಪುರುಷ ಸೂಕ್ತ ಮತ್ತು ನಾಸದೀಯ ಸೂಕ್ತ. ಪು
ಸೂಕ್ತದ ಸೂಕ್ಷ್ಮಪರಿಚಯವು ಈಗಾಗಲೇ ಆಗಿದೆ; ನಾಸದೀಯ ಸೂ
ಪರಿಚಯವನ್ನು ಮಾತ್ರ ಈಗ ಮಾಡಲಾಗುವುದು; ಮುಂದೆ ಋಗ್ವೇ
ಈ ಮುಖ್ಯಭಾಗಗಳ ವಿಸ್ತಾರವಾದ ಪರಿಚಯವನ್ನು ಮಾಡಲಾಗುವುದು

## ನಾಸದೀಯ ಸೂಕ್ತದ ಪರಿಚಯ

ಉಪನಿಷತ್ತುಗಳಲ್ಲಿಯೂ ಮತ್ತು ವಚನ ವಾಙ್ಮಯದಲ್ಲಿಯೂ ವಿಶೇಷ ತರದಿಂದ ಋಷಿಗಳ ಮತ್ತು ಶರಣರ ಮನಸ್ಸನ್ನು ಚಕಿತಗೊಳಿಸಿದ ಪ್ರಶ್ನೆಯು ಸೃಷ್ಟಿಯ ಮೂಲಕಾರಣ: ಒಂದು ರೀತಿಯಲ್ಲಿ ಸೃಷ್ಟಿ ಎಂಬ ಪದವೇ ಸೂಕ್ತವಾದುದಲ್ಲ. ಸೃಷ್ಟಿಯೆಂದಕೂಡಲೇ ಸೃಷ್ಟಿಕರ್ತನಾದ ಒಬ್ಬ ವ್ಯಕ್ತಿಯ ಕಲ್ಪನೆಯು ಬರುವುದು. ಅಂತಹ ಒಬ್ಬ ದಿವ್ಯ ವ್ಯಕ್ತಿಯಿಂದ ಸೃಷ್ಟಿಯಾಯಿತೆಂದು ಬೈಬಲೇ ಮೊದಲಾದವುಗಳಲ್ಲಿ ಹೇಳಿರುವಂತೆ ಒಬ್ಬ ವ್ಯಕ್ತಿಯಿಂದ ಜಗತ್ತು ನಿರ್ಮಿತವಾಯಿತೆಂಬ ಭಾವನೆ ನಮ್ಮವರಲ್ಲಿಲ್ಲ. ನಾವು ಗೃಹ ನಿರ್ಮಾಣ ಮಾಡುವಂತೆ ಯಾರಾದರೊಬ್ಬ ವ್ಯಕ್ತಿಯು ತನಗಿಂತ ಭಿನ್ನವಾದ ಪದಾರ್ಥಗಳಿಂದ ಜಗತ್ತನ್ನು ನಿರ್ಮಿಸಿದನೆನ್ನುವುದು ಉಪನಿಷದ್ ಋಷಿಗಳ ಅಥವಾ ಶರಣರ ಕಲ್ಪನೆಯಲ್ಲ. ನಾಸದೀಯ ಸೂಕ್ತದಲ್ಲಿಯೂ, ಉಪನಿಷತ್ತುಗಳಲ್ಲಿಯೂ, ವಚನ ವಾಙ್ಮಯದಲ್ಲಿಯೂ, ಕಂಡುಬರುವ ಜಗದಾವಿರ್ಭಾವದ ಕಲ್ಪನೆಯನ್ನು ಮುಂದಿಡುವ ಮೊದಲು ಅದು ಸುಲಭ ಗ್ರಾಹ್ಯವಾಗುವಂತೆ ಅದರ ಸ್ವರೂಪದರ್ಶನವನ್ನು ಸೂಕ್ಷ್ಮವಾಗಿಯಾದರೂ ಮಾಡುವುದು ಆವಶ್ಯಕ. ಒಂದೇ ಮಾತಿನಲ್ಲಿ ಹೇಳಬೇಕಾದರೆ ಜಗತ್ತು ಸೃಷ್ಟಿಸಲ್ಪಡಲಿಲ್ಲ; ಅದು ಆವಿರ್ಭಾವವಾಯಿತು. ಮೊದಲು—ಎಂದು ಪ್ರಾರಂಭಿಸುವುದೂ ಕಷ್ಟ. ಏಕೆಂದರೆ ಕಾಲದ ಕಲ್ಪನೆಯೂ ಆಗ ಇರಲಿಲ್ಲ. ತ್ರಿಶೂಲಧಾರಿಯಾದ ಶಿವನಾಗಲೀ, ಶಂಖಚಕ್ರಧಾರಿಯಾದ ವಿಷ್ಣುವಾಗಲೀ, ಚತುರ್ಮುಖನಾದ ಬ್ರಹ್ಮನಾಗಲೀ, ಇಂದ್ರನಾಗಲೀ, ಚಂದ್ರಸೂರ್ಯರಾಗಲೀ, ದೇವಾದಿ ದೇವತೆಗಳಾಗಲೀ ಇರಲಿಲ್ಲ. ಪಂಚ ಭೂತಗಳಾಗಲೀ ಪ್ರಕೃತಿಯಾಗಲೀ ಗೋಚರವಾಗುವ ಯಾವುದೇ ಆಗಲೀ ಅಥವಾ ಮನಸ್ಸಿನ ಕಲ್ಪನೆಗೆ ಬರುವ ಯಾವುದೇ ವಸ್ತುವಾಗಲೀ ಇರಲಿಲ್ಲ. ಆಗ ಇದ್ದುದು ಇಲ್ಲದಂತೆ ಇದ್ದಿತೆನ್ನಬಹುದು. ಮತ್ತೊಂದಿಲ್ಲದೆ ತಾನೆ ತಾನಾಗಿದ್ದ ಚೈತನ್ಯ ಸ್ಫುರಣೆಯೊಂದು ಮಾತ್ರವಿದ್ದಿತೆನ್ನಬಹುದು. ಅದು ನಮಗೆ ಗ್ರಾಹ್ಯವಾಗತಕ್ಕ ಏನೇನೂ ಇಲ್ಲದುದೂ ಆದುದರಿಂದ ಅದನ್ನು ಆಭು (ಪೊಳ್ಳು Void) ಶೂನ್ಯ ಅಥವಾ ಬಯಲು ಎನ್ನಬಹುದು. ಅದರಲ್ಲಿ ಜಗದಾವಿರ್ಭಾವದ ಕಲ್ಪನೆಯಾಯಿತು. (ಕಾಮವೆಂದು ನಾಸದೀಯ ಸೂಕ್ತದಲ್ಲಿ ಹೇಳಿದೆ.) ಇದೇ ಇಚ್ಛಾಶಕ್ತಿಯೆನ್ನ

ಬಹುದು. ಇದು ತಪಸ್ಸಿಗೆ ಎಂದರೆ ಜ್ಞಾನಮಯ ಚಿಂತನೆಗೆ ಕಾ
ವಾಯಿತು, ಇದನ್ನು ಜ್ಞಾನಶಕ್ತಿಯೆನ್ನಬಹುದು. ತಪಸ್ಸನ್ನು ಅಚ
ಎಂದು ಹೇಳಿರುವುದರಲ್ಲಿ ಕ್ರಿಯಾಶಕ್ತಿಯ ಆವಿರ್ಭಾವವು ಸೂಚಿಸಲ್ಪ
ವುದು. ಯಾವ ಕಾರ್ಯವಾಗಬೇಕಾಗಿದ್ದರೂ ಮೊದಲು ಇಚ್ಛೆಯೂ
ರಂತೆ ಆಲೋಚನೆಯೂ ಕ್ರಿಯೆಯ ಹಿಂದಿರುವುವು. ಈ ಸ್ಥಿತಿಯೇ ಶಿವ
ಸಂಪುಟವೆನ್ನಬಹುದು. ನಿಷ್ಕಲ ಪರಶಿವನು ಸಕಲನಾಗುವನು. ಸೃ
ಪ್ರಾರಂಭವಾಗಿ ದೇವಾದಿ ದೇವತೆಗಳೂ ಸುರರೂ ನರರೂ ಪಶುಪಕ್ಷಿಗ
ಒಟ್ಟಾಗಿ ಹೇಳುವುದಾದರೆ, ಸಕಲ ಚೇತನಾಚೇತನಾತ್ಮಕವಾದ ಜಗ
ಆವಿರ್ಭವಿಸುವುದು.

## ನಾಸದೀಯ ಸೂಕ್ತ

"ನಾಸದಾಸೀನ್ನೋಸದಾಸೀತ್ತದಾನೀಂ ನಾಸೀದ್ರಜೋ ನೋವ್ಯೋ-
ಮಾಪರೋಯತ್ |... ನಮೃತ್ಯು ರಾಸೀದಮೃತಂ ನತಾರ್ಹಿ ನರಾತ್ರ್ಯಾ
ಅಹ್ನ ಆಸೀತ್ಪ್ರಕೇತಃ |

ಸೃಷ್ಟಿಗೆ ಪೂರ್ವದಲ್ಲಿ, ಸದಸತ್ತುಗಳಾಗಲಿ, ಆಕಾಶಾಂತರಿಕ್ಷಗಳಾ
ಹಗಲು ರಾತ್ರಿಗಳಾಲೀ ಅಮೃತವಾಗಲೀ ಮೃತ್ಯುವಾಗಲೀ ಇರಲಿಲ್ಲ.
ಆಗ ಇದ್ದುದೇನಂದರೆ :

"ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ |"

'ಅವಾತಂ' ಎಂದರೆ ವಾಯು ಇಲ್ಲದೆ ಇದ್ದರೂ, ಆನೀತ್ ಎ
ಚೈತನ್ಯದ ಸ್ಫುರಣೆಯಿದ್ದಿತು. ಆನ್ ಎಂಬುದಕ್ಕೆ 'ಪ್ರ' ಸೇರಿಸಿದರೆ ಪ್ರಾ
ಎಂದಾಗುವುದು. ಪ್ರಾಣದ ಕಲ್ಪನೆಯಲ್ಲಿ ಉಸಿರಾಡುವ ವಾಯು
ಕಲ್ಪನೆಯು ಬರುವುದು. ಆದರೆ, ಸೃಷ್ಟಿಗೆ ಮೊದಲು ವಾಯುವಿರ
ಹಾಗಾದರೆ ಚೈತನ್ಯ ಸ್ಫುರಣೆಯು ಯಾವುದರಿಂದ ಆಗುತ್ತಿದ್ದಿತೆಂದರೆ
"ಸ್ವಧಯಾ" ಎಂದರೆ ಸ್ವಶಕ್ತಿಯಿಂದ ಸ್ಫುರಿಸುತ್ತಿದ್ದಿತು ; "ತದೇಕ
ಎಂದರೆ ಅದೊಂದೇ ಇದ್ದಿತು ಎಂದು ಹೇಳಿರುವುದು ಸಾಲದೇನೋ ಎಂ
'ಅನ್ಯತ್‌ನ ಪರಃ ಕಿಂಚನಾಸ' ಎಂದರೆ ಅದಲ್ಲದೆ ಮತ್ತೇನೂ ಇ

ವೆಂದು ನಾಸದೀಯ ಸೂಕ್ತದಲ್ಲಿ ಹೇಳಿದೆ. ಹೀಗೆ ಅದ್ವೈತವೂ ಶಕ್ತಿವಿಶಿಷ್ಟವೂ ಆದ ಪರಬ್ರಹ್ಮದ ಕಲ್ಪನೆಯು ನಾಸದೀಯ ಸೂಕ್ತದಲ್ಲಿದೆ. ಹಗಲು-ರಾತ್ರಿ ಅಮೃತ-ಮೃತ್ಯು ಮೊದಲಾದ ದ್ವಂದ್ವಗಳ ಕಲ್ಪನೆಯ ಮಾತಂತಿರಲಿ; ಸದಸತ್ತುಗಳ ಕಲ್ಪನೆ, ಎಂದರೆ ಇರುವುದು ಇಲ್ಲದಿರುವವುಗಳ ಕಲ್ಪನೆಗಳು ಸಹ ಉಂಟಾಗುವ ಮೊದಲೇ ಅದು ಎಂದರೆ ಪರಬ್ರಹ್ಮವು ಸ್ವಶಕ್ತಿಯಿಂದ ಸ್ಫುರಿಸುತ್ತ ಇಲ್ಲದಂತೆ ಇದ್ದಿತೆನ್ನಬಹುದು.

"ಆದಿಯಾಧಾರವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು, ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು, ಚರಾಚರವೆಲ್ಲ ರಚನೆಗೆ ಬಾರದಂದು, ಗುಹೇಶ್ವರಾ, ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ"

"ಧರೆಯಾಕಾಶವಿಲ್ಲದಂದು, ತ್ರೈಮಂಡಲ ನೆಲೆಗೊಳ್ಳದಂದು, ಹೋಮ ನೇಮ ಜಪತಪವಿಲ್ಲದಂದು, ನಿಮ್ಮನಾರು ಬಲ್ಲರು? ಹರಿಬ್ರಹ್ಮರಿಗೆ ಅಗೋಚರ; ನಿರ್ಲೇಪ ನಿರಂಜನನಾಗಿ ವೇದಗಳು ನಿಮ್ಮನರಿಯವು; ಶಾಸ್ತ್ರ ಶ್ರುತಿ ಸ್ಮೃತಿಗಳು ನಿಮ್ಮನರಿಯವು. ಗಗನಕುಸುಮ ಪರಿಮಳದಿಂದತ್ತಲು ಗುಹೇಶ್ವರಾ, ನಿಮ್ಮ ನಿಲವನಾರು ಬಲ್ಲರು?"

ಸದಸತ್ತುಗಳ ಕಲ್ಪನೆಗೆ ಮೊದಲೇ ಸ್ಫುರಿಸುತ್ತಿದ್ದ ಚೈತನ್ಯವು ಅಗ್ರಾಹ್ಯವಾಗಿರುವುದೆಂಬುದನ್ನು ಮೇಲಿನ ವಚನಗಳಿಗಿಂತಲೂ ಚೆನ್ನಾಗಿ ಹೇಳಲಾಗುವುದಿಲ್ಲ. ಗಗನವೆಂಬುದು ನಿಲುಕದಂತಹುದು. ಗಗನ ಕುಸುಮವೆಂಬುದು ಊಹೆಗೂ ನಿಲುಕುವುದು ಕಷ್ಟ. ಇನ್ನು ಗಗನ ಕುಸುಮದ ಪರಿಮಳವೆಂದರೆ ಊಹೆಯ ಮೇರೆಗೂ ಮೀರಿದುದು. ಅಂತಹ ಗಗನ ಕುಸುಮ ಪರಿಮಳದಿಂದ ಅತ್ತಲು ಎಂದರೆ ಅದರಾಚೆಗೆಂಬುದು ಸ್ವಲ್ಪವೂ ಗ್ರಾಹ್ಯವಾಗದುದು. "ಇದ್ದೆಯಲ್ಲಾ ಇಲ್ಲದಂತೆ" ಎಂಬುದು ಸಹ ಕಲ್ಪನಾತೀತವೆಂಬ ಭಾವನೆಯನ್ನು ಕೊಡುವುದು.

ಹರಿಬ್ರಹ್ಮರಿಗೆ ಅಗೋಚರವೆಂದಮಾತ್ರಕ್ಕೆ ತ್ರಿಮೂರ್ತಿಗಳಲ್ಲಿ ಮೂರನೆಯವನಾದ ತ್ರಿಶೂಲಧಾರಿಯಾದ ಮಹೇಶ್ವರನು ಈ ವಚನಗಳಲ್ಲಿ ಹೇಳಿದ ಜಗತ್ಕಾರಣನಲ್ಲ. ತ್ರಿಮೂರ್ತಿಗಳಿಗೂ ಹಿನ್ನೆಲೆಯಾದ ಪರಶಿವಚೈತನ್ಯವನ್ನೇ

ನಾಸದೀಯ ಸೂಕ್ತದಲ್ಲಿಯೂ ವಚನವಾಙ್ಮಯದಲ್ಲಿಯೂ ಸೃಷ್ಟಿಗೆ ಮೊ
ಇದ್ದುದಾಗಿ ಹೇಳಿರುವುದು.

"ಶೂನ್ಯಹೃದಯ ನಿಶ್ಶೂನ್ಯವಿಲ್ಲದಂದು, ಬ್ರಹ್ಮ ವಿಷ್ಣು ಮಹೇಶ್ವರರಿಲ್ಲದಂದು, ಹದಿನಾಲ್ಕು ಭುವನ ದಿಗ್ವಳಯವಿಲ್ಲದಂದು, ಕೂಡಲ ಚೆನ್ನ ಸಂಗಯ್ಯನೆಂಬ ಹೆಸರು ಮುನ್ನಿಲ್ಲದಂದು"

"ಅಸುರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ, ಬ್ರಹ್ಮಕಪಾಲವಿಲ್ಲ; ಭಸ್ಮಭೂಷಣನಲ್ಲ, ವೃಷಭವಾಹನನಲ್ಲ, ಋಷಿಗಳೊಡನಿದ್ದಾತನಲ್ಲ, ಎಸಗುವ ಸಂಸಾರದ ಕುರುಹಿಲ್ಲದಾತಂಗೆ ಹೆಸರಾವುದೂ ಇಲ್ಲವೆಂದನಂಬಿಗ ಚೌಡಯ್ಯ.

"ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಪರಮೇಶ್ವರ ಎಂಬ ಸಂದಣಿ ತಲೆದೋರದ ಮುನ್ನ, ಬಯಲೇ ಸ್ವರೂಪವಾಗಿತ್ತು. ಆ ಸ್ವರೂಪಿನ ನಡೆಯನುಪಮಿಸಬಾರದು. ನೋಡಬಾರದ ಬೆಳಗು, ಕೂಡಬಾರದ ಮೂರ್ತಿ, ಅಖಂಡ ಅಪ್ರತಿಮ ಗುಹೇಶ್ವರಲಿಂಗದ ಬೆಳಗಿನ ಮೂಲವ ಲಿಂಗ ಸಂಗಿಗಳಲ್ಲದ ಅಂಗವಿಕಾರಿಗಳೆತ್ತ ಬಲ್ಲರು?

ಸುಗುಣಮೂರ್ತಿಗಳಾದ ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂ
ಗಳಿಗೂ ಅತೀತವಾದ ಪರತರ ಚೈತನ್ಯಕ್ಕೆ "ಹೆಸರಾವುದೂ ಇಲ್ಲ" ಎನ್ನು
ಸರಿ ಆದರೂ ಅದನ್ನು ನಿರ್ದೇಶಿಸಲು ಯಾವುದಾದರೂ ಒಂದು ಪದವ
ಉಪಯೋಗಿಸಲೇಬೇಕಾಗಿ, ಅದಕ್ಕೆ "ಬಯಲು" ಎಂಬ ಪಾರಿಭಾಷಿಕ ಪ
ವನ್ನು ಶರಣರು ಕೊಟ್ಟಿದ್ದಾರೆ. ಬಹು ದೊಡ್ಡದು (ಬೃಹತ್ವಾತ್) ಎಂಬರ್ಥ
ಉಪನಿಷತ್ತುಗಳಲ್ಲಿ ಬ್ರಹ್ಮವೆನ್ನುವ ಪದವನ್ನುಪಯೋಗಿಸಿರುವರು. ಉಪ
ಬ್ರಹ್ಮದ ಕಲ್ಪನೆಗೆ ಮೂಲವಾದ ನಾಸದೀಯ ಸೂಕ್ತದಲ್ಲಿ ಅದನ್ನು "ಆಭ
ಎಂದು ಕರೆದಿದ್ದಾರೆ. "ಆಭು" ಎನ್ನುವುದು "ಬಯಲು" ಎ
ಪದದಂತಹುದೇ ಆದ ಒಂದು ಪದ. "ಆಭು" ಎಂದರೆ ಪೊಳ್ಳು. ಶೂನ್ಯನೆ
ವಚನಕಾರರ ಪದವಾದರೂ ಇದೇ ರೀತಿಯ ಸಾಂಕೇತಿಕ ಪದ. "ತುಚ್ಛೆ
ನಾಭ್ವಪಿಹಿತಂ" ಎಂದು ಮೂರನೆಯ ಋಚೆಯಲ್ಲಿ ಹೇಳಿದೆ. "ತುಚ್ಛೇನ
ಎಂದರೆ ಪುಸಿಮಾಯೆಯಿಂದ "ಆಭು" ಎಂದರೆ ಬ್ರಹ್ಮವು "ಅಪಿಹಿತಂ
ಎಂದರೆ ಮುಚ್ಚಲ್ಪಟ್ಟಿತ್ತು ಎಂದು ಅರ್ಥ. ಲೋಕಮಾನ್ಯ ತಿಲಕರ ಗೀ

ರಹಸ್ಯದಲ್ಲಿ ಹೇಳಿದಂತೆ "ತುಚ್ಛ ಮತ್ತು ಆಭು ಇವೆರಡು ಶಬ್ದಗಳು ಪರಸ್ಪರ ಪ್ರತಿಯೋಗಿಯಾಗಿರುವ ಮೂಲಕ ಆಭು ಎಂಬುದರ ಅರ್ಥವು ತುಚ್ಛಕ್ಕೆ ವಿರುದ್ಧವಾಗಿ ದೊಡ್ಡ ಅಥವ ಸಮರ್ಥ ಎಂದಾಗುತ್ತದೆ, ಇದೇ ಶಬ್ದವು ಋಗ್ವೇದಲ್ಲಿ ಎರಡು ಕಡೆಯಲ್ಲಿ ಬಂದಿದೆ. (ಋ ೧೦೨೭-೧-೪) ಅಲ್ಲಿ ಸಾಯಣಾಚಾರ್ಯರಾದರೂ ಇದೇ ಅರ್ಥವನ್ನು ತೆಗೆದುಕೊಂಡಿದ್ದಾರೆ. ಪಂಚದಶಿಯೊಳಗೆ (ಚಿತ್ರ ೧೨೯-೧೩೦) ತುಚ್ಛವೆಂಬ ಶಬ್ದವನ್ನು ಮಾಯೆಗೆ ಹಚ್ಚಿದ್ದಾರೆ (ನೃಸಿಂ. ಉತ್ತ. ೯ ನೋಡಿ); ಅರ್ಥಾತ್ ಆಭು ಎಂದರೆ ಪೊಳ್ಳು ಎಂಬರ್ಥವಲ್ಲದೆ 'ಪರಬ್ರಹ್ಮ' ಎಂದಾಗುತ್ತದೆ." ನಾಸದೀಯ ಸೂಕ್ತವನ್ನು ಇಂಗ್ಲೀಷಿಗೆ ಭಾಷಾಂತರಿಸುವಲ್ಲಿ "ಆಭು" ಎಂಬ ಪದವನ್ನು "void" ಎಂದು ಭಾಷಾಂತರಿಸಿದ್ದಾರೆ. ಏನೇನೂ ಇಲ್ಲದ ಸ್ವಯವಿಲ್ಲದ ಪರವಿಲ್ಲದ ನಾನುತಾನೆಂಬರಿವಿಲ್ಲದ "ಆಭು"ವಿನ ಪರಿಚಯವನ್ನು ಮತ್ತೆರಡು ವಚನಗಳಿಂದ ಅರಿಯಬಹುದು :

"ನಾಮ ಅನಾಮವಿಲ್ಲ, ನಾನು ತಾನು ಮುನ್ನವೆಯಿಲ್ಲ, ಈ ಉಭಯ ನಾಮವಾವ ಸೀಮೆಯೊಳಗಿಲ್ಲ, ಒಡಲು ಇಲ್ಲ, ನೆಳಲು ಇಲ್ಲ; ಏನೆಂಬುದೇನೂ ಇಲ್ಲ; ತಾನು ಮುನ್ನಿಲ್ಲ; ಚಿಕ್ಕಯ್ಯ ಪ್ರಿಯ ಸಿದ್ಧಲಿಂಗಾ, ನಾನು ಇಲ್ಲ ನೀನೂ ಇಲ್ಲ."

"ಏನೆಂದೆನಲಿಲ್ಲ, ನುಡಿದು ಹೇಳಿಲಿಕ್ಕಿಲ್ಲ, ನಿಜದಲ್ಲಿರ್ದ ಬೆರಗ ಕುರುಹು ಅರಿವುದೇ? ಅದು ತನ್ನಲ್ಲಿ ತಾನಿಲ್ಲ, ಏನೆಂದೆನಲಿಲ್ಲದ ಬಯಲು. ಅಲ್ಲಿ ಏನೇನೂ ಅರಸಲಿಲ್ಲ, ಇದಿರಿಲ್ಲ, ತಾನಿಲ್ಲ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗಾ ಇಲ್ಲ, ಇಲ್ಲ."

ನಾಸದೀಯ ಸೂಕ್ತದಲ್ಲಿ ಹೇಳಿದಂತೆ "ತಸ್ಮಾದ್ಧಾನ್ಯನ್ನ ಪರಃ, ಕಿಂಚನಾಸ." ಆಭುವಲ್ಲದೆ ಅಲ್ಲಿ ಏನೇನೂ ಇರಲಿಲ್ಲ. ವೈರಾಗ್ಯಶಿಖಾಮಣಿಯೆನಿಸಿದ ಅಕ್ಕಮಹಾದೇವಿಯು ಕಾಮಿಸಿದುದು ಇಂತಹುದೇ ಆದ "ಆಡಬಾರದ ಬಯಲು, ನೋಡಬಾರದ ಬಯಲು, ನುಡಿಯಬಾರದ ಬಯಲು, ಹಿಡಿಯಬಾರದ ಬಯಲು." ತಾನು ಕಾಮಿಸಿದ ಒಡಲಿಲ್ಲದ ಬಯಲನಿಂತು ವರ್ಣಿಸುವಳು :

"ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವಂಗಾನೊಲಿದೆನವ್ವಾ; ಎಡೆಯಿಲ್ಲದ, ಕಡೆಯಿಲ್ಲದ ತೆರಹಿಲ್ಲದ, ಕುರುಹಿಲ್ಲದ, ಚೆಲುವಂಗಾ

ನೊಲಿದೆ, ಎಲೆ ಅವ್ವ, ನೀನು ಕೇಳಾ ತಾಯೆ. ಭವವಿಲ್ಲದ, ಭಯ ವಿಲ್ಲದ, ನಿರ್ಭಯ ಚೆಲುವಂಗೊಲಿದೆ ನಾನು—ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವಂಗೆ ನಾನೊಲಿದೆ ”

ಮುಂಡಕೋಪನಿಷತ್ತಿನಲ್ಲಿಯೂ ಜಗತ್ಕಾರಣವನ್ನು ಹೀಗೆಯೇ ವರ್ಣಿಸಿದೆ:

“ ಯತ್ತದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ
ತದಪಾಣಿ ಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ
ತದವ್ಯಯಂ ಯದ್ ಭೂತಯೋನಿಂ ಪರಿಶ್ಯಂತಿ ಧೀರಾಃ ”

ಎಂದರೆ–ಈ ಭೂತಯೋನಿಯು ನೋಡಲುಬಾರದುದು ಹಿಡಿಯಲುಬಾ ದುದು ; ಅದು ವರ್ಣಗೋತ್ರರಹಿತವಾದುದು, ಕಣ್ಣು ಕಿವಿಗಳಿಲ್ಲದುದು ಮತ್ತು ಕೈಕಾಲುಗಳಿಲ್ಲದುದು ; ಅದು ಶಾಶ್ವತವೂ ಸರ್ವವ್ಯಾಪಿಯೂ ವಿಭುವೂ ಆಗಿ ಧೀರರಿಗೆ ಎಂದರೆ ಜ್ಞಾನಿಗಳಿಗೇನೆ, ಅದು ಗೋಚರವಾಗುವುದು.

ಅಪ್ರಕಟವೂ ಅವ್ಯಕ್ತವೂ ಅಗ್ರಾಹ್ಯವೂ ಆದ ಈ “ ಅಭು ” ಅಥವಾ ಬಯಲು ಪ್ರಕಟವಾಗದೆ ಹಾಗೆಯೆ ಇಲ್ಲದಂತೆ ಇದ್ದುದಾದರೆ ಸೃಷ್ಟಿವೈಭ ಲೀಲೆಯೇ ಆಗುತ್ತಿರಲಿಲ್ಲ. ಆದರೆ ಮುಂಡಕ ಉಪನಿಷತ್ತಿನಲ್ಲಿ ಈ ಭೂ ಯೋನಿಯು ತಪಸ್ಸಿನಿಂದ ಪ್ರಕಟವಾಯಿತು ಎಂದು ಹೇಳಿದೆ. ನಾಸದೀ ಸೂಕ್ತದಲ್ಲಿಯೂ ಹಾಗೆಯೇ ಹೇಳಿದೆ :

“ ತುಚ್ಛ್ಯೇನಾಭ್ವಪಿಹಿತಂ ಯದಾಸೀತ್ ತಪಸಸ್ತನ್ಮಹಿನಾಽಜಾಯತೈಕಂ ”

ಎಂದರೆ ಮಾಯೆ ಅಥವಾ ಶಕ್ತಿಯಿಂದ ಕೂಡಿಯೂ ಅದ್ವೈತವಾಗಿ ಪ ಬ್ರಹ್ಮವು ತಪಸ್ಸಿನ ಮಹಿಮೆಯಿಂದ ಪ್ರಕಟವಾಯಿತು. ಮುಂಡಕ ಉ ನಿಷತ್ತಿನಲ್ಲಿ ಹೀಗೆ ಹೇಳಿದೆ.

“ ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ ।
ಅನ್ನಾತ್ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾಮೃತಂ ॥
ಯಸ್ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ ।
ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂಚ ಜಾಯತೇ ॥ ”

ಪರಬ್ರಹ್ಮದ ತಪಸ್ಸಿನಿಂದ ಜಗತ್ತು ಹುಟ್ಟುತ್ತದೆ ; ಈ ತಪಸ್ಸು ಜ್ಞಾನಮ ವಾದುದು. ಎಂದರೆ ಪರಬ್ರಹ್ಮವು ತಪಸ್ಸಿನಿಂದ ಕೂಡಿದುದೆಂದಾಯಿತು

ಆದರೆ ಇದಕ್ಕೆಲ್ಲ ಪರಬ್ರಹ್ಮದ ಇಚ್ಛಾಶಕ್ತಿಯೇ ಮೂಲವಾದುದು. ನಾಸದೀಯ ಸೂಕ್ತದಲ್ಲಿ "ಕಾಮಸ್ತದಗ್ರೇ ಸಮವರ್ತತಾಧಿ ಮನಸೋರೇತಃ" ಎಂದು ಹೇಳಿದೆ. ಲೋಕಮಾನ್ಯ ತಿಲಕರು ಇದರರ್ಥವನ್ನು ಹೀಗೆ ಬರೆದಿದ್ದಾರೆ: "ಮನಸ್ಸಿನ ರೇತ ಯಾವುದು ಎಂದರೆ ಬೀಜವೆಂಬುದು, ಮೊದಲು ಹುಟ್ಟಿತೋ, ಅದೇ ಪ್ರಾರಂಭಕ್ಕೆ ಕಾಮ (ಸೃಷ್ಟಿಯನ್ನು ನಿರ್ಮಿಸುವ ಪ್ರವೃತ್ತಿ ಅಥವಾ ಶಕ್ತಿ) ಆಯಿತು." ಈ ಪರಾತ್ಪರವು ಇಚ್ಛಾಶಕ್ತಿಯಿಂದಲೂ, ಜ್ಞಾನ ಶಕ್ತಿಯಿಂದಲೂ, ಕ್ರಿಯಾಶಕ್ತಿಯಿಂದಲೂ ಕೂಡಿದೆಯೆನ್ನುವುದಕ್ಕೆ ಶ್ವೇತಾಶ್ವತರೋಪನಿಷತ್ತಿನಲ್ಲಿ ಸ್ಪಷ್ಟವಾದ ಆಧಾರವಿದೆ. ಆ ಆಧಾರವಿದು :

"ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಕೀ ಜ್ಞಾನಬಲ ಕ್ರಿಯಾಚ"

ಈ ಉಪನಿಷದ್ವಾಕ್ಯಕ್ಕೆ ಸ್ವಪ್ರಭಾನಂದ ವಿರಚಿತ ಶಿವಾದ್ವೈತ ಮಂಜರಿಯಲ್ಲಿನ ಭಾಷ್ಯವಿದು :

> "ಇತಿ ಶ್ರುತಿಸ್ಥಾನುಕ್ತಾರ್ಥಪ್ರಕಾಶಕ ಚಕಾರ ಚಮತ್ಕಾರಾತ್
> ಮಾಹೇಶ್ವರ ಸ್ವಭಾವ ಭೂತ ಪರಾಶಕ್ತೇಚಿದಾನಂದೇಚ್ಛಾ ಜ್ಞಾನ ಕ್ರಿಯಾದಿ
> ನಾನಾರೂಪತಾವಗಮಾತ್"

ಶ್ರುತಿಯಲ್ಲಿ 'ಸ್ವಾಭಾವಿಕೀ' ಎಂದಿರುವುದರಿಂದ ಶಕ್ತಿಯು ಪರಬ್ರಹ್ಮಕ್ಕೆ ಆಗಂತುಕವಾಗಿ ಬಂದುದಲ್ಲ; ಅದು ಅದಕ್ಕೆ ಸ್ವಾಭಾವಿಕವಾಗಿರುವುದು. ನಿಜಗುಣ ಶಿವಯೋಗಿಗಳು ಹೇಳುವಂತೆ "ಇಂಗಡಲೊಳಿಂಪು. ಬೆಳದಿಂಗಳೊಳು ತಂಪು, ಕುಸುಮಂಗಳೊಳು ಕಂಪು ಬೆರೆದಂತೆ ಪರಮನೊಳು ಬೆರೆದಿಹ ಅಗಜಾತೆ" ಶಿವನ ಶಕ್ತಿ.

> "ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ,
> ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ॥

ಹೀಗೆ ಕಾಳಿದಾಸನೂ ಶಕ್ತಿವಿಶಿಷ್ಟಾದ್ವೈತವನ್ನು ಹೇಳಿರುವನು. ಪರಶಿವನ ಪರಾಶಕ್ತಿಯು ಇಚ್ಛಾಶಕ್ತಿ. ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿ ರೂಪದಿಂದ ಜಗತ್ತನ್ನು ಸೃಷ್ಟಿಸುವ ವಿಷಯದಲ್ಲಿ ವಿಶ್ರಾಂತ ಸಂಸ್ಕೃತ ಮಹಾಪಾಠಶಾಲಾಧ್ಯಕ್ಷ ಚಂದ್ರಶೇಖರ ಶಾಸ್ತ್ರಿ, ಎಂ.ಎ. ಅವರು ತಾವು ಬರೆದಿರುವ

"ಭಾರತಾರ್ಯರ ಧಾರ್ಮಿಕ ಸಂಸ್ಕೃತಿ"ಯೆಂಬ ಗ್ರಂಥದ ೫೩ನೇ ಪುಟದಲ್ಲಿ ಹೀಗೆ ವಿವರಿಸಿರುತ್ತಾರೆ:

"ಏಕಮೇವಾದ್ವಿತೀಯವಾದ ಪರಬ್ರಹ್ಮ ತತ್ತ್ವವು . . . ಈ ಪ್ರಪಂಚವನ್ನು ಸೃಜಿಸುವಾಗ ಮೊದಲು '**ಸೋऽಕಾಮಯತ ಬಹುಸ್ಯಾಂ ಪ್ರಜಾಯೇಯ**' ಎಂದು ಉಪನಿಷತ್ತಿನಲ್ಲಿ ಹೇಳಿರುವಂತೆ, ಯೋಚಿಸಿದಾಗ ಬ್ರಹ್ಮತತ್ತ್ವದ ಇಚ್ಛಾಶಕ್ತಿಯ ಮುಂದಾಗುವಿಕೆ ಅಥವಾ ಆವಿರ್ಭಾವ ಆಗುತ್ತದೆ. '**ಇಚ್ಛಾಶಕ್ತಿಃ ಉಮಾ ಕುಮಾರೀ**' ಎಂದು ವರ್ಣಿಸಿದ ಶಕ್ತಿಯೇ ಈ ಇಚ್ಛಾಶಕ್ತಿಯಾಗಿರಬೇಕು. ಆಮೇಲೆ ಆ ಇಚ್ಛಾಪೂರ್ತಿಗಾಗಿ ಕ್ರಮವಾಗಿ ಆಲೋಚನೆ ಮಾಡಿದ ಅಂಶವನ್ನು "**ಸತಪೋऽತಪ್ಯತ**" ಎಂದು ವಿವರಿಸುವ ಆ ಉಪನಿಷತ್ತಿನ ವಾಕ್ಯವು ಆ ಬ್ರಹ್ಮ ತತ್ತ್ವದ ಆವಿರ್ಭಾವವನ್ನು ಸೂಚಿಸುತ್ತದೆ. ಹಾಗೆಯೇ '**ಸತಪಸ್ತಪ್ತ್ವಾ ಇದಂ ಸರ್ವಮ ಸೃಜತ**' ಎಂಬ ಅದೇ ಉಪನಿಷತ್ತಿನ ವಾಕ್ಯದಿಂದ ಆ ಪರತತ್ವದ ಕ್ರಿಯಾಶಕ್ತಿಯ ಆವಿರ್ಭಾವವೂ ಜಗನ್ನಿರ್ಮಾಣವೂ ಕ್ರಮವಾಗಿ ರೂಪಗೊಂಡುದನ್ನು ಸೂಚಿಸುತ್ತದೆ."

ವಚನಕಾರರು ಹೇಳುವಂತೆ ಪರಶಿವನ ಶಕ್ತಿಯ ಆವಿರ್ಭಾವದಿಂದ ಜಗತ್ ಸೃಷ್ಟಿಯಾಯಿತೆಂಬುದೂ ಉಪನಿಷತ್ತುಗಳಿಗೆ ಸಮ್ಮತವಾದುದೆಂಬುದನ್ನು ಮೇಲೆ ಕಂಡ ವಿದ್ವಾಂಸರು ತೋರಿಸಿದ್ದಾರೆ. ಶಕ್ತಿಯ ಆವಿರ್ಭಾವದಿಂದ ಸೃಷ್ಟಿಯಾಯಿತೆಂಬುದನ್ನು ತೋರಿಸಲು ಕೆಲವು ವಚನಗಳನ್ನು ಉದಾಹರಿಸಬಹುದು. ಮುಂದಿನ ವಚನವು ಹೆಚ್ಚು ಸ್ಪಷ್ಟವಿಲ್ಲವಾಗಿ ಶೂನ್ಯ ಲೀಲಾ ವಿಲಾಸವಲ್ಲಿ ಕೊಟ್ಟಿರುವ ಅವರ ಟೀಕೆಯನ್ನು ಸಹಾ ಕೊಟ್ಟಿದೆ.

**ವಚನ:** ಬಯಲು ಮೊಳಗಿ, ಮಳೆ ಸೃಜಿಸಿ, ಆ ಬಯಲು ಆ ಮಳೆಯನೊಡಗೂಡಿ ಘೃಷ್ಟವಪ್ಪ ವಾರಿಕಲ್ಲಾಗಿ ತೋರಿದಂತೆ ನಿನ್ನ ನೆನಹೇ ನಿನಗೆ ಶಕ್ತಿಯಾಯಿತ್ತಲ್ಲಾ. ಆ ನಿಮ್ಮಿಬ್ಬರ ಸಮರತಿಯೇ ನಿಮಗೆ ಅಖಂಡವೆಂಬ ನಾಮಸೂಚನೆಯಾಯಿತ್ತಲ್ಲಾ. ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಆದಿಗೆ ಇದೇ ಪ್ರಥಮವಾಯಿತ್ತಲ್ಲಾ.

**ಟೀಕು:** ಆಕಾಶದ ಶಬ್ದನಾದಗಳಿಂದ ವಾಯುಜಲಂಗಳು ಹುಟ್ಟಿದವು. ಆ ಹುಟ್ಟಿದ ವಾಯುಜಲದಲ್ಲಿ ಶಬ್ದವೆಂಬ ನಾದಾಕಾಶ ವಾಯುರೂಪಾಗಿ

ಕೂಡಲು ವಾರಿಕಲ್ಲಾಯಿತ್ತು ಎಂಬುದೀಗ 'ಬಯಲು ಮೊಳಗಿ ಮಳೆ ಸೃಜಿಸಿ ಆ ಬಯಲು ಆ ಮಳೆಯನೊಡಗೂಡಿ ದೃಷ್ಟವಪ್ಪ ವಾರಿ ಕಲ್ಲಾಗಿ ತೋರಿದಂತೆ' ಎಂಬ ಶಬ್ದಕ್ಕರ್ಥ. ಈ ದೃಷ್ಟದಂತೆ ನಿಷ್ಕಲವಾಗಿಪ್ಪ ಪರಬ್ರಹ್ಮವೆಲ್ಲಾ ಪರಮ ಚೈತನ್ಯ ಚಿತ್ಸ್ವರೂಪು. ಅಂತಿಪ್ಪ ಪರಬ್ರಹ್ಮವು ತನ್ನ ಸ್ವಚಿತ್ತಿನಿಂದ ತನ್ನ ನೆನವುತ್ತಿಪ್ಪ ಚಿತ್ಸಾಮರ್ಥ್ಯವೇ ತನಗೆ ಚಿಚ್ಛಕ್ತಿ ಯಾಯಿತೆಂಬುದೀಗ 'ನಿನ್ನ ನೆನಹೇ ನಿನಗೆ ಶಕ್ತಿಯಾಯಿತಲ್ಲಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವು ತನ್ನ ಅಭಿನ್ನ ಸ್ವಶಕ್ತಿಯಪ್ಪ ಚಿತ್ತು ವಿನ ನೆನಹಿನ ರತಿಸುಖದಿಂದ ಅತಿಶಯವಾಗಿ ಅಖಂಡತೇಜೋಮೂರ್ತಿ ಯಾದ ಮಹಾಲಿಂಗವಾಯಿತ್ತೆಂಬುದೀಗ 'ಆ ನಿಮ್ಮಿಬ್ಬರ ಸಮರತಿಯೇ ನಿಮಗೆ ಅಖಂಡವೆಂಬ ನಾಮಸೂಚನೆಯಾಯಿತ್ತಲ್ಲಾ' ಎಂಬ ಶಬ್ದಕ್ಕರ್ಥ. ಅಂತು ತನ್ನ ಚಿದ್ವಿಲಾಸಾನಂದಲೀಲೆಯಿಂದಲಾದ ಮಹಾ ಲಿಂಗಮೂರ್ತಿಯೇ ಶಿವನ ಸಾಕಾರಮೂರ್ತಿಗಳಿಗೆ ಪ್ರಥಮವೆಂಬುದೀಗ 'ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಆದಿಗೆ ಇದೇ ಪ್ರಥಮವಾಯಿತ್ತಲ್ಲಾ' ಎಂಬ ಶಬ್ದಕ್ಕರ್ಥ.

ಮತ್ತೊಂದು ವಚನದಿಂದ ವಚನಕಾರರ ನಿಲುವನ್ನು ಸ್ಪಷ್ಟಗೊಳಿಸಬಹುದು.

"ಪ್ರಥಮದಲ್ಲಿ ಅಖಂಡಾದ್ವಯ ಅನುಪಮ ನಿರವಯ ನಿರಂಜನ ಸರ್ವಶೂನ್ಯವನೊಳಗೊಂಡ ಸಚ್ಚಿದಾನಂದ ನಿತ್ಯ ಪರಿಪೂರ್ಣವಪ್ಪ ನಿಃಕಲ ಲಿಂಗವು ಧ್ಯಾನ ಪೂಜೆಗಳಿಲ್ಲದೆ, ನಿರವಯದಲ್ಲಿ ಬಯಲಿಗನಾಗಿ ಇರಬಾರದೆಂದು ತನ್ನ ಸ್ವೇಚ್ಛಾವಿಲಾಸದ ನೆನಹಿನಿಂದ ತನ್ನ ಚಿತ್‌ಪ್ರಭಾ ಸಾಮರ್ಥ್ಯ ಶಕ್ತಿಯ ಮುಂದುಗೊಂಡು, ಅನಂತಕೋಟಿ ಬ್ರಹ್ಮಾಂಡ ಗಳನು, ಅನಂತಕೋಟಿ ಆತ್ಮರುಗಳನ್ನು ತನ್ನಲ್ಲಿಯೇ ಪುಟ್ಟಿಸಿ, ಆತ್ಮರು ಗಳಿಗೆ ಪಂಚವಿಂಶತಿ ತತ್ವಗಳನು ಸಂಬಂಧಿಸಿದಲ್ಲಿ, ಆ ಆತ್ಮರುಗಳು ಧೇಹೋಹಮೆಂದು ಜಾತಿ, ವರ್ಣಾಶ್ರಮ, ಕುಲಗೋತ್ರ, ನಾಮಸೀಮೆ, ಸುಖದುಃಖ, ಬಂಧ ಮೋಕ್ಷ ಇವುಗಳಿಗೊಳಗಾಗಿ ತಮ್ಮ ನಿಜಸ್ವರೂಪವ ಮರೆದು ಆತ್ಮರುಗಳ ಕಾಲ ಕಾಮರಿಗೆ ವಶಮಾಡಿ ಅವರ ಸುಖದುಃಖ ಬಂಧ ಮೋಕ್ಷಗಳ ಹೊದ್ದದೆ ಯಂತ್ರವಾಹಕನಾಗಿ ಆಡಿಸುತಿರ್ಪನಾ ಶಿವಲಿಂಗವು."

ಹೀಗೆಯೇ ಪರಬ್ರಹ್ಮದ ಸ್ವೇಚ್ಛಾವಿಲಾಸದ ನೆನಹೇ ಜಗತ್ಸೃಷ್ಟಿಗೆ ಕಾರಣವಾಯಿತೆಂದು ಅನೇಕ ಉಪನಿಷತ್ತುಗಳಲ್ಲಿ ಸ್ಪಷ್ಟವಾಗಿ ಹೇಳಿರುವುದು.

ತೈತ್ತರೀಯೋಪನಿಷತ್ತಿನಲ್ಲಿ 'ಸೋಽಕಾಮಯತ ಬಹುಸ್ಯಾಂ ಪ್ರ
ಯೇಯೇತಿ। ಸತಪೋಽತಪ್ಯತ'; ಪ್ರಶ್ನೋಪನಿಷತ್ತಿನಲ್ಲಿ 'ಪ್ರ
ಕಾಮೋ ವೈ ಪ್ರಜಾಪತಿಃ। ಸತಪೋಽತಪ್ಯತ'; ಐತರೇಯೋಪನಿ
ನಲ್ಲಿ 'ಸ ಈಕ್ಷತ ಲೋಕಾನ್ನು ಸೃಜಾ ಇತಿ' ಎಂದು ಹೇಳಿರುವ
ಮೇಲಿನ ವಚನಗಳಲ್ಲಿ ಹೇಳಿದ ಅಭಿಪ್ರಾಯವೇ ವ್ಯಕ್ತವಾಗಿರುವುದು. '
ಚ್ಛಯಾ ಸ್ವಭಿತ್ತೌ ವಿಶ್ವಮುನ್ಮೀಲಯತಿ' ಎಂದು ಪ್ರತ್ಯಭಿಜ್ಞಾಹೃದ
ಎರಡನೆಯ ಸೂತ್ರದಲ್ಲಿ ಹೇಳಿರುವುದು ಈ ಅರ್ಥದಲ್ಲಿಯೇ. ಪರಶ
ನಿಂದಲೇ ತ್ರಿಮೂರ್ತಿಗಳೇ ಮೊದಲಾದ ದೇವರ್ಕಳೂ ಮಾನವರೂ ಪ
ಗಳೂ ಸಕಲ ಚರಾಚರಂಗಳೂ ಉದ್ಭವಿಸಿದುದು ಉಪನಿಷತ್ತುಗಳಲ್ಲಿ
ವಚನ ಶಾಸ್ತ್ರದಲ್ಲಿಯೂ ಹೇಳಿದೆ.

"ಆದಿಯಲ್ಲೊಬ್ಬ ಮೂರ್ತಿಯಾದ, ಆತನ ಮೂರ್ತಿಯಿಂದ ಸದಾ
ಶಿವನಾದ, ಆ ಸದಾಶಿವನ ಮೂರ್ತಿಯಿಂದ ಜ್ಞಾನಶಕ್ತಿಯಾದಳು. ಆ
ಸದಾಶಿವಂಗೆಯೂ ಜ್ಞಾನಶಕ್ತಿ ಇಬ್ಬರಿಗೆಯೂ ಶಿವನಾದ. ಶಿವಂಗೆಯೂ
ಇಚ್ಛಾಶಕ್ತಿಯರಿಬ್ಬರಿಗೆಯೂ ವಿಷ್ಣುವಾದ. ಆ ವಿಷ್ಣುವಿಂಗೆ ಮಹಾ
ಲಕ್ಷ್ಮಿಯಾದಳು. ಆ ವಿಷ್ಣುವಿಂಗೆಯೂ ಮಹಾಲಕ್ಷ್ಮಿಯರಿಬ್ಬರಿಗೆಯೂ
ಬ್ರಹ್ಮನಾದ. ಆ ಬ್ರಹ್ಮಂಗೆ ಸರಸ್ವತಿಯಾದಳು. ಆ ಬ್ರಹ್ಮಂಗೆ ಸರಸ್ವತಿ
ಯರಿಬ್ಬರಿಗೆಯೂ ನರರು ಸುರರು ದೇವರ್ಕಳು ಹೆಣ್ಣು ಗಂಡು ಸಚ
ರಾಚರಂಗಳು ಸಹಿತವಾಗಿ ಎಂಬತ್ತುನಾಲ್ಕು ಲಕ್ಷ ಜೀವ ಜಂತುಗಳು
ತೋರುವ ತೋರಿಕೆಯಲ್ಲಾ ಹುಟ್ಟಿತ್ತು ಕೂಡಲ ಚೆನ್ನ ಸಂಗಯ್ಯ"

ತ್ರಿಮೂರ್ತಿಗಳೂ ಅವರ ಶಕ್ತಿ ಮತ್ತು ಸ್ತ್ರೀ ಪುರುಷ ಸುರ ನ
ಪ್ರಾಣಿ ಸರ್ವಸ್ವವೂ ಪರತತ್ವದಿಂದ ಆವಿರ್ಭವಿಸಿದುದಕ್ಕೆ ಉಪನಿ
ಗಳಲ್ಲಿಯೂ ಆಧಾರವಿದೆ.

"ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ ಸಾಧ್ಯಾ ಮನುಷ್ಯಾಃ ಪಶವೋ
ವಯಃ
ಪ್ರಾಣಾಪಾನೌ ವ್ರೀಹಿಯವೌ ತಪಶ್ಚ ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ॥
ಅತಃ ಸಮುದ್ರಾ ಗಿರಿಯಶ್ಚ ಸರ್ವೇಽಸ್ಮಾತ್ ಸ್ಯಂದಂತೇ ಸಿಂಧವಃ ಸರ್ವರೂಪಾಃ
ಅತಶ್ಚ ಸರ್ವಾ ಓಷಧಯೋ ರಸಶ್ಚ ಯೇನೈಷ ಭೂತೈಸ್ತಿಷ್ಠತೇ ಹ್ಯಂತರಾತ್ಮಾ॥"

ಮುಂಡಕೋಪನಿಷತ್ತಿನ ಈ ಮಂತ್ರಗಳಲ್ಲಿ ಹೇಳಿದಂತೆ ಪರಮಾತ್ಮನು ದೇವಾದಿದೇವತೆಗಳಾದಿಯಾಗಿ ಸಕಲ ಚರಾಚರಗಳನ್ನು ಸೃಷ್ಟಿಸುವನಲ್ಲದೆ, ಸರ್ವ ಭೂತಗಳಲ್ಲಿಯೂ ಅಂತರಾತ್ಮನಾಗಿರುವನು. ಉರಿಲಿಂಗಿಪೆದ್ದಿಯ ವಚನವೊಂದರಲ್ಲಿ ಹೇಳಿದಂತೆ "ಶಿವ ತನ್ನ ವಿನೋದಕ್ಕೆ ರಚಿಸಿದನು ಅನಂತ ವಿಶ್ವವನು. ರಚಿಸಿದವನು ವಿಶ್ವಕ್ಕೆ ಹೊರಗಾಗಿರ್ದನೆ? ಇಲ್ಲ ವಿಶ್ವಮಯ ತಾನಾದನು." 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಎಂದು ತೈತ್ತಿರೀಯೋಪನಿಷತ್ತಿನಲ್ಲಿ, ಪರಬ್ರಹ್ಮವು ಸೃಷ್ಟಿಸಿದ ವಿಶ್ವದ ಹೊರಗೆ ನಿಲ್ಲದೆ, ಅದರಲ್ಲಿ ಅನುಪ್ರವೇಶ ಮಾಡಿದುದನ್ನು ಹೇಳಿದೆ.

> ರುದ್ರ ಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜನ ಜನನವು; ಇಂದ್ರ ಪಾದದಲ್ಲಿ, ಚಂದ್ರ ಮನದಲ್ಲಿ, ಚಕ್ಷುವಿನಲ್ಲಿ ಸೂರ್ಯ ಜನನವು; ನೊಸಲಲಗ್ನಿಯು, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷ ಜನನವು; ಶಿರದಲುದಯ ತೆತ್ತೀಸಕೋಟಿ ದೇವರ್ಕಳು; ಪಾದತಳದಲ್ಲಿ ಭೂಮಿ ಜನನವು, ಶೋತ್ರದಲ್ಲಿ ದಶದಿಕ್ಕು, ಜಗವ ನಿಕ್ಷೇಪಿಸಿದ ಕ್ಷುಕ್ಷಿಯೊಳಕ್ಷಯನಗಣಿತ ನೀನು; ಸಾಸಿರ ಮುಖ, ಸಾಸಿರ ಕಣ್ಣು ಸಾಸಿರ ಭುಜ, ಸಾಸಿರ ಪಾದ, ಸಾಸಿರ ಸಂನಿಹಿತ ನಮ್ಮ ಕೂಡಲ ಸಂಗಮದೇವರು.

ಬಸವೇಶವಚನವಿದು ಕೆಲವು ಉಪನಿಷತ್ತಿನ ಮಂತ್ರಗಳನ್ನು ಜ್ಞಾಪಕಕ್ಕೆ ತರುವುದು :—

"ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರ ಸೂರ್ಯೌ ದಿಶಃ ಶ್ರೋತ್ರೇ
ವಾಗ್ವಿವೃತಾಶ್ಚ ವೇದಾಃ
ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ
ಸರ್ವಭೂತಾಂತರಾತ್ಮಾ"

ಮುಂಡಕ ೨-೧-೪

"ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್"

ಶ್ವೇತಾಶ್ವತರ ೩-೪

> ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಹು ನೀನೇ ದೇವಾ, ವಿಶ್ವತೋಚಕ್ಷು ನೀನೇ ದೇವಾ, ವಿಶ್ವತೋ ಮುಖ

ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ವಿಶ್ವತೋ ಪಾದ
ನೀನೇ ದೇವಾ ಕೂಡಲ ಸಂಗಮದೇವಾ-

ಎಂಬ ಬಸವಣ್ಣನವರ ಉದ್ಗಾರ ಈ ಉಪನಿಷತ್ತಿನ ಮಾತೇ. ಹಾಗೆಯೇ

ಹಿರಿದಕ್ಕೆ ಹಿರಿದು, ಕಿರಿದಕ್ಕೆ ಕಿರಿದು, ವಾಙ್ಮನಕ್ಕಗೋಚರ, ಕೂಡಲ
ಸಂಗಮದೇವಾ "

ಎಂಬಲ್ಲಿ 'ಅಣೋರಣೀಯಾನ್ ಮಹತೋ ಮಹೀಯಾನ್' ಎ
ಕಠೋಪನಿಷತ್ತಿನಲ್ಲಿ ಹೇಳಿರುವುದು ಜ್ಞಾಪಕಕ್ಕೆ ಬರುವುದು.

ಹೀಗೆ ವಿಶ್ವವ್ಯಾಪಿಯು ಸರ್ವ ಭೂತಾಂತರಾತ್ಮನಾಗಿದ್ದರೂ ಸ
ಗೋಚರವಾಗದಂತೆ ಹೇಗೆ ಇದ್ದಾನೆಂಬ ಪ್ರಶ್ನೆಯು ಹುಟ್ಟುವುದು. ಶ್ವೇತಾ
ತರ ಉಪನಿಷತ್ತಿನಲ್ಲಿ ಹೀಗೆ ಇದಕ್ಕೆ ಉತ್ತರವಿದೆ:

" ತಿಲೇಷು ತೈಲಂ ದಧಿನೀವ ಸರ್ಪಿಃ, ಆಪಃ ಸ್ರೋತಃಸು
ಅರಣಿಷು ಚಾಗ್ನಿಃ ಏವಮಾತ್ಮಾ ಆತ್ಮನಿ ಗೃಹ್ಯತೇ "

ಎಂದರೆ ಎಳ್ಳಿನಲ್ಲಿ ಎಣ್ಣೆಯು ಹೇಗೆ ಅಡಗಿದೆಯೋ ಹಾಗೆ, ಮೊಸರಿ
ಬೆಣ್ಣೆಯು ಹೇಗೆ ಅಡಗಿದೆಯೋ ಹಾಗೆ, ಭೂಮಿಯೊಳಗೆ ಚಿಲುಮೆಯ ನೀ
ಹೇಗೆ ಅಡಗಿದೆಯೋ ಹಾಗೆ, ಮರದಲ್ಲಿ ಅಗ್ನಿಯು ಹೇಗೆ ಅಡಗಿದೆ
ಹಾಗೆ ಜೀವಾತ್ಮನಲ್ಲಿ ಪರಮಾತ್ಮನೂ ಇದ್ದೂ ಕಾಣಿಸಿಕೊಳ್ಳದೆ ಇದ್ದಾನೆ
ಭಾವ. ವಚನಕಾರರೂ ಹಾಗೆಯೇ ಹೇಳಿದ್ದಾರೆ:

" ನೆಲದ ಮರೆಯ ನಿಧಾನದಂತೆ, ಮುಗಿಲ ಮನೆಯೊಳಡ
ಗಿರ್ದ ಮಿಂಚಿನಂತೆ, ಬಯಲ ಮರೆಯಲಡಗಿರ್ದ
ಮರೀಚಿಯಂತೆ, ಕಂಗಳ ಮರೆಯಲಡಗಿರ್ದ ಬೆಳಗಿನಂತೆ
ಗುಹೇಶ್ವರಾ ನಿಮ್ಮ ನಿಲುವು "—ಇದು ಪ್ರಭುವಿನ ವಚನ.

" ಕಾರಮೋಡದೊಳು ಮಿಂಚಡಗಿ ತೋರದ ತೆರದೆ,
ನೀರೊಳಡಕಂಗೈದ ಕಿಚ್ಚಿನಂತೆ
ಬೀರುತಿಹ ಫಲರಸದೊಳಿಪ್ಪ ನವರುಚಿಯಂತೆ
ವಾರಣದ ಮುಸ್ತಕದ ಮುತ್ತಿನಂತೆ

ಶಶಿಕಾಂತದೊಳಗುದಕ ರಸವಡಗಿ ನಿಂದಂತೆ
ಹಸುಳೆಯೊಳಗಣ ಸ್ವಪ್ನ ತೋರದಂತೆ
ನಸುನನೆಯೊಳಡಗಿರ್ದ ನವಸುಗಂಧದ ತೆರದಿ
ಉಸುರೊಳಡಗಿರ್ದ ಚೈತನ್ಯದಂತೆ

ಕ್ಷೀರದೊಳು ಘೃತವಡಗಿ ನೀರು ಮುತ್ತಿನೊಳಡಗಿ
ಆರೈದು ನೋಡೆ ಬೀಜದೊಳು ವೃಕ್ಷ
ಸಾರಿರ್ದು ಮೊಳೆದೋರದಂತಿರ್ಪ ಮಹಾ ಘನವ
ಆರು ಭೇದಿಸಿ ಕಾಣಲರಿದು ನೋಡಾ

ಪಾಷಾಣದೊಳಗಗ್ನಿ ಸೂಸದೆ ಬೆಡಂಗುಪರಿ
ಭಾಷೆ ತೋರದ ಜಲದ ನಿಲುವಿನಂತೇ
ನೇಸರೊಳಡಗಿರ್ದ ಮರೀಚನಂದದಲಿ ಲೀ–
ಲಾ ಶಿಶುವ ಪಿಂಡ ಮೈದೋರದಿಹುದು

ರೂಪು ರೂಪಿನೊಳಡಗಿ ರೂಪಿಸದೆ ನಿಂದ ನಿಜ
ರೂಪ ನಿಶ್ಚಲವಾಗಿ ಸಂಚಲಿಸದೆ
ತಾ ಪರಾತ್ಪರವಾಗಿ ನಿಂದ ನಿಜಪದವು, ಚಿ
ದ್ರೂಪ, ಕೂಡಲ ಚೆನ್ನಸಂಗಯ್ಯನೂ "

ಹೀಗೆ ಪರಮಾತ್ಮನು ಜೀವಾತ್ಮನಲ್ಲಿ ಅಡಗಿ ಅವ್ಯಕ್ತನಾಗಿರುವುದನ್ನು ಚೆನ್ನಬಸವಣ್ಣನವರು ಅನೇಕ ಉಪಮಾನಗಳಿಂದ ವಿವರಿಸಿದ್ದಾರೆ. ಬಸವಣ್ಣನವರ ಈ ವಚನದಲ್ಲಿಯೂ ಹೇಗೆ ಪರಮಾತ್ಮನು ಸರ್ವಭೂತಾಂತರಾತ್ಮನಾಗಿಯೂ ಅವ್ಯಕ್ತನಾಗಿಯೂ, ಇದ್ದಾನೆಂಬುದನ್ನು ವಿವರಿಸಿದ್ದಾರೆ :

ಉದರದೊಳಗೆ ಬಯಿಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು, ಸಸಿಯೊಳಗಣ ರಸದ ರುಚಿಯಂತಿದ್ದಿತ್ತು, ನನೆಯೊಳಗಣ ಪರಿಮಳದಂತಿದ್ದಿತ್ತು ಕೂಡಲ ಸಂಗಮದೇವಾ, ಕನ್ನೆಯ ಸ್ನೇಹದಂತಿದ್ದಿತ್ತು.

ಹೂವಿನಲ್ಲಿ ವಾಸನೆಯಿರುತ್ತದೆ, ಆದರೆ ಮೊಗ್ಗಿನಲ್ಲಿರುವುದೇ ವಾಸನೆ ? ಮೊಗ್ಗಿನಲ್ಲಿಲ್ಲದುದು ಹೂವಿನಲ್ಲಿ ಬರಲಾರದು. ಭಗವದ್ಗೀತೆಯಲ್ಲಿ ಹೇಳಿದಂತೆ 'ನಾಸತೋ ವಿದ್ಯತೇ ಭಾವಃ'. ಇಲ್ಲದುದರಲ್ಲಿ ಇರುವುದು ಹುಟ್ಟದು. ಮೊಗ್ಗಿನಲ್ಲಿ ವಾಸನೆಯು ಅವ್ಯಕ್ತವಾಗಿದ್ದು ಹೂವಿನಲ್ಲಿ ವ್ಯಕ್ತವಾಗುವುದು.

ಪ್ರೌಢಸ್ತ್ರೀಯಲ್ಲಿ ಮೋಹವನ್ನುಂಟುಮಾಡುವ ಶಕ್ತಿಯಿರುವುದು ; ಕನ್ಯೆ ಎಷ್ಟು ಸುಂದರಿಯಾದರೂ ಮೋಹವನ್ನು ಹುಟ್ಟಿಸುವ ಶಕ್ತಿಯು ಅವ ತೋರುವುದಿಲ್ಲ. ಆದರೆ ಈ ಶಕ್ತಿಯು ಹಿಂದೆ ಇಲ್ಲದ್ದು ಮುಂದೆ ಉಂಟ ತೆಂದಲ್ಲ ; ಕನ್ಯೆಯಲ್ಲಿ ಬೀಜರೂಪವಾಗಿದ್ದುದು ಪ್ರೌಢಾವಸ್ಥೆಯಲ್ಲಿ ಹೊಮ್ಮಿತು ಎಂದಷ್ಟೆ ಅಭಿಪ್ರಾಯ :

> ಸಣ್ಣನನೆಯೊಳಗಣ ಪರಿಮಳವ ಹೊರಸೂಸಿ ಇದಿರಿಂಗರುಹ ಬಲ್ಲುದೆ ವಾಯು? ಕೊಡಗೂಸಿನೊಳಗಣ ಮೊಲೆ ಮುಡಿಯು ಹಡೆದ ತಾಯಿ ತಂದೆಗಳೆಂದರೆ ಕಾಣಿಸಿಕೊಡಬಲ್ಲರೆ ಕಾಂಬವರ ಕಣ್ಣಿಂಗೆ! ಪಕ್ವಕ್ಕಲ್ಲದೆ ಪರಿಣಾಮ ಕಾಣಿಸದು ರಾಮನಾಥ.

ಮಾವಿನ ಹಣ್ಣೇ ಮೊದಲಾದ ಹಣ್ಣುಗಳು ಹಣ್ಣಾಗುವ ಮೊ ಹೂವಾಗಿ ಮಿಡಿಯಾಗಿ ಕಾಯಾಗಿ ಸುಮಧುರವಾದ ಹಣ್ಣಾಗುವುದು ಮರದೊಳಗಣರಸದಿಂದಲೇ ಆದರೂ, ಹಣ್ಣಿನಲ್ಲಿರುವ ರುಚಿಯು ಆ ರಸ ಕಾಣಬಾರದಾಗಿದೆ. ಆದರೆ ರಸದಲ್ಲಿ ಅವ್ಯಕ್ತವಾದ ರುಚಿಯನ್ನು ಕೊಡ ಶಕ್ತಿಯು ಇಲ್ಲದಿದ್ದರೆ ಆ ಹಣ್ಣಿಗೆ ಕಾರಣವಾದ ರಸದಲ್ಲಿಲ್ಲದ ರುಚಿ ಹಣ್ಣಿಗೆ ಬರುತ್ತಿರಲಿಲ್ಲ ; ಈ ರುಚಿಯು ಅವ್ಯಕ್ತವಾಗಿ ಮಾವಿನ ಸಸಿ ಗಣ ರಸದಲ್ಲಿಯೇ ಇರುವುದು ಹೇಗೋ ಹಾಗೆಯೇ, ಮುಂದೆ ಜಗತ್ತಾ ವಾಗಿ ಶಿವನಲ್ಲಿ ವ್ಯಕ್ತವಾಗುವ ಶಕ್ತಿಯು ಶಿವನೊಳಗೆ ಅವ್ಯಕ್ತ 'ಸಸಿಯೊಳಗಣ ರಸದ ರುಚಿಯಂತಿದ್ದಿತ್ತು' ಎನ್ನಬೇಕಾಗುವುದು.

ಇನ್ನು ಉದರದೊಳಗೆ ಬಯಿಚಿಟ್ಟ ಬಯಕೆಯೆಂದರೇನು? ಹೊ ಯೊಳಗಿರುವ ಕಿಚ್ಚು, ಹೊಟ್ಟೆಯ ಕಿಚ್ಚು. ಈ ಹೊಟ್ಟೆಯ ಕಿಚ್ಚು ಇತ ವ್ಯಕ್ತವಾಗಿರುವುದಿಲ್ಲ ; ಯಾವುದನ್ನೋ ಪಡೆಯಬೇಕೆಂಬುದು, ಅಥ ಯಾವುದನ್ನೋ ನಾಶಮಾಡಬೇಕೆಂಬುದು ಆ ಬಯಕೆ ; ಆ ಬಯಕೆಯ ಕಾರ್ಯಗತ ಮಾಡುವಾಗಲೇ ಅದು ವ್ಯಕ್ತವಾಗುವುದು. ಅದು ಕಾರ್ಯ ವಾಗುತ್ತಿರುವಾಗ ಅಷ್ಟೋ ಇಷ್ಟೋ ಗೊತ್ತಾದಾಗ 'ನಿನ್ನ ಹೊಟ್ಟೆ ಇರುವುದೇನು?' ಎಂದು ಕೇಳಬೇಕಾಗುವುದು ; ಕಾರ್ಯರೂಪದಲ್ಲಿ ವಾಗುವ ಮೊದಲು ಉದರದಲ್ಲಿರುವ ಈ ಬಯಕೆಯ ಕಿಚ್ಚು ಅವ್ಯಕ್ತ

ಉದಕದೊಳಗೆ ಬಯಿಬಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು ' ಎಂಬ ಪಾಠಾಂತರವುಂಟು ; ಇದು ಸರಿಯಲ್ಲ, ಬಯಕೆ ಎಂಬ ಪದ ಈ ಪಾಠಾಂತರದಲ್ಲಿ ಸಾರ್ಥಕವಾಗುವುದಿಲ್ಲ. ಇದೇ ಅಭಿಪ್ರಾಯವು ಮತ್ತೊಂದು ವಚನದಲ್ಲಿದೆ. ಆದರೆ ಈ ವಚನದಲ್ಲಿ ಕಿಚ್ಚೆಂದರೆ ಜಠರಾಗ್ನಿ :

> ಒಡಲೊಳಗಣ ಕಿಚ್ಚು ಒಡಲ ಸುಡದ ಭೇದವ, ಕುಡಿದ ಉದಕದಲ್ಲಿ ಆ ಕಿಚ್ಚು ನಂದದ ಭೇದವ, ಮೃಡನೀ ಪ್ರಾಣಪ್ರಕೃತಿಯೊಳಡಗಿದ ಭೇದವ ಲೋಕದ ಜನರೆತ್ತ ಬಲ್ಲರೈ ರಾಮನಾಥ.

ಒಟ್ಟಿನಲ್ಲಿ, ಶಿವಚೈತನ್ಯವು ಶಿವನಲ್ಲಿ ಅಭಿನ್ನವೂ ಅವ್ಯಕ್ತವೂ ಆಗಿದ್ದುದು ಸೃಷ್ಟಿಗೆ ಮೊದಲು ವ್ಯಕ್ತವಾಗಿ ಶಿವನು ಶಕ್ತಿವಿಶಿಷ್ಟನಾಗುವನು. ನಾಸದೀಯಸೂಕ್ತದ ಮೊದಲನೆಯ ಮಂತ್ರದಲ್ಲಿ-ಶಿವನು ಶಕ್ತಿಯು ಹೊರಹೊಮ್ಮಿ ಶಕ್ತಿ ವಿಶಿಷ್ಟನಾಗದಿರುವ ಸ್ಥಿತಿಯನ್ನು ಹೇಳಿದೆಯೆಂಬುದನ್ನೂ, ಎರಡನೆಯ ಮಂತ್ರದಲ್ಲಿ ಶಕ್ತಿಯು ಹೊರಹೊಮ್ಮದಿದ್ದರೂ ಅದು ಶಿವನ ಸ್ವರೂಪವಾಗಿ ಅದ್ವಿತೀಯವಾಗಿ ಇದ್ದಿತು ಎಂದು ಹೇಳುವುದೆಂಬುದನ್ನೂ, ಮೂರನೆಯ ಮಂತ್ರದಲ್ಲಿ ಶಕ್ತಿಯು ಹೊರಹೊಮ್ಮಿ ಜಗತ್‌ಸೃಷ್ಟಿಗಾಗಿ ಶಿವನು ಶಕ್ತಿ ವಿಶಿಷ್ಟನಾದ ವಿಷಯವನ್ನು ಹೇಳುವುದೆಂಬುದನ್ನೂ, ನಾಸದೀಯಸೂಕ್ತ ವಿಷಯವನ್ನು ಹೆಚ್ಚು ವಿವರಿಸುವಾಗ ತಿಳಿಸಲಾಗುವುದು.

## ಶಕ್ತಿವಿಶಿಷ್ಟ ಜಗತ್‌ಕರ್ತೃವಿನ ಕಲ್ಪನೆಯು ಸನಾತನವೂ ಸರ್ವಸಮ್ಮತವೂ ಆಗಿದೆ

ಪರಬ್ರಹ್ಮವು ಶಕ್ತಿವಿಶಿಷ್ಟವಾಗಿ ಜಗತ್ಕಾರಣವಾಗುವುದೆಂಬ ಕಲ್ಪನೆಯು ಸನಾತನವೂ ಸರ್ವಸಮ್ಮತವೂ ಆದುದೆನ್ನಬಹುದು. ಶೈವರು ಶಕ್ತಿ ವಿಶಿಷ್ಟ ಪರಶಿವಬ್ರಹ್ಮವು ಜಗತ್ಕಾರಣವೆಂದರೆ ವೈಷ್ಣವರು ಚಿದಚಿದ್‌ವಿಶಿಷ್ಟ ಲಕ್ಷ್ಮೀನಾರಾಯಣನು ಜಗತ್ಕಾರಣನೆನ್ನಬಹುದು. ಗುಲಾಬಿಯನ್ನು ಯಾವ ಹೆಸರಿನಿಂದ ಕರೆದರೂ ಅದು ಗುಲಾಬಿಯೇ ಎಂಬ ನುಡಿಯಂತೆ ಯಾವ ಹೆಸರಿನಿಂದ ಪರಬ್ರಹ್ಮವನ್ನು ಕರೆದರೂ, ಅದು ಪರಬ್ರಹ್ಮವೆ. ಶ್ರೀ ಶಂಕರಾ

ಚಾರ್ಯಕೃತ ಆನಂದಲಹರಿಯ ಮೊದಲನೆಯ ಪದ್ಯವನ್ನು ಕನ್ನಡಿಸಬಹುದು :

ಕಂದ: ಶಕ್ತಿವಿಶಿಷ್ಟಂ ಸೃಜಿಪನ। ಶಕ್ತಂ ಶಕ್ತಿರಹಿತಂ ಶಿವಂ ಸ್ಪಂದಿಸಲುಂ।
ಶಕ್ತನೆ ಹರಿಹರವಿಧಿನತ। ಶಕ್ತಿಯೆ ತವನುತಿಗೆ ನತಿಗೆ ಪುಣ್ಯವಿಹೀನ

ಶಿವನು ಶಕ್ತಿ ವಿಶಿಷ್ಟನಾದರೇನೆ ಆವನು ಸ್ಪಂದಿಸಿ ಜಗತ್ಕಾರಣನಾಗ ಶಿವನು ಶಕ್ತಿ ವಿಶಿಷ್ಟನಾಗುವ ಮೊದಲು ನಿಷ್ಕಲನೂ ನಿಷ್ಕ್ರಿಯನೂ ತ್ತಾನೆ. ಮೇಲಿನ ಶ್ಲೋಕದಲ್ಲಿ ಸ್ಪಂದ ಪದವು ಗಮನಾರ್ಹವಾದುದು ನಿರ್ಣಯದಲ್ಲಿ ಹೇಳಿದಂತೆ† ಶಿವನು ಶಕ್ತಿ ಚಕ್ರವಿಭವ ಪ್ರಭವನಾ ಸ್ಥಿತಿಲಯಕ್ರಿಯೆಗಳಾಗವು ಋಗ್ವೇದೋಕ್ತತ್ರ್ಯಂಬಕಶಿವನು ಸಾ ಭಾಷ್ಯದಲ್ಲಿ ಹೇಳಿದಂತೆ "ತ್ರಯಾಣಾಂ ಬ್ರಹ್ಮ ವಿಷ್ಣು ರುದ್ರ "ಪಿತರಂ" ಎಂದ ಮೇಲೆ ಶಿವೆಯನ್ನು ಮೇಲಿನ ಶ್ಲೋಕದಲ್ಲಿ ಹ ಗಳಿಂದ ಆರಾಧ್ಯಳು ಎಂದು ಹೇಳಿರುವುದರಲ್ಲಿ ಅತಿಶಯವಿಲ್ಲ. ಲಹರಿಯ ೨೨ನೆಯ ಶ್ಲೋಕದಲ್ಲಿ ಶ್ರೀ ಶಂಕರರು ಭವಾ "ಮುಕುಂದ ಬ್ರಹ್ಮೇಂದ್ರ ಸ್ಫುಟಮುಕುಟ ನಿರಾಜಿತಪದಾಂ" ವರ್ಣಿಸಿದ್ದಾರೆ. ಹೀಗೆ ತ್ರಿಮೂರ್ತಿಗಳಿಗೂ ಕಾರಣವಾದ ಶಿವಶಕ್ತಿ ಜಗದುತ್ಪತ್ತಿಗೆ ಕಾರಣವೆಂಬುದು ಸುಭಗೋದಯದಲ್ಲೂ ವಾಮಕೇಶ್ವರ ತಂತ್ರದಲ್ಲಿಯೂ ಈ ನಿಲುವಿಗೆ ಸಮ್ಮತಿ ಇದೆ.§

---

* ಶಿವಃ ಶಕ್ತ್ಯಾಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ।
ನ ಚೇದೇವಂ ದೇವೋ ನ ಖಲು ಕುಶಲಃ ಸ್ಪಂದಿತುಮಪಿ॥
ಅತಸ್ತ್ವಾಮಾರಾಧ್ಯಾಂ ಹರಿಹರ ವಿರಿಂಚಾದಿಭಿರಪಿ।
ಪ್ರಣಂತುಂ ಸ್ತೋತುಂ ವಾ ಕಥಮಕೃತಪುಣ್ಯಃ ಪ್ರಭವತಿ॥

† ಯಸ್ಯೋನ್ಮೇಷ ನಿಮೇಷಾಭ್ಯಾಂ ಜಗತಃ ಪ್ರಲಯೋದಯಾ।
ತಂ ಶಕ್ತಿ ಚಕ್ರವಿಭವಪ್ರಭವಂ ಶಂಕರಂ ಸ್ತುಮಃ॥

‡ ಪರೋಽಪಿ ಶಕ್ತಿರಹಿತಃ ಶಕ್ತಃ ಕರ್ತುಂ ನ ಕಿಂಚನ।
ಶಕ್ತಃ ಸ್ಯಾತ್ ಪರಮೇಶಾನಿ ಶಕ್ತ್ಯಾಯುಕ್ತೋಭವೇದ್ ಯದಿ॥

§ ಪರೋಽಪಿ ಶಕ್ತಿರಹಿತಃ ಶಕ್ತ್ಯಾಯುಕ್ತೋ ಭವೇದ್ ಯದಿ।
ಸೃಷ್ಟಿಸ್ಥಿತಿಲಯಾನ್ ಕರ್ತುಮಶಕ್ತಃ ಶಕ್ತ ಏವ ಹಿ॥

ಕಾಶ್ಮೀರ ಶೈವಸಿದ್ಧಾಂತ ಪ್ರಕಾರವಾದರೂ ಶಿವಶಕ್ತಿಯೂ ಜಗದುತ್ಪತ್ತಿಗೆ ಕಾರಣ. 'ಪ್ರತ್ಯಭಿಜ್ಞಾಹೃದಯ'ದ ಮೊದಲನೆಯ ಸೂತ್ರದಲ್ಲಿಯೇ "ಚಿತಿಃ ಸ್ವತಂತ್ರಾ ವಿಶ್ವಸಿದ್ಧಿ ಹೇತುಃ" ಎಂದು ಹೇಳಿದೆ. ಕ್ಷೇಮರಾಜನು ಇದರ ವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾನೆ: "ವಿಶ್ವಸ್ಯ ಸದಾಶಿವಾದೇಃ ಭೂಮ್ಯಂತಸ್ಯ ಸಿದ್ಧೌ ನಿಷ್ಪತ್ತೌ . . . ಪರಾಶಕ್ತಿರೂಪಾ . . . ಶಿವ ಭಟ್ಟಾರಕಾಭಿನ್ನಾ ಹೇತುಃ ಕಾರಣಂ" ಸದಾಶಿವನ ಮೊದಲುಗೊಂಡು ಭೂಮಿಯವರೆಗಿನ ತತ್ತ್ವ ಸಮೂಹದ ಸೃಷ್ಟಿಗೆ ಪರಾಶಕ್ತಿ ರೂಪಳೂ ಶಿವಾಭಿನ್ನ ಶಕ್ತಿಯೇ ಕಾರಣಳೆಂದು ಇದರಲ್ಲಿ ಹೇಳಿದೆ. "ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ" ಎಂಬ ಶಿವ ಸೂತ್ರದಂತೆ ಶಿವನ ಶಕ್ತಿ ಪ್ರಸಾರವೇ ಈ ವಿಶ್ವ. ವೀರಶೈವರಿಗೆ ಮುಖ್ಯ ಆಧಾರವಾದ ಸಿದ್ಧಾಂತಶಿಖಾಮಣಿಯ ನಿಲುವಾದರೂ ಶಿವಾಭಿನ್ನವಾದ ಶಕ್ತಿಯು ಚಂದ್ರ ಚಂದ್ರಿಕೆಯಂತೆ ವಿಶ್ವ ವಸ್ತು ಪ್ರಕಾಶಿನಿಯು.* ವೀರಶೈವಕ್ಕೆ ಮುಖ್ಯ ಆಧಾರವಾದ ಶ್ವೇತಾಶ್ವತರ ಶ್ರುತಿಯಲ್ಲಿ ಈ ವಿಷಯವೇ ಅಲ್ಲಲ್ಲಿ ಹೇಳಲ್ಪಟ್ಟಿದೆ. ಅವುಗಳಲ್ಲಿ ಪ್ರಸಿದ್ಧವಾದ ಆಧಾರದ† ಪದ್ಯಾನುವಾದವಿದು:

ಕಂದ : ಮಾಯೆ ಪ್ರಕೃತಿಯೆ-ಎಂದರಿ ।
ಮಾಯಿಯು ಬಗೆಯಲ್ ಮಹೇಶ್ವರಂ ತಾನಿನ್ನಾ ॥
ಮಾಯಿಯವಯವಗಳಿಂದಾ ।
ದಾಯಾ' ಚರಚರಗಳಿಂದಿದು ಜಗಂವ್ಯಾಪ್ತಂ ॥

ಈ ಆಧಾರದಲ್ಲಿ ಇರುವ 'ಮಾಯಿನಂ' ಎಂಬ ಪದಕ್ಕೆ ಭಾಷ್ಯದಲ್ಲಿ "ಮಾಯಾಯಾಃ ಸ್ವಾಮಿನಂ, ನಿಯಂತಾರಂ, ಅಧಿಷ್ಠಾನಭೂತಂ,

---

* ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿಸ್ಥಿರಾ ॥ ೨೦–೩೨
ಅಂತಃಕರಣ ರೂಪೇಣ ಜಗದಂಕುರ ರೂಪತಃ ।
ಯಸ್ಮಿನ್ ವಿಭಾತಿ ಚಿಚ್ಛಕ್ತಿರ್ಬ್ರಹ್ಮ ಭೂತಃ ಸ ಉಚ್ಯತೇ ॥ ೨೦–೩೬

† ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ಚ ಮಹೇಶ್ವರಂ ।
ತಸ್ಯಾವಯವ ಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ॥

ಸ್ವರೂಪ ಸ್ಫುರಣಪ್ರದತಯಾ" ಎಂದು ಅರ್ಥಮಾಡಲಾಗಿದೆ. ಯಾ
ಎಂದರೆ ಯಾವುದು ಇಲ್ಲವೋ ಅದು ಮಾಯೆ ಎಂದು ಇಲ್ಲಿ ಅರ್ಥ
ಲಾಗುವುದಿಲ್ಲ ; ಏಕೆಂದರೆ ಮಾಯೆಯು ಹೇಗೆ ಜಗತ್ಕಾರಣಳೋ ಹಾ
ಜೀವನನ್ನು ಶಿವನೊಡನೆ ಸೇರಿಸುವುದಕ್ಕೂ ಮಾಯೆಯೇ ಕಾ
ಕುಂಡಲಿನೀರೂಪದಲ್ಲಿ ಜೀವನಲ್ಲಿ ಇದ್ದು, ಯೋಗದಲ್ಲಿ ಪ್ರಜ್ವೋ
ಸಹಸ್ರಾರವನ್ನು ಮುಟ್ಟಿಸಿ ಮೋಕ್ಷಕಾರಣಳಾಗುವಳು ಮಾಯೆ.
ಗಮದಲ್ಲಿ ಹೀಗೆ ಹೇಳಿದೆ:

ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ |
ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ ||

ನಿಜಗುಣ ಶಿವಯೋಗಿಗಳು 'ಅನುಭವಸಾರ' ಗ್ರಂಥದಲ್ಲಿ
ರಣವು ಯಾವುದು ಎಂಬ ಪ್ರಶ್ನೆಯನ್ನು ಎತ್ತಿ ಅದಕ್ಕೆ ಶ್ವೇತಾಶ್ವತರ
ಆಧಾರದಿಂದ ಉತ್ತರ ಹೇಳಿರುವರು. ಅವರ ಪ್ರಶ್ನೆಯು "ಜಗವಿ
ಪುಟ್ಟಿ, ಬಂಧುರಮಾಗಿ ತೋರುತಿಹುದೆಂತು ?" ಎಂಬುದು. ಆ ಪ್ರಶ್ನೆಗೆ
ವಿದು–"ಪರಸಚ್ಚಿದಾನಂದ ಪರಿಪೂರ್ಣ–ನಿತ್ಯ–ನಿಜ–ನಿರತಿಶಯ–ನಿರ್ವಿ
ನಿರುಪಾಧಿಯಾಗಿರುತಿರ್ಪುದೊಂದು ಪರಮಾತ್ಮ. . . . ದೇವಾತ್ಮ ಶಕ್ತಿ
ವಾಕ್ಯದಿಂ ಸಾರುವಾ ವೇದದಲಿ ತಿಳಿ, ಮಾಯೆತತ್ತ್ವದೊಳೋವಿ ಬೇರ್ಪ
ದೆಂದು." ಇದೇ ತೆರದ ಪ್ರಶ್ನೆ, ಇದೇ ತೆರದ ಉತ್ತರ ಶ್ವೇತಾಶ್ವತರ
ಷತ್ತಿನ ಕಾಲದಲ್ಲಿಯೇ ಆಗಿಹೋಗಿವೆ* ಶ್ವೇತಾಶ್ವತರೋಪನಿಷತ್ತಿ
ಪ್ರಶ್ನೋತ್ತರಗಳನ್ನು ಹೀಗೆ ಕನ್ನಡಿಸಬಹುದು—

* ಕಿಂ ಕಾರಣಂ ಬ್ರಹ್ಮ ? ಕುತಃ ಸ್ಮ ಜಾತಾಃ ? |
ಜೀವಾಮ ಕೇನ ? ಕ್ವಚ ಸಂಪ್ರತಿಷ್ಠಾ ? ||
ಅಧಿಷ್ಠಿತಾಃ ಕೇನ ಸುಖೇತರೇಷು |
ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾಂ ? ||
ತೇ ಧ್ಯಾನಯೋಗಾನುಗತಾ ಅಪಶ್ಯನ್ |
ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ ||
ಯಃ ಕಾರಣಾನಿ ನಿಖಿಲಾನಿ ತಾನಿ |
ಕಾಲಾತ್ಮಯುಕ್ತಾನ್ಯಧಿತಿಷ್ಠತ್ಯೇಕಃ ||

ಕಂದ— ಕಾರಣಮೇಂ ತಾಂ ಬ್ರಹ್ಮಮೆ ? |
ಆರೊಳ್ ಬ್ರಹ್ಮವಿದರೆ ಜನನಂ ನಿಲುಗಡೆ ? ಮೇ ||
ಣಾರಿಂ ಜೀವಿಪುದು ? ಬಗೆಯ |
ಲಾರಿಂ ಸುಖದುಃಖದೆಮ್ಮ ನಡತೆಗೆ ನಿಯಮಂ ? ||
ಅರಿವರ್ ಧ್ಯಾನಸುಯೋಗದೆ |
ಪರಿಕಿಸೆ ದೇವಾತ್ಮಶಕ್ತಿಯಂ ನಿಜಗುಣದೊಳ್ ||
ನೆರೆಯುಡಗಿರಲದ್ವಯನವ |
ನುರೆಕಾಲಾತ್ಮಾದಿಕಾರಣಂಗಳನಾಳ್ವಂ ||

ಆದರೆ, ಜಗತ್ಕಾರಣವಾಗಲು ಪರಶಿವಬ್ರಹ್ಮವು ಶಕ್ತಿವಿಶಿಷ್ಟವಾಗುವು ದೆಂಬುದು ಶ್ವೇತಾಶ್ವತರ ಉಪನಿಷತ್ತಿಗಿಂತಲೂ ಬಹಳ ಹಿಂದೆಯೇ ನಿರ್ಧರಿಸ ಲ್ಪಟ್ಟದೆ. ನಾಸದೀಯ ಸೂಕ್ತವು ಹೀಗೆ ಪ್ರಾರಂಭವಾಗುವುದಷ್ಟೆ. *

ಸದಸತ್ತುಗಳಾಗಲೀ ಹಗಲು ರಾತ್ರಿಗಳಾಗಲೀ ಆಕಾಶ ಅಂತರಿಕ್ಷಗಳಾ ಗಲೀ ಏನೇನು ಇಲ್ಲದಂದು ಇದ್ದುದು ಅದ್ವಯ ಪರಬ್ರಹ್ಮವೊಂದೆ. ಅದು ಸ್ವಧಯಾ ಎಂದರೆ ಸ್ವಶಕ್ತಿಯಿಂದ ಸ್ಫುರಣೆಗೊಳ್ಳುತ್ತಿದ್ದಿತು. ಈ ಮಂತ್ರದ ಸಾಯಣ ಭಾಷ್ಯದಲ್ಲಿ ಸ್ವಧಯಾ ಎಂಬ ಪದಕ್ಕೆ ಸ್ವಶಕ್ತಿಯಿಂದ ಎಂದು ಹೇಳಿ ಅರ್ಥ ಮಾಡಲ್ಪಟ್ಟದೆ. †

ಪರಬ್ರಹ್ಮವೆಂದರೆ ಪರಶಿವಬ್ರಹ್ಮವೆಂಬುದನ್ನು ನಾಸದೀಯ ಸೂಕ್ತದ ಮಾತಿನಲ್ಲಿಯೇ ಶ್ವೇತಾಶ್ವತರ ಉಪನಿಷತ್ತು ಸ್ಪಷ್ಟಮಾಡುತ್ತ—ಸದಸತ್ತು ಗಳೂ ದಿವಾರಾತ್ರಿಗಳೂ ಇಲ್ಲದಿದ್ದಾಗ ಕೇವಲ ಶಿವನೊಬ್ಬನೇ ಇದ್ದನೆಂದೂ ಅವನು ಸವಿತುರ್ವರೇಣ್ಯನೆಂದೂ ಹೇಳಿದೆ. ‡

---

* ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್‌ರಜೋ ನೋವ್ಯೋಮಾ ಪರೋ ಯತ್ ||
ನಮೃತ್ಯುರಾಸೀದಮೃತಂ ನತರ್ಹಿ ನರಾತ್ರ್ಯಾ ಅಹ್ನ ಆಸೀತ್ ಪ್ರಕೇತಃ |
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಽಽಸ ||

† ಸ್ವಧಯಾ—ಸ್ವಸ್ಮಿನ್ ಧೀಯತೇ ಧ್ರಿಯುತ ಆಶ್ರಿತ್ಯ ವರ್ತತ ಇತಿ ಸ್ವಧಾ ಮಾಯಾ ತಯಾ, ತದ್ ಬ್ರಹ್ಮೈಕಮವಿಭಾಗಾಪನ್ನಮಾಸೀತ್

‡ ಯದಾಽತಮಸ್ತನ್ನದಿವಾ ನರಾತ್ರಿಃ ನಸನ್ನಚಾಸಚ್ಛಿವ ಏವ ಕೇವಲಃ |
ತದಕ್ಷರಂ ತತ್‌ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ ಪ್ರಸೃತಾಪುರಾಣೀ ||

ಈ ಮಂತ್ರದ ವಿಜ್ಞಾನ ಭಗವತ್‌ಕೃತ ವಿವರಣದಲ್ಲಿ "ನಾಸ ಸೀನ್ನೋಸದಾಸೀತ್ ತಮ ಆಸೀದಿತಿ ಶ್ರುತ್ಯಂತರೇಣ" ಎಂದು ಶ್ವೇತಾಶ್ವತರ ಮಂತ್ರವಿದಕ್ಕೆ ಆಧಾರವು ನಾಸದೀಯ ಸೂಕ್ತವೇ ದನ್ನು ಸ್ಪಷ್ಟಮಾಡಿದೆ. ನಾಸದೀಯ ಸೂಕ್ತವು ಮುಂದುವರಿದು ಬ್ರಹ್ಮವು ಇಚ್ಛಾಜ್ಞಾನಾದಿಶಕ್ತಿವಿಶಿಷ್ಟವಾಗಿ ಜಗತ್ಕಾರಣವಾಗುವು ಹೇಳಿದೆ. ಅದರಲ್ಲಿ "ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ಪ್ರಥಮ ಯದಾಸೀತ್" ಎಂದು ಹೇಳಿರುವುದರಲ್ಲಿ ಇಚ್ಛಾಶಕ್ತಿ ಆವಿರ್ಭಾವವೂ 'ತಪಸಸ್ತನ್ಮಹಿನಾಽಜಾಯತೈಕಂ' ಎಂದು ಹೇಳಿ ರಲ್ಲಿ ಜ್ಞಾನಶಕ್ತಿಯ ಆವಿರ್ಭಾವವೂ ಹೇಳಲ್ಪಟ್ಟಿವೆ. ಈ ತಪಸ್ಸೆ ಏನೆಂಬುದನ್ನು ಸಾಯಣಭಾಷ್ಯದಲ್ಲಿ ಹೀಗೆ ಸ್ಪಷ್ಟಮಾಡಿದೆ–ತಪಸಃ ಸ್ರ ಪರ್ಯಾಲೋಚನ ರೂಪತ್ಸಂ ಚಾನ್ಯತ್ರಾಮ್ನಾಯತೇ ಯಃಸರ್ವ ಸ್ಸರ್ವವಿದ್ಯಸ್ಯ ಜ್ಞಾನಮಯಂ ತಪಃ.—'ಮುಂಡಕೋಪನಿ ೧-೧-೯' ಮುಂಡಕೋಪನಿಷತ್ತಾದರೂ ತಪಸ್ಸಿನಿಂದಲೇ ಜಗದುತ್ಪತ್ತಿ ಪರಬ್ರಹ್ಮದಿಂದಾದುದನ್ನು ಹೇಳಿದೆ—ತಪಸಾ ಚೀಯತೇ ಬ್ರ ತತೋಽನ್ನ ಮಭಿಜಾಯತೇ ಎಂಬ ಮುಂಡಕೋಪನಿಷತ್ತಿನ ಮಂತ್ರ ವಿದರಶಾಂಕರ ಭಾಷ್ಯದಲ್ಲಿ, ಬ್ರಹ್ಮವು ತಪಸ್ಸಿನಿಂದ ಸೃಷ್ಟ್ಯುನ್ಮುಖವಾಗು ಎಂದರೆ, ಬ್ರಹ್ಮವು "ಜ್ಞಾನಕ್ರಿಯಾಶಕ್ತ್ಯಧಿಷ್ಠಿತ" ವಾಗುವುದೆಂ ಅಭಿಪ್ರಾಯವೆಂದು ಹೇಳಿದೆ. ಇದರ ಅರ್ಥವನ್ನು ಆನಂದಗಿರಿಯು ಜ್ಞಾ ಶಕ್ತಿಭಿಃ ಕ್ರಿಯಾಶಕ್ತಿಭಿಶ್ಚಾಧಿಷ್ಠಿತಂ ವಿಶಿಷ್ಟಂ" ಎಂದು ಹೇಳುವುದ ಜ್ಞಾನಕ್ರಿಯಾಶಕ್ತಿ ವಿಶಿಷ್ಟವಾಗಿ ಪರಶಿವ ಬ್ರಹ್ಮವು ಸೃಷ್ಟಿಕಾರ್ಯೋ ವಾಗುವುದೆಂಬುದನ್ನು ಸ್ಪಷ್ಟಮಾಡಿದಾನೆ. ಹೀಗೆ ಋಗ್ವೇದದ ಕಾಲದಿಂ ಶಕ್ತಿವಿಶಿಷ್ಟ ಶಿವನೇ ಜಗತ್ಕಾರಣನೆಂಬುದು ನಿರ್ಧಾರವಾದ ಮಾತು.

## ಶಿವಾದ್ವೈತವೋ ಶಕ್ತಿವಿಶಿಷ್ಟಾದ್ವೈತವೋ ?

ವೀರಶೈವರ ಆಧಾರ ಗ್ರಂಥಗಳಲ್ಲಿ ವೀರಶೈವ ಸಿದ್ಧಾಂತವನ್ನು 'ಶಿ ದ್ವೈತ' ವೆಂದೇ ಕರೆಯಲಾಗಿದೆ. ಇತ್ತೀಚೆಗೆ ಶಕ್ತಿ ವಿಶಿಷ್ಟಾದ್ವೈತ

ಪದವು ರೂಢಿಗೆ ಬಂದಿದ್ದರೂ, ವೀರಶೈವ ಸಿದ್ಧಾಂತವನ್ನು 'ಶಕ್ತಿವಿಶಿಷ್ಟಾದ್ವೈತ'ವೆಂಬ ಪದದಿಂದ ಯಾವ ಆಧಾರಗ್ರಂಥದಲ್ಲಿಯೂ ಕರೆದಿಲ್ಲ. ಏಕೆಂದರೆ ಎರಡು ಭಿನ್ನವಾದ ವಸ್ತುಗಳು ಸೇರಿದರೆ ವಿಶಿಷ್ಟಪದವು ಸಾರ್ಥಕವಾಗುವುದು. ದಂಡವಿಶಿಷ್ಟಪುರುಷನನ್ನು ದಂಡಿ ಎನ್ನುವೆವು. ಶ್ರೀ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ವಿಶಿಷ್ಟಾದ್ವೈತ ಪದವನ್ನು ಉಪಯೋಗಿಸಿರುವುದರಲ್ಲಿ ಅರ್ಥವಿದೆ. ವೇದಾಂತ ದೀಪದಲ್ಲಿ ಹೇಳಿದಂತೆ **ಅಚಿದ್ವಸ್ತುನಸ್ಸ್ವರೂಪತಸ್ಸ್ವಭಾವತಶ್ಚಾತ್ಯಂತ ವಿಲಕ್ಷಣಸ್ತದಾತ್ಮಭೂತಶ್ಚೇತನಃ ಪ್ರತ್ಯಗಾತ್ಮಾ; ತಸ್ಮಾತ್ . . . ನಿಯಂತೃತಯಾ ಶೇಷಿತಯಾ ಚಾತ್ಯಂತ ವಿಲಕ್ಷಣಃ ಪರಮಾತ್ಮಾ**". ಚಿದಚಿತ್ತುಗಳು ಪರಮಾತ್ಮನಿಗಿಂತ ವಿಲಕ್ಷಣವಾದುವುಗಳು; ಅವುಗಳು, ಅವುಗಳಿಗಿಂತ ಬೇರೆಯಾದ ಪರಮಾತ್ಮನನ್ನು ಶರೀರದಂತೆ ಹೊಂದಿಕೊಂಡಿರುವವು. ಸೃಷ್ಟಿಗೆ ಮೊದಲಾಗಲೀ ಮೋಕ್ಷದಲ್ಲಿಯಾಗಲೀ ಅವು ಪರಮಾತ್ಮನಲ್ಲಿ ಐಕ್ಯವಾಗಿ ಹೋಗುವುದಿಲ್ಲ—ಎಂಬುದು ಮೇಲಿನ ಆಧಾರದ ನಿಲುವು. ಆದರೆ ಸೃಷ್ಟಿಗೆ ಮೊದಲೂ ಮೋಕ್ಷಸ್ಥಿತಿಯಲ್ಲೂ ಸಂಪೂರ್ಣ ಐಕ್ಯವನ್ನು ಹೇಳುವ ವೀರಶೈವ ಸಿದ್ಧಾಂತವನ್ನು ಕುರಿತು ವಿಶಿಷ್ಟಾದ್ವೈತವೆಂದು ಹೇಳುವುದು ಹೊಂದಿಕೆಯಾಗುವುದಿಲ್ಲ; ಏಕೆಂದರೆ ವಿಶಿಷ್ಟವೆಂಬ ಪದದಲ್ಲಿ ದ್ವೈತಭಾವನೆಯು ಇದೆ.

ಪರಶಿವಬ್ರಹ್ಮದಲ್ಲಿ ಶಕ್ತಿಯ ಆವಿರ್ಭಾವವನ್ನು ಹೇಳುವ ಆಗಮಾಧಾರವೊಂದು ಗಮನಾರ್ಹವಾಗಿದೆ.* ಈ ಆಧಾರದಿಂದ ತಿಳಿದುಬರುವಂತೆ ಪರಮ ಕಾರಣನೂ ಪ್ರಶಾಂತನೂ ಆದ ಪರಶಿವಬ್ರಹ್ಮದಿಂದ ಮೊದಲು ಇಚ್ಛಾಶಕ್ತಿಯು ಆವಿರ್ಭಾವವಾಗುವುದು; ಅದರಿಂದ ಜ್ಞಾನಶಕ್ತಿಯು ಆವಿರ್ಭಾವವಾಗುವುದು; ಇದರಿಂದ ಚತುರ್ದಶಭುವನಂಗಳಾಗುವುವು. ಪಿಂಡಾಂಡದಲ್ಲಿಯೂ ಇದೇ ರೀತಿಯಲ್ಲಿ ಕಾರ್ಯವಾಗುವುದು – ಮೊದಲು ಕಾರ್ಯೇಚ್ಛೆ, ಆ ಮೇಲೆ ಅದನ್ನು ಹೇಗೆ ಮಾಡಬೇಕೆಂಬ ಜ್ಞಾನ, ತದನಂತರ

---

* ಅನಾದಿ ನಿಧನಾಚ್ಛಾಂತಾಚ್ಛಿವಾತ್ ಪರಮಕಾರಣಾತ್ ।
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋಜ್ಞಾನಂ ತತೋಕ್ರಿಯಾ ।
ತತ್ರೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ॥

ಕ್ರಿಯೆ ಉಂಟಾಗಿ ಕಾರ್ಯವಾಗುವುದು. ಆದರೆ ಯೋಗದಲ್ಲಿ ಪ್ರ
ಪರಶಿವಬ್ರಹ್ಮದಲ್ಲಿ ಏಕವಾದಾಗ ಇಚ್ಛಾಜ್ಞಾನ ಕ್ರಿಯೆಗಳೇನೂ ಇ
ಪ್ರಶಾಂತಸ್ಥಿತಿಯಿರುವುದು. ಅಲೆಗಳಿಲ್ಲದ ಸಮುದ್ರದಂತೆ ಪ್ರಶಾಂತ
ಪರಶಿವಬ್ರಹ್ಮವು ಸೃಷ್ಟ್ಯುನ್ಮುಖವಾಗದ ಮೊದಲು, ಅದು ಇಚ್ಛಾಜ್ಞಾನಕ್ರಿ
ಶಕ್ತಿಗಳಿಂದ ವಿಶಿಷ್ಟವಾಗಿರುವುದಿಲ್ಲ. ಆಗ ಅದು ಸಚ್ಚಿದಾನಂದಸ್ವ
ವಾಗಿರುವುದು. ಆದರೆ ಸಚ್ಚಿದಾನಂದಗಳು ಪರಶಿವಬ್ರಹ್ಮನಿಗೆ ಆಗಂತುಕ
ಬರದೆ ಅವು ಅವನ ನಿತ್ಯಸ್ವರೂಪವಾಗಿಯೇ ಇರುವುವು; ಅವು ಇ
ಕಾಲವೇ ಇಲ್ಲ. ಪರಶಿವಬ್ರಹ್ಮವನ್ನು ಸಚ್ಚಿದಾನಂದವಿಶಿಷ್ಟವಾದುದ
ಲಾಗುವುದಿಲ್ಲ. ಸಚ್ಚಿದಾನಂದವಾಗಿಲ್ಲದುದು ಸಚ್ಚಿದಾನಂದವುಳ್ಳದಾ
ಆಗ ಅದು ಸಚ್ಚಿದಾನಂದವಿಶಿಷ್ಟವಾಯಿತೆನ್ನಬಹುದು. ಪರಬ್ರಹ್ಮವು ಆ
ದಲ್ಲ. ಜಲವು ದ್ರವತ್ವ ಸ್ವರೂಪವುಳ್ಳದ್ದು; ಜಲವು ದ್ರವತ್ವವಿಶಿಷ್ಟವಾದು
ಲಾಗುವುದಿಲ್ಲ; ಜಲವು ಲವಣ ವಿಶಿಷ್ಟವಾದುದೆನ್ನಬಹುದು. ಧರ್ಮಿ
ಹಿಂದೆ ಇಲ್ಲದಿದ್ದ ಧರ್ಮವು ಸೇರಿದಾಗ ಧರ್ಮಿಯು ಆ ಧರ್ಮದಿಂದ ವಿ
ವಾಯಿತೆನ್ನಬಹುದು. ಮೊದಲು ಇಲ್ಲದಿದ್ದ ಇಚ್ಛಾಜ್ಞಾನ ಕ್ರಿಯಾಶಕ್ತಿ
ಪರಬ್ರಹ್ಮದಲ್ಲಿ ಉದಯವಾಗಲು ಅದು ಇಚ್ಛಾಜ್ಞಾನಕ್ರಿಯಾಶಕ್ತಿವಿ
ವಾಯಿತೆನ್ನಬಹುದು. ಆದರೆ ಪರಬ್ರಹ್ಮವು ಸಚ್ಚಿದಾನಂದ ಸ್ವರೂಪವಾ
ದೆನ್ನಬೇಕು.

ಸ್ವಪ್ರಭಾನಂದ ಶಿವಾಚಾರ್ಯಕೃತ ಶಿವಾದ್ವೈತಮಂಜ
ಕರ್ನಾಟಕ ವ್ಯಾಖ್ಯಾನದಲ್ಲಿ ಪುಟ ೧೦೩೪ರಲ್ಲಿನ ವಾಕ್ಯವೊಂದನ್ನು * ಜ
ವಿವರಿಸಲಾಗಿದೆ: "ಸತ್-ಚಿತ್-ಆನಂದ-ಕಾಮ-ಸಂಕಲ್ಪ-ಇಚ್ಛೆ-ಕ್ರಿಯೆ-
ಗಳಲ್ಲಿ ಮೊದಲನೆಯ ಮೂರಕ್ಕೆ ಪೌರ್ವಾಪರ್ಯ ರೂಪವಾದ ಕ್ರಮವಿ
ನಿತ್ಯತ್ವವೇ ಇರೋಣದರಿಂದ ಈ ಮೂರಕ್ಕೆ ಕ್ಷೋಭೆಯೆಂಬುದು ಸಂಭವಿಸ
ದಿಲ್ಲ. . . . ಈ ಮೂರರೊಳಗೆ ಯಾವುದೊಂದೂ ಬ್ರಹ್ಮಕ್ಕೆ ಆಗಂತುಕವ

* ಚಿದಾನಂದಯೋರ್ನ ಕದಾಚಿದ್ವಿಕ್ಷೋಭಃ, ಅಕ್ರಮಸ್ವಭಾವತ್ವಾತ್,
ಇಚ್ಛಾದಿಶಕ್ತೀನಾಂ ಸಕ್ರಮಾಕ್ರಮತ್ವೇನ ವಿಕ್ಷೋಭಭಾಕ್ತ್ವಾತ್.
(ಶಿವಾದ್ವೈತ ಮಂಜ

ಅನಾದಿ ಕಾಲದಿಂದಲೂ ಅನಂತ ಕಾಲದವರೆಗೂ ಈ ಮೂರೂ ಬ್ರಹ್ಮ ಸ್ವರೂಪಾತ್ಮಕವೇ ಆಗಿ ನಿತ್ಯವಾಗಿಯೂ ಏಕರೂಪವಾಗಿಯೂ ಇರುವುದರಿಂದ ಇವುಗಳಿಗೆ, ಪೂರ್ವೋತ್ತರಭಾವಿತ್ವರೂಪವಾದ ಕ್ರಮವು ಸಂಭವಿಸುವುದಿಲ್ಲ ವಾದ ಪ್ರಯುಕ್ತ ವಿಕ್ಷೋಭವು ಇವುಗಳಿಗೆ ಉಂಟಾಗುವುದಿಲ್ಲ." ಈ ವಿವರಣೆ ಯಿಂದ ಸತ್ ಚಿತ್ ಆನಂದಗಳೆಂಬುವು ಪರಶಿವಬ್ರಹ್ಮದ ನಿತ್ಯಸ್ವರೂಪವೇ ಆದುದರಿಂದ ಅವುಗಳಿಲ್ಲದ ಪರಶಿವಬ್ರಹ್ಮವನ್ನು ಊಹಿಸಲೂ ಆಗುವುದಿಲ್ಲ. ಆದುದರಿಂದ ಪರಶಿವಬ್ರಹ್ಮವನ್ನು ಸಚ್ಚಿದಾನಂದ ಸ್ವರೂಪವಾದುದೆನ್ನ ಬಹುದೇ ಹೊರತು ಸಚ್ಚಿದಾನಂದವಿಶಿಷ್ಟವಾದುದೆನ್ನಲಾಗುವುದಿಲ್ಲ. ದ್ವೈತ ಜಗತ್ತು ಸೃಷ್ಟಿಗೆ ಪ್ರಾರಂಭವಾಗುವಾಗ ಪರಶಿವಬ್ರಹ್ಮವು ಇಚ್ಛಾದಿ ಶಕ್ತಿಗಳಿಂದ ವಿಶಿಷ್ಟವಾಗುವುದಾದರೂ ಆದರ ನಿತ್ಯಸ್ವರೂಪವು ಸಚ್ಚಿದಾನಂದವೇ ಆದುದ ರಿಂದ ಪರಶಿವಬ್ರಹ್ಮದ ಈ ಅಂತಿಮ ಸ್ಥಿತಿಯನ್ನು ಹೇಳುವ ವೀರಶೈವ ಸಿದ್ಧಾಂತವನ್ನು ಶಿವಾದ್ವೈತವೆಂದೇ ಸ್ವಪ್ರಭಾನಂದರು ಕರೆದಿರುವರು. ಶ್ರೀಕರ ಭಾಷ್ಯಕ್ಕೂ ಆಧಾರವಾಗಿರುವ ಸಿದ್ಧಾಂತ ಶಿಖಾಮಣಿಯಲ್ಲಿ ಈ ಸಿದ್ಧಾಂತ ವನ್ನು ಉಪದೇಶಿಸುವ ಆಚಾರ್ಯರೇಣುಕರು '**ಶಿವಾದ್ವೈತ ಸಿದ್ಧಾಂತ ಪರಿಜ್ಞಾನ ಪರಮಾನಂದನೋದಿತಂ**' ಎಂದು ಹೇಳಿರುವುದರಿಂದ ಈ ಸಿದ್ಧಾಂತವನ್ನು ಶಿವಾದ್ವೈತ ಸಿದ್ಧಾಂತವೆಂದೇ ಕರೆದಿದ್ದಾರೆ. ಇನ್ನು ಶ್ರೀಕರ ಭಾಷ್ಯದಲ್ಲಿ "**ಅಸ್ಮಿನ್ನಸ್ಯಚ ತದ್ಯೋಗಂ ಶಾಸ್ತಿ**" ಎಂಬ ಸೂತ್ರವಿಷಯ ವಾಗಿ ಭಾಷ್ಯವನ್ನು ಬರೆಯುತ್ತ ವಿಶಿಷ್ಟಾದ್ವೈತ ಪದವೇ ಪರಸ್ಪರ ವಿರುದ್ಧಾ ರ್ಥವುಳ್ಳ ಪದಗಳನ್ನುಳ್ಳದ್ದರಿಂದ ಉಕ್ತಿವಿರೋಧವಾದುದೆಂದೂ, ಶೂದ್ರ ಬ್ರಾಹ್ಮಣನೆಂಬ ಪದದಂತೆ ವಿದ್ವಾಂಸರಿಂದ ಅಂಗೀಕರಿಸಲ್ಪಡತಕ್ಕದ್ದಲ್ಲವೆಂದೂ "ಶಿವಾದ್ವೈತ"ವೇ ಗ್ರಾಹ್ಯವೆಂದೂ ಹೇಳಿರುವ ಭಾಗವಿದು – **ವಿಶಿಷ್ಟಾ ದ್ವೈತಮಿತ್ಯುಕ್ತಿವಿರೋಧಾತ್, ವಿಶಿಷ್ಟಸ್ಯ ದುರ್ನಿರೂಪ್ಯತ್ವೇನಮಿಥ್ಯಾ ತ್ವಾಚ್ಚ .... ಶಿವಾದ್ವೈತಮೇವಗ್ರಾಹ್ಯಂ .... ಶೂದ್ರಬ್ರಾಹ್ಮಣ ಇತಿವದ್ವಿ ಶಿಷ್ಟಾದ್ವೈತಮಿತಿ ಮತಮವಿದುಷಾಮೇವ ಶೋಭತೇ**"

ಪರಬ್ರಹ್ಮವು ಸೃಷ್ಟಿಗೆ ಮೊದಲೂ ಸೃಷ್ಟಿಯ ಅಂತ್ಯದಲ್ಲಿಯೂ ಸಹ ಆಗಲೂ ಇರುವ ಪ್ರಪಂಚದಿಂದ ಬೇರೆಯಾಗಿರುವುದೆಂಬುದು ಮಾಧ್ವ ಸಿದ್ಧಾಂತವಾದುದರಿಂದ ಆ ಸಿದ್ಧಾಂತವನ್ನು ದ್ವೈತವೆನ್ನುವರು. ಆ ಸ್ಥಿತಿ

ಯಲ್ಲಿ ಪರಬ್ರಹ್ಮವು ಚಿದಚಿತ್ ಪ್ರಪಂಚದಿಂದ ವಿಶಿಷ್ಟವಾಗಿರುವುದಿಲ್ಲವೆಂಬು ಈ ದ್ವೈತಿಗಳ ನಿಲುವು. ರಾಮಾನುಜೀಯ ಸಿದ್ಧಾಂತದಂತೆ ಚಿದಚಿ ಪ್ರಪಂಚಕ್ಕಿಂತ "ಅತ್ಯಂತ ವಿಲಕ್ಷಣಃ ಪರಮಾತ್ಮಾ" ಎಂಬುದೇ ಆದ ರಾಮಾನುಜೀಯರು ಅವರ ಸಿದ್ಧಾಂತವನ್ನು "ದ್ವೈತ"ವೆಂದು ಕರೆಯು ದಿಲ್ಲ. ಅವರ ಸಿದ್ಧಾಂತದಂತೆ ಪರಬ್ರಹ್ಮವು ಸೃಷ್ಟಿಗೆ ಮೊದಲೂ ಸೃಷ್ಟಿ ಅನಂತರವೂ ಸಹಾ ಚಿದಚಿದ್ ವಿಶಿಷ್ಟವಾಗಿರುವುದರಿಂದ ಆ ಸಿದ್ಧಾಂತವ ಅವರು ವಿಶಿಷ್ಟಾದ್ವೈತವೆನ್ನುವರೇ ಹೊರತು ದ್ವೈತವನ್ನು ಒಪ್ಪಿ ಅದನ್ನು ದ್ವೈತವೆನ್ನುವುದಿಲ್ಲ. ವೀರಶೈವರು ಸೃಷ್ಟಿಯಾದಮೇಲೆ ಜೀ ಶಿವರುಗಳಿಗೆ ದ್ವೈತ ಭಾವವನ್ನು ಒಪ್ಪುವರು. ಆದುದರಿಂದ ಈ ಸಿದ್ಧಾಂ ವನ್ನು ದ್ವೈತಾದ್ವೈತವೆಂದು ಕರೆವುದುಂಟು. ಹೀಗೆ ಒಂದು ಸ್ಥಿತಿಯ ದ್ವೈತವನ್ನು ಒಪ್ಪಿದರೂ ಈ ಸಿದ್ಧಾಂತವನ್ನು ದ್ವೈತಸಿದ್ಧಾಂತವೆನ್ನಲಾಗು ದಿಲ್ಲ. ಜಗತ್ತನ್ನು ಸೃಷ್ಟಿಸಿದ ಮೇಲೆ ಅದರಲ್ಲಿ ಪ್ರವೇಶಿಸಿ ಅಂತರ್ಯಾ ಯಾಗಿ ಶಿವನಿರುವನೆಂದು ವೀರಶೈವರು ಹೇಳುವುದರಿಂದ ಶಿವನು ಚಿದಚಿ ವಿಶಿಷ್ಟನೆನ್ನಬಹುದು; ಆದರೆ, ದ್ವೈತವನ್ನು ಒಂದು ಸ್ಥಿತಿಯಲ್ಲಿ ಒಪ್ಪಿದ ಈ ಸಿದ್ಧಾಂತವನ್ನು ದ್ವೈತವೆನ್ನಲು ಹೇಗೆ ಆಗುವುದಿಲ್ಲವೋ ಹಾಗೆ ಇದ ವಿಶಿಷ್ಟಾದ್ವೈತವೆಂದೂ ಹೇಳಲಾಗುವುದಿಲ್ಲ; ಏಕೆಂದರೆ ಅಂತಿಮ ಸ್ಥಿತಿಯ ವೀರಶೈವರ ಹಾಗೂ ಕಾಶ್ಮೀರ ಶೈವರ ಪ್ರಕಾರ ಪರಶಿವಬ್ರಹ್ಮವು ಅದ್ವೈತ ಆದುದರಿಂದ ವೀರಶೈವ ಸಿದ್ಧಾಂತವನ್ನು "ಶಿವಾದ್ವೈತ" ಸಿದ್ಧಾಂತವೆ ವುದೇ ಸೂಕ್ತವು.

ಮೇಲೆ ಹೇಳಿದ ಕಾರಣಗಳನ್ನು ಒಪ್ಪದವರೂ ಸಹ, ಸಿದ್ಧಾಂತಶಿ ಮಣಿ, ಶಿವಾದ್ವೈತಮಂಜರಿ ಮತ್ತು ಶ್ರೀಕರಭಾಷ್ಯದಲ್ಲಿ ಒಪ್ಪಿದ ಶಿವಾದ್ವೈ ಪದವು ಸೂಕ್ತವಾಗಿರುವಂತೆ ಯಾವ ಆಧಾರ ಗ್ರಂಥಗಳಲ್ಲಿಯೂ ದೊರೆಯ "ಶಕ್ತಿವಿಶಿಷ್ಟಾದ್ವೈತ"ವೆಂಬ ಹೆಸರು ಸೂಕ್ತವಲ್ಲವೆನ್ನಬೇಕಾಗುವ ಶಿವನು ಶಕ್ತಿವಿಶಿಷ್ಟನಾಗಿ ಸೃಷ್ಟಿಗೆ ಕಾರಣನಾಗುವನೆಂಬುದು ಸರಿ. ಆದ ಅವನು ಶಕ್ತಿವಿಶಿಷ್ಟನಾಗುವ ಮೊದಲಿನ ಸ್ಥಿತಿ ಶಿವಾದ್ವೈತವಾದುದರಿ ವೀರಶೈವ ಸಿದ್ಧಾಂತವನ್ನು ಶಿವಾದ್ವೈತಸಿದ್ಧಾಂತವೆಂದು ಕರೆಯುವುದೇ ಸ

"**ನೆನಹಿಲ್ಲದ ಘನವನ್ನು ನೆನದ ನೆನಹೇ ಸವಯವವಾಗಿ ಚಿತ್ತೆ**

ಕೊಂಡಿತ್ತು" ಎಂಬ ವಚನೋಕ್ತಿಯಾದರೂ ನೆನಹಿಲ್ಲದ ಘನದ ಅಂತ್ಯದ ಸ್ಥಿತಿಯನ್ನು ಅವಗಾಹನೆಗೆ ತರುತ್ತದೆ.

## ಸೃಷ್ಟಿಯ ಕಲ್ಪನೆ

ಶ್ರೀ ಮನ್ನಿಜಗುಣಶಿವಯೋಗಿಗಳ ಪರಮಾರ್ಥ ಗೀತೆಯಲ್ಲಿ ವಿವರಿಸುವಂತೆ ಶಕ್ತಿವಿಶಿಷ್ಟನಾಗಿ ಶಿವನು ಮಾಡುವ ಸೃಷ್ಟಿಕ್ರಮವು ಮನೋಜ್ಞವಾಗಿದೆ:

ಸಾಕ್ಷಾನ್ನಿರ್ಲಕ್ಷಣವಾಗಿಹ ನೀನು |
ಈಕ್ಷಿಸೆ ನಿರ್ಗುಣವಾಗಿಹ ನೀನು |
ಅಜೆಯಿಂ ನಾನಾಗುಣಮಯ ನೆನಿಸಿ |
ನಿಜದಿಂ ಬಹುಲಕ್ಷಣಯುತನೆನಿಸಿ |
ನಾನಾ ಶಕ್ತಿ ಸಮನ್ವಿತನೆನಿಸಿ |
ನಾನಾ ವಿಧ ಲೀಲಾಸ್ಪದನೆನಿಸಿ
ನಿನ್ನೊಳು ನಾನಾ ವಿಧ ಶಕ್ತಿಗಳು |
ನಿನ್ನೊಡನಗಲದ ಚಿಚ್ಛಕ್ತಿಗಳು |
ಕೆಲವೇ ಬ್ರಹ್ಮಾಂಡಾವಳಿಯಾಗಿ |
ಕೆಲವಿಂತೀ ಭೂತಾತ್ಮಕವಾಗಿ |
ಶರನಿಧಿಯಲ್ಲಿ ಜಲಂಗಳವೆಂತು |
ತೆರೆಯೆನಿಸುತ್ತಾಡುತ್ತಿಹವಂತು |
ಆ ನಿನ್ನಲ್ಲಿಯ ಸಂವಿತ್ತುಗಳು |
ಭಾನುಕಳಾನಿಭ ಚಿಚ್ಛಕ್ತಿಗಳು |
ಸಂಕಲ್ಪಾದಿ ಮುಖತ್ವತೆ ವಿಡಿದು |
ಭೋಂಕನೆ ಕೆಲವೀ ಭ್ರಮುವಂ ಪಡೆದು
ಜೀವಕೆನಿಸಿ ವ್ಯವಹರಿಸುತ್ತಿಹವು |
ದೇವರೆನಿಸಿ ಮಿಕ್ಕಿನಲಿರುತಿಹವು |
ಜೀವರೊಳಾಯಿತು ಭೌತಿಕ ದೇಹ |
ದೇವರೊಳಾಯಿತು ಮಾಯಿಕ ದೇಹ |

ಅವರವರಿಗುಪಾಸ್ಯೋಪಾಸಕರೆಂಬ |
ವಿವರಣೆಯೆನಿಸುವುದು ಮಹಿಮಾಲಂಬ |
ಬ್ರಹ್ಮನೆನಿಸಿ ಲೋಕವ ಸೃಜಿಸುತ್ತ |
ಬ್ರಹ್ಮಾರ್ಧ್ಯಯನಾದಿಯನರುಪುತ್ತ |
ವಿಷ್ಣುವೆನಿಸಿ ಜಗಮಂ ಪಾಲಿಸುತ |
ವೈಷ್ಣವ ಜನರುಗಳಂ ಲಾಲಿಸುತ |
ರುದ್ರನೆನಿಸಿ ಯೋಲೈಸಿಗೊಳುತ್ತ |
ಕ್ಷುದ್ರದಘವನುರೆ ಸಂಹರಿಸುತ್ತ |
ಈಶ್ವರನೆನಿಸಿ ಭಜಿಸಿಕೊಳುತ್ತ |
ಶಾಶ್ವತ ಸೌಖ್ಯಂಗಳನೀವುತ್ತ |
ವಾಣಿಯೆನಿಸಿ ವಾಕ್ಸಿದ್ಧಿಯನಿತ್ತು |
ಮಾಣದೆ ಲಕ್ಷ್ಮಿಯೆನಿಸಿ ಶುಭಮಿತ್ತು |
ಗಿರಿಜೆಯೆನಿಸಿ ಸೌಭಾಗ್ಯವನಿತ್ತು |
ವರದಂಬಿಕೆಯೆನಿಸುತ್ತೊಲಿದಿತ್ತು |
ಯೋಗವನಿತ್ತು ಮನೋನ್ಮನಿಯೆನಿಸಿ |
ಭೋಗವನಿತ್ತಾ ಕುಂಡಲಿಯೆನಿಸಿ |
ಮತ್ತೆಯು ಬಹು ನಾಮಂಗಳವೆರೆಸಿ |
ತತ್ತದಳರೂಪಿನಿಂದವತರಿಸಿ |

ಸೃಷ್ಟಿಯಾದುದನ್ನು ಶ್ರೀಮನ್ನಿಜಗುಣಶಿವಯೋಗಿಗಳು ಸ್ಪಷ್ಟೀಕರಿಸಿದ್ದಾರೆ. ಸೃಷ್ಟ್ಯುನ್ಮುಖವಾಗುವ ಮೊದಲಿನ ಪರಬ್ರಹ್ಮದಸ್ಥಿತಿಯನ್ನು ಅವರು ಚಿತ್ರಿಸುವುದು ಇನ್ನೂ ಮನೋಜ್ಞವಾಗಿದೆ:

"ಅದು ತೆರೆಯಡಗಿದ ಸಾಗರದಂತೆ |
ಅದು ಮೇಘಂ ತೊಲಗಿದ ನಭದಂತೆ |
ಪೂರೆಗಳೆದೆಳೆ ವಾಳೆಯ ಸುಳಿಯಂತೆ |
ಮರುತನಡಗಿದೆಡೆಯಣ ಸೊಡರಂತೆ ||
ಎಲೆಯುದುರಿದ ತರುವಿನ ಪರಿಯಂತೆ |

ನೆಲಸಿದ ಸುಖನಿದ್ರಿತ ನರನಂತೆ |
ಮಂಜುಡೊಲಗಿ ಮಿರುಗುವ ರವಿಯಂತೆ ||
ಮಂಜೀರಾದಿಯಳಿದ ಪೊನ್ನಂತೆ |
ಎಸೆವುದು ಸಚ್ಚಿನ್ಮಾತ್ರವೆ ತಾನಾಗಿ |
ಮಸಗಿಹುದೊಂದರ ಸೋಂಕಿಲ್ಲಾಗಿ | ”

ನಾಸದೀಯ ಸೂಕ್ತದಲ್ಲಿ ಜಗತ್ಕಾರಣವನ್ನು ಉಪನಿಷತ್ತುಗಳಲ್ಲಿ ಬ್ರಹ್ಮವೆಂದು ಕರೆಯುವ ಮೊದಲೇ ‘ ಆಭು ’ ಎಂಬ ಪದದಿಂದ ಅಭಿವ್ಯಕ್ತ ಮಾಡಲಾಯಿತೆಂಮೂ ‘ ಪೊಳ್ಳು ’ ಎಂಬರ್ಥವುಳ್ಳ ‘ ಆಭು ’ ಎಂಬ ಪದವು ವೀರಶೈವರ ಬಯಲು, ನಿರ್ಬಯಲು, ಶೂನ್ಯ ಮೊದಲಾದ ಪಾರಿಭಾಷಿಕ ಶಬ್ದಗಳಂತೆ ಅವ್ಯಕ್ತವಾದುದನ್ನು ಸೂಚಿಸಲು ಉಪಯೋಗಿಸಲ್ಪಟ್ಟದೆಯೆಂದೂ ಹಿಂದೆ ತಿಳಿಸಲಾಯಿತು. ನಾಸದೀಯ ಸೂಕ್ತವನ್ನು ಇಂಗ್ಲಿಷಿಗೆ ಭಾಷಾಂತರಿಸಿದವರು ಆಭು ಎಂಬ ಪದಕ್ಕೆ Void ಎಂದು ಭಾಷಾಂತರಿಸಿರುವುದು ಗಮನಾರ್ಹ. (Hindu scriptures Every Man's Library 944 page 37) ಮುಂದೆ ಉಪನಿಷತ್ತುಗಳಲ್ಲಿ ‘ ಇತಿ ಇತಿ ’ ಎಂಪು ಯಾವ ಲಕ್ಷಣಗಳಿಂದಲೂ ವರ್ಣಿಸಲಾಗದ ಈ ಆಭು (Void) ವನ್ನು ಪರಬ್ರಹ್ಮವೆಂದು ಕರೆದರು. ಅದನ್ನೇ ವೀರಶೈವರು ಪರಶಿವನೆಂದೂ ‘ ಬಯಲು ’ ಅಥವಾ ‘ ಶೂನ್ಯ ’ ಎಂದೂ ಕರೆದರು. ತಾತ್ವಿಕವಾಗಿ ಚರ್ಚಿಸುವಾಗ ‘ ಬಯಲು ’ ಅಥವಾ ‘ ಶೂನ್ಯ ’ ಎಂದು ಕರೆಯುವುದು ಸೂಕ್ತವಾಗಿದ್ದಂತೆ ಧ್ಯಾನ ದೃಷ್ಟಿಯಿಂದ ಪರಶಿವನೆಂಬ ಪದವು ಹೆಚ್ಚು ಸಮರ್ಪಕವಾಗಿದೆ. ಆದರೆ ಈ ಪದಗಳು ಉಪನಿಷತ್ತಿನ ಪರಬ್ರಹ್ಮವನ್ನೇ ನಿರ್ದೇಶಿಸತಕ್ಕವು. ಸಿದ್ಧಾಂತ ಶಿಖಾಮಣಿಯಲ್ಲಿ * ವೇದಾಂತಿಗಳು ಬ್ರಹ್ಮನೆನ್ನುವ ಜಗತ್ಕಾರಣವಾದ ಪರಪರಶಿವನನ್ನು ನಮಸ್ಕರಿಸುವುದಾಗಿ ಹೇಳಿರುವುದು ಮೇಲಿನ ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಪರಬ್ರಹ್ಮವನ್ನು ಶರಣರು ಪರಶಿವನೆಂದೇ ಕರೆದರೇಕೆ ? ಅವರು ಆದನ್ನು ವಿಷ್ಣುವೆಂದೋ ನಾರಾಯಣನೆಂದೋ ಏಕೆ ಕರೆಯಲಿಲ್ಲ ? ಈ ತೆರದ ಪ್ರಶ್ನೆಗಳು ಹುಟ್ಟುವುವು. ಪರಬ್ರಹ್ಮವನ್ನು ಪರಶಿವ, ಲಿಂಗ, ಮೊದಲಾದ ಪದಗಳಿಂದ ಕರೆಯುವುದರಿಂದ ಶೈವ, ವೈಷ್ಣವ ಎಂಬ

* ಪ್ರಥಮ ಪಂಚ್ಛೇದ ಶ್ಲೋಕ ೨

ಪಂಗಡಗಳಲ್ಲಿ ಒಂದು ಪಕ್ಷವನ್ನು ಹಿಡಿದಂತೆ ತೋರುವುದು ಸ್ವಾ
ಆದರೆ ಇದು ಆ ರೀತಿಯಾದುದಲ್ಲವೆಂದು ಹೇಳುವುದು ಆವಶ್ಯಕ. ಪ
ವನ್ನು ಉಪನಿಷತ್ತುಗಳಲ್ಲಿ ಮೊದಲು ಮೊದಲು ಶಿವ, ವಿಷ್ಣು, ಮೊ
ಪದಗಳಿಂದ ಕರೆದುದು ಮಂಗಳಕರ ಮತ್ತು ಎಲ್ಲೆಲ್ಲೂ ಹರಡಿ
ಎಂಬ ದೃಷ್ಟಿಯಿಂದಲೇ ; ಎಲ್ಲೆಲ್ಲೂ ಹರಡಿರುವುದೂ ಮಂಗಳಕರವೂ
ಒಂದೇತಾನೆ. ಇತ್ತೀಚಿನ ಉಪನಿಷತ್ತುಗಳಲ್ಲಿ ಹರಿಹರ ತಾರತಮ್ಯವ
ಬರುವುದೇ ಹೊರತು ಹಳೆಯ ಉಪನಿಷತ್ತುಗಳಲ್ಲಿ ಈ ತಾರತಮ್ಯವ
ಬರುವುದಿಲ್ಲ. ನಾರಾಯಣ, ವಿಷ್ಣು, ಹರಿ, ಹರ ಶಿವ ಮೊದಲಾದ
ಪದಗಳು ಎಲ್ಲಕ್ಕೂ ಮೀರಿದ ಪರಾತ್ಪರ ವಿಷಯದಲ್ಲಿ ಉಪಯೋಗ
ಧ್ದುವಾದುದರಿಂದ, **ನಾರಾಯಣ ಪರಂಬ್ರಹ್ಮ** ಎಂಬುವರ ಅರ್ಥ
ಹಿಗ್ಗಿಸಲು '**ನಾರಾಯಣಾತ್ ಪರಂಬ್ರಹ್ಮ**' ಎಂದು ಶೈವರು
ಅರ್ಥಮಾಡಬೇಕಾಗುತ್ತಿರಲಿಲ್ಲ. ಹಾಗೆಯೇ ಮುಂದೆ ತೋ
ಹರ, ಶಿವ, ಈಶ ಮೊದಲಾದ ಪದಗಳಿಗೆ ವೈಷ್ಣವರು ಅರ್ಥವನ್ನು
ಹಿಗ್ಗಿಸಿ ವಿಷ್ಣುವೆಂದು ಅರ್ಥಮಾಡುವ ಆವಶ್ಯಕತೆಯಾದರೂ ಇರುತ್ತಿ
ಆದರೆ ಬಹುಮಟ್ಟಿಗೆ ಯಜ್ಞವಿರೋಧಿಗಳಾದ ಶೈವರ ಗುಂಪಿಗೂ ಯ
ಮಾನಿಸುವ ವೈಷ್ಣವರ ಗುಂಪಿಗೂ ವೈಮನಸ್ಸು ಬೆಳೆದುದು
'ಕ್ರತುಧ್ವಂಸಿ' ಯೆನ್ನುವಂತೆಯೂ, ವಿಷ್ಣುವಿನ ವಿಷಯದಲ್ಲಿ ಯ
ವೈ ವಿಷ್ಣುಃ ಎನ್ನುವಂತೆಯೂ :ಮೂಡಿತು. ಆದರೆ ಈ ವೈಮ
ಕಳೆಯಲು ಪ್ರಯತ್ನಗಳಾಗದೆ ಹೋಗಲಿಲ್ಲ. ಹರಿಹರನೊಬ್ಬನೆ
ಮಾಡಿದ ವಿಗ್ರಹಗಳು ದೇವಸ್ಥಾನಗಳಲ್ಲಿ ಪೂಜೆಗೊಂಡವು. ಅ
ರೆಲ್ಲರಿಗೂ ಕರ್ತನಾದ ಪರಶಿವಬ್ರಹ್ಮದ ಕಲ್ಪನೆಯು ಪ್ರಚಲಿತ
ಇದೇ ವೀರಶೈವರ ನಿಲುವು :

> " ಶೂನ್ಯ ಹೃದಯ ನಿಶ್ಶೂನ್ಯವಿಲ್ಲದಂದು, ಬ್ರಹ್ಮವಿಷ್ಣು
> ಮಹೇಶ್ವರರಿಲ್ಲದಂದು ಹದಿನಾಲ್ಕುಭುವನ ದಿಗ್ವಳಯ
> ವಿಲ್ಲದಂದು, ಕೂಡಲಸಂಗನೆಂಬ ಹೆಸರು ಮುನ್ನಿಲ್ಲದಂದು."

ಇಂತಹ ಅನೇಕ ವಚನಗಳಿಂದ ವೀರಶೈವರ ಕಲ್ಪನೆಯಲ್ಲಿ ಪ
ವೆಂದರೆ ಋಗ್ವೇದದ ತ್ರ್ಯಂಬಕ ಎಂದರೆ ಸಾಯಣ ಭಾಷ್ಯದಲ್ಲಿ

'ತ್ರಯಾಣಾಂ ಬ್ರಹ್ಮವಿಷ್ಣು ರುದ್ರಾಣಾಂ ಅಂಬಕಂ ಪಿತರಂ' ಎಂಬುವರಲ್ಲಿ ಉಕ್ತವಾದ ದೈವವೆನ್ನಬಹುದು. ಇಂತಹ ಅನೇಕ ವಚನಗಳು ನಾಸದೀಯ ಸೂಕ್ತವನ್ನು ವಿಶದೀಕರಿಸುವುದರಲ್ಲಿ ಉಕ್ತವಾಗಿರುವುದರಿಂದ ಮತ್ತೆ ಇಲ್ಲಿ ಉಲ್ಲೇಖಿಸುವ ಅವಶ್ಯವಿಲ್ಲ.

ವೀರಶೈವರ ಸಿದ್ಧಾಂತದಂತೆ ನಿರ್ವಿಶೇಷ ಪರಬ್ರಹ್ಮವೇ ಜಗತ್ಕಾರಣವಾದುದರಿಂದ ಆ ಪರಬ್ರಹ್ಮವನ್ನು ಸೂಚಿಸಲು ಅವರು ಆರಿಸುವ ಪದವು ಆ ಸಿದ್ಧಾಂತಕ್ಕೆ ಅನುಸಾರವಾದುದಾಗಿರಬೇಕು. ಮಾಂಡೂಕ್ಯದಲ್ಲಿ ಅಂತಹ ನಿರ್ವಿಶೇಷ ಪರಬ್ರಹ್ಮವನ್ನು ವಿವರಿಸುವಾಗ ಶಿವನೆಂಬ ಪದವನ್ನು ಉಪಯೋಗಿಸಿದೆಯಷ್ಟೆ. ಇದು ಆ ಪದದ ಸೂಕ್ತತೆಯನ್ನು ಸೂಚಿಸಿರುವುದು ಒಂದು ಕಡೆ; ವಿಷ್ಣುವನ್ನೇ ಜಗತ್ಕಾರಣವಾಗಿ ಬೋಧಿಸುವ ಶ್ರೀ ರಾಮಾನುಜ ಮತ್ತು ಶ್ರೀಮಧ್ವ ಆಚಾರ್ಯರು ವಿಷ್ಣುವನ್ನು ಸಗುಣಮೂರ್ತಿಯನ್ನಾಗಿ ಸಿದ್ಧಾಂತ ಮಾಡಿರುವುದು ಮತ್ತೊಂದು ಕಡೆ; ಹೀಗೆ ಯಾವ ರೀತಿಯಲ್ಲಿಯೂ ವಿಷ್ಣು ಪದವು ವಚನಕಾರರ ನಿರ್ವಿಶೇಷ ಪರಬ್ರಹ್ಮದ ಕಲ್ಪನೆಗೆ ಸರಿಹೊಂದುವುದಾಗಿರಲಿಲ್ಲ. ಆದುದರಿಂದ ವಿಚಾರಪರರಾದ ವಚನಕಾರರಿಗೆ ಶಿವ ವಿಷ್ಣು ಪದಗಳಲ್ಲಿ ಒಂದನ್ನು ಆರಿಸುವ ಪ್ರಸಂಗ ಒದಗಿದ್ದರೆ ವಿಷ್ಣು ಎಂಬ ಪದವು ಅವರ ಸಿದ್ಧಾಂತಕ್ಕೆ ಅನುಕೂಲವಾಗಿರಲಿಲ್ಲವೆಂಬುದು ಸ್ಪಷ್ಟ. ವಾಸ್ತವವಾಗಿ ಪರಶಿವನೇ ಪರಬ್ರಹ್ಮವೆಂದು ಪಾರಂಪರ್ಯವಾಗಿ ನಂಬಿಕೊಂಡು ಬಂದಿದ್ದ ಶರಣರಿಗೆ ಶಿವ ಮತ್ತು ವಿಷ್ಣುಪದಗಳಲ್ಲಿ ಒಂದು ಪದವನ್ನು ಆರಿಸುವ ಪ್ರಸಂಗವೇ ಬರಲಿಲ್ಲ. ವೈಷ್ಣವ ದ್ವೇಷದಿಂದ ಪರಬ್ರಹ್ಮನನ್ನು ಶಿವನೆಂದು ಕರೆದರೆಂಬುದು ಸರಿಯಲ್ಲ. ಆದರೆ ಪರಬ್ರಹ್ಮವನ್ನು ಶಿವನೆಂದು ಕರೆದ ಶರಣರಿಗೆ ಏಕದೇವೋಪಾಸನೆಯು ಅವರ ಸಿದ್ಧಾಂತವಾದುದರಿಂದ ವಿಷ್ಣುವನ್ನೂ ಶಿವನೊಡನೆ ಪೂಜಿಸುವುದು ಸಾಧ್ಯವಾಗಲಿಲ್ಲ. ಆದರೆ ಪದಗಳಲ್ಲೇನಿದೆ. ಸರ್ವೇಶನೊಬ್ಬನನ್ನೇ ವೈಷ್ಣವರು ವಿಷ್ಣುವೆಂದೂ ಶೈವರು ಶಿವನೆಂದೂ ಕರೆವುದರಿಂದ ಇಬ್ಬರ ಪ್ರಾರ್ಥನೆಯನ್ನು ಲಾಲಿಸುವ ಆ ಸರ್ವೇಶನು ಒಬ್ಬನೇ. ನುಪ್ಪಿನ ಷಡಕ್ಷರಿಯು ಹೇಳಿದಂತೆ,

" ಅವರವರದರುಶನಕೆ ಅವರವರ ವೇಷದಲಿ ।
ಅವರವರಿಗೆಲ್ಲ ಗುರುನೀನೊಬ್ಬನೇ ॥

೬

ಅವರವರ ಭಾವಕ್ಕೆ ಅವರವರ ಪೂಜೆಗಂ
ಅವರವರಿಗೆಲ್ಲ ದೇವನೀನೊಬ್ಬನೇ ॥
ಹೋರಾಟವಿಕ್ಕಿಸಲು ಬೇಕಾದೆಯಲ್ಲದೆ ॥
ಬೇರುಂಟೆ ಜಗದೊಳಗೆ ಎಲೆ ದೇವನೆ ॥

ಎಂಬಂತೆ ದೇವರು ಒಬ್ಬನೇ ಆಗಿದ್ದಾನೆ.

ಆದರೆ ಇಷ್ಟನ್ನು ಹೇಳಬಹುದು. ಶಿವ ವಿಷ್ಣು ಇವರ ವಿ… ಬೆಳೆದು ಬಂದ ಕಲ್ಪನೆಯ ದೃಷ್ಟಿಯಿಂದ ಪರಬ್ರಹ್ಮವು ಸಗುಣವೇ … ನಿರ್ಗುಣವಲ್ಲವೆಂಬ ಕಲ್ಪನೆಯಿರುವ ವೈಷ್ಣವ ಏಕದೇವೋಪಾಸಕ… ಬ್ರಹ್ಮವನ್ನು ವಿಷ್ಣುವೆಂದು ಕರೆವುದು ಸೂಕ್ತವೇ ಸರಿ. ಹಾಗೆಯೇ ಪ… ನಿರ್ಗುಣವೇ ಆದರೂ, ಅದು ಭಕ್ತಾನುಗ್ರಹಕ್ಕಾಗಿ ಸಗುಣವೂ ಆಗುವ… ಶೈವ ಏಕದೇವೋಪಾಸಕರಿಗೆ ಪರಬ್ರಹ್ಮವನ್ನು ಶಿವನೆಂದು ಕರೆವುದು… ಸಮಂಜಸವೇ ಆಗಿದೆ.

ವೀರಶೈವಕ್ಕೆ ಮುಖ್ಯ ಆಧಾರಗ್ರಂಥವಾದ ಸಿದ್ಧಾಂತ ಶಿಖಾಮ… '**ಭೋಕ್ತಾಭೋಜ್ಯಂ ಪ್ರೇರಯಿತಾ ವಸ್ತುತ್ರಯಮಿದಂ** … ಎಂದು ಹೇಳಿ ಒಂದೆಯಾದ ಪರಶಿವಬ್ರಹ್ಮವು ಭೋಕ್ತೃಭೋಜ್ಯಪ್ರೇರ… ತ್ರಿವಿಧವಾಗಿದೆಯೆಂಬ ವೀರಶೈವರ ಮುಖ್ಯ ಸಿದ್ಧಾಂತವನ್ನು ಹೇ… '**ಭೋಕ್ತಾಭೋಜ್ಯಂ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋ… ತ್ರಿವಿಧಂ ಬ್ರಹ್ಮಮೇತತ್**' ಎಂಬ ಶ್ವೇತಾಶ್ವತರಶ್ರುತಿಯೇ ಇದಕ್ಕೆ… ಆಧಾರ. ನಾಸದೀಯ ಸೂಕ್ತದಲ್ಲಿಯೂ ಈ ಕಲ್ಪನೆಯಿದೆ ಎಂಬುದನ್ನು ಸಾಯಣ ಭಾಷ್ಯದಿಂದ ಮುಂದೆ ತೋರಿಸಲಾಗುವುದು. 'ಯದಾ… ಎಂದು ಮೊದಲಾಗುವ ಶ್ವೇತಾಶ್ವತರ ಶ್ರುತಿಯು ನಾಸದೀಯ ಸೂ… ಹಿನ್ನೆಲೆಯನ್ನುಳ್ಳುದೆಂದು ಅದರ ವಿಜ್ಞಾನ ಭಗವತ್‌ಕೃತ ವಿವರ… ತಿಳಿದು ಬರುವುದು. ಈ ಮಂತ್ರವು ನಾಸದೀಯ ಸೂಕ್ತದಲ್ಲಿ ಹೇ… ಸದಸತ್ತುಗಳಿಗೆ ಮೀರಿದ ತತ್ತ್ವವು ಶಿವನೇ ಎಂಬುದನ್ನು ಪರಿಷ್ಕ… ದೆಂಬುದನ್ನು ಮುಂದೆ ತಿಳಿಸಲಾಗುವುದು. ವೀರಶೈವರಿಗೆ ಮುಖ್ಯ… ವಾದ ನಾಸದೀಯ ಸೂಕ್ತ ಮತ್ತು ಶ್ವೇತಾಶ್ವತರ ಶ್ರುತಿಗಳ ಪ್ರಕಾ… ತತ್ತ್ವವು ಶಿವನೆಂದು ಕರೆಯಲ್ಪಟ್ಟಿರುವುದರಿಂದ ವೀರಶೈವರು ಪರಬ್ರ…

ತರಶಿವಬ್ರಹ್ಮವೆಂದೇ ಕರೆಯುತ್ತಾರೆ. ಶ್ವೇತಾಶ್ವತರ ಉಪನಿಷತ್ತು ರಚಿತ ಾದಾಗ ವಿಷ್ಣುವು ಪರಬ್ರಹ್ಮವೆಂಬ ಕಲ್ಪನೆಯೇ ಇರಲಿಲ್ಲವೆಂಬುದು ಡಾ|| ನಂಡಾರ್ಕರರ 'ವೈಷ್ಣವಿಸಂ ಅಂಡ್ ಶೈವಿಸಂ' ಗ್ರಂಥದಿಂದ ತಿಳಿದು ರುವುದು.*

## ಪರಶಿವಲಿಂಗದ ಕಲ್ಪನೆಯಲ್ಲಿ ಅಶ್ಲೀಲ ಭಾವನೆ ಇಲ್ಲ

ಇಂದ್ರನೇ ದೇವ ದೇವೋತ್ತಮನೆಂದು ಅವನನ್ನು ಯಜ್ಞಯಾಗ ಗಳಿಂದ ಆರ್ಯರು ತೃಪ್ತಿಪಡಿಸುತ್ತಿದ್ದ ಕಾಲದಲ್ಲಿ ಯಜ್ಞವಿರೋಧಿಗಳಾದ ಶೈವರನ್ನು 'ಶಿಶ್ನದೇವಾಃ' ಎಂದು ಕರೆದರು. ಆದರೆ ಮುಂದೆ ತ್ರ್ಯಂಬಕ ವನ ಕಲ್ಪನೆಯು ಬೆಳೆದು ಶಿವನು ಸರ್ವೋತ್ಕೃಷ್ಟನೆಂಬುದು ಪ್ರಚಲಿತವಾದ ಮೇಲೆ, ಶಿಶ್ನದೇವಾಃ ಎಂದರೆ ಅಬ್ರಹ್ಮಚಾರಿಗಳೆಂದು ನಿರುಕ್ತವೇ ಮೊದಲಾದವು ಗಳಲ್ಲಿ ತೇಲಿಸಿ ಅರ್ಥಮಾಡಬೇಕಾಯಿತು. ಆದರೆ ಹಿಂದಿನ ಶೈವ ವಿರೋಧಿ ಗಳು ಶಿವಲಿಂಗ ವಿಷಯದಲ್ಲಿ ಕಲ್ಪಿಸಿದ ಅಶ್ಲೀಲಭಾವನೆ ಅನೇಕ ಪುರಾಣ ಕಥೆಗಳಲ್ಲಿ ಉಳಿದುಬಂದಿತು. ವೀರಶೈವರಲ್ಲಿ ಅಶ್ಲೀಲ ಕಲ್ಪನೆಯ ಸುಳಿವೇ ಇಲ್ಲವೆಂದೂ ಕ್ಯಾಥೊಲಿಕರು ಸಿಲುಬೆಯನ್ನು ಧರಿಸುವಂತೆ, ಜಂಗಮರು

---

"The attributes of the supreme soul are often given in very general terms and he is referd to, by the non-sectarian general name Deva but as often, that Deva is identified with Rudra, Siva, Ishana and Mahadeva and his powers are spoken of as Isanis; but there is no indication what ever that these names have been given for the purpose of raising Rudra-Siva to the supreme god head to the exclusion of another god." (P. 110)

"From all that we have brought forward from the post-samhita literature, it will appear that Rudra - Siva was a deity whose worship was common to all the Aryas and was not at first a sectarian god. As above remarked he was in charge of the field before the Vaishnava or Vasudevic deities came in to contest his supremacy." (P. 115)

ಲಿಂಗವನ್ನು ಭಕ್ತಿಯಿಂದ ಧರಿಸುವರೆಂದೂ ಸಿ. ಪಿ. ಬ್ರೌನರು, ' ಜರ್ನಲ್ ಆಫ್ ಲಿಟರೇಚರ್ ಅಂಡ್ ಸೈನ್ಸ್'ನಲ್ಲಿ ಬರೆದಿದ್ದಾರೆ*

ಲಿಂಗದ ಕಲ್ಪನೆಯಲ್ಲಿ ವೀರಶೈವರಲ್ಲಿ ಅಶ್ಲೀಲ ಭಾವನೆಯು ... ಇಲ್ಲವೆಂದು ಹೇಳಬೇಕಾದುದೇ ಇಲ್ಲ. ಈ ತೆರೆದ ಭಾವನೆಯು ... ಸ್ಥಾವರಲಿಂಗಗಳ ಆಕಾರವನ್ನು ನೋಡಿದ ಐರೋಪ್ಯರಲ್ಲಿ ... ಉಳಿದ ಲಿಂಗಗಳ ವಿಷಯವಾಗಿ ಹಾಗೆ ಹೇಳುವಂತಿಲ್ಲ. ವೀರಶೈವರು ... ಲಿಂಗಗಳನ್ನಾಗಲಿ, ಗುಡಿಗಳಲ್ಲಿರುವ ವಿಗ್ರಹಗಳನ್ನಾಗಲಿ, ಅವು ... ಗಳಾದರೂ ಪೂಜಿಸುವುದು ಅವರ ಧರ್ಮಕ್ಕೆ ವಿರುದ್ಧವಾಗಿದೆ ... ಅಂತಹ ಒಂದೆರಡು ಲಿಂಗಗಳ ಆಕಾರದಿಂದ ಬರುವ ಸಂಶಯದಿಂ... ಶೈವರ ನಿಲುವನ್ನು ಅಳೆಯಬಾರದು. ಅವರ ನಿಲುವನ್ನು ತಿಳಿಯ... ಆ ಮತದವರ ಗ್ರಂಥಗಳಲ್ಲಿ ಆ ವಿಷಯವಾಗಿ ಏನು ಹೇಳಿದೆಯೆಂ... ತಿಳಿಯಬೇಕು. ವೀರಶೈವರ ಗ್ರಂಥಗಳಲ್ಲಿ ಲಿಂಗವಿಷಯದಲ್ಲಿ ಅ... ಭಾವನೆಯನ್ನು ಕೆಲವುವಚನಗಳಿಂದ ತಿಳಿಯಬಹುದು.

"ಲಿಂಗವೆಂಬುದು ಪರಶಕ್ತಿಯುಕ್ತ; ಲಿಂಗವೆಂಬುದು ಪರಶಿವನ... ದೇಹ; ಲಿಂಗವೆಂಬುದು ಪರಶಿವನ ಘನತೇಜ; ಲಿಂಗವೆಂಬುದು ... ಶಿವನ ನಿರತಿಶಯಾನಂದ ಸುಖ; ಲಿಂಗವೆಂಬುದು ಪರಶಿವನ ಪ... ಜ್ಞಾನ; ಲಿಂಗವೆಂಬುದು ಪರಶಿವನು ತಾನು; ಲಿಂಗವೆಂಬುದು ಅ... ಪಂಚ ಸಂಜ್ಞೆ ತಾನು; ಲಿಂಗವೆಂಬುದು ಹರಿಹರಬ್ರಹ್ಮರ ನಡುವೆ ನೆ... ಜ್ಯೋತಿರ್ಮಯ ಲಿಂಗ. ಶ್ರುತಿಃ—'ಆಲಯಂ ಸರ್ವ ಭೂತಾ... ಲಯಾನಾಂ ಲಿಂಗ ಮುಚ್ಯತೇ' ಎಂದುದಾಗಿ ಇದು ಲಿಂಗದ ವ... ಉರಿಲಿಂಗಪೆದ್ದಿ ವಿಶ್ವೇಶ್ವರ ಲಿಂಗದೊಳಿಂತು ತಿಳಿಯಬಲ್ಲಾ... ಬಲ್ಲವನು.

---

* "They (obscenities) are wholly unknown to the Jangam... look upon the idol just as the catholics do upon a re... with deep veneration—Hanging a golden stamp abo... necks put on with holy prayers.

ಈ ವಚನಕ್ಕೆ ಲಿಂಗಲೀಲಾವಿಲಾಸದಲ್ಲಿ ಬರೆದಿರುವ ಟೀಕು ಈ ವಚನದ ರ್ಥವನ್ನು ವಿಶದೀಕರಿಸುತ್ತದೆ.*

ಹೀಗೆ ವಚನಗಳಲ್ಲಿ ಲಿಂಗವು ಪರಬ್ರಹ್ಮವೆಂಬ ಭಾವನೆಯಿರುವುದರಿಂದ ಶ್ಲೀಲ ಭಾವನೆಯ ಸೋಂಕಿನ ಮಾತೆಲ್ಲಿಬಂದಿತು? ಸಿದ್ಧಾಂತ ಶಿಖಾಮಣಿ ಯಲ್ಲಿ "ಪರಂಬ್ರಹ್ಮ ಮಹಾಲಿಂಗಂ" ಎಂದೂ "ಲಿಂಗಮಿತಿಖ್ಯಾತಂ ಸತ್ತಾನಂದ ಚಿದಾತ್ಮಕಂ ಬೃಹತ್ವಾದ್ಬೃಂಹಣತ್ವಾಚ್ಚ ಬ್ರಹ್ಮಶಬ್ದಾಭಿ ಧೇಯಕಂ" ಎಂದೂ ಹೇಳಿರುವುದು ವೀರಶೈವ ಸಿದ್ಧಾಂತದಲ್ಲಿ ಲಿಂಗ ವೆಂದರೆ ಸಚ್ಚಿದಾನಂದಾತ್ಮಕ ಪರಬ್ರಹ್ಮವೇ ಎಂಬುದನ್ನು ಸ್ಪಷ್ಟಮಾಡುತ್ತದೆ. ಲಿಂಗವು ಉಪನಿಷದ್ಬ್ರಹ್ಮದ ಕುರುಹು ಮಾತ್ರವೆಂಬುದು ಅವರ ವಚನ ಗಳಿಂದ ತಿಳಿಯುವುದು:

"'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದೆನಿಸುವ ಲಿಂಗವು, 'ಅತ್ಯತಿಷ್ಠದ್ದಶಾಂಗುಲಂ' ಎಂದೆನಿಸುವ ಲಿಂಗವು, 'ಚಕಿತಮಭಿದತ್ತೇ' ಎಂದೆನಿಸುವ ಲಿಂಗವು, 'ಅಣೋರಣೀ ಯಾನ್ ಮಹತೋಮಹೀಯಾನ್' ಎಂದೆನಿಸುವ ಲಿಂಗವು, 'ಆಯಂ

---

* "ನಿಷ್ಕಲ ಪರಶಿವಲಿಂಗವು ಸ್ವಲೀಲೆಯಿಂದ ತನ್ನ ನಿಜಾಂಗವನು ತನ್ನ ಮಹಾ ಪ್ರಕಾಶವನು ತನ್ನ ಮಹಾ ಜ್ಞಾನವನು ತನ್ನ ಸ್ವಯಾನಂದ ಸುಖ ಮೊದಲಾದ ತನ್ನ ಸ್ವಧರ್ಮವೆಲ್ಲಾ ಸಹವಾಗಿ ಅಖಂಡ ತೇಜೋಮೂರ್ತಿಯಾದ ಮಹಾ ಲಿಂಗಾಕಾರವಾಯಿತು. ಅಂತಾದ ಮಹಾಲಿಂಗವು ಪಂಚಮುಖವನೆಯ್ದಿ, ಪಂಚಕಲಾಶಕ್ತಿ ಯುಕ್ತವಾದ ಪಂಚ ಸಾದಾಖ್ಯ ಲಿಂಗಮೂರ್ತಿಯಾಯಿತು. ಅಂತಾದ ಮಹಾಲಿಂಗವೇ ಹರಿಹರ ಬ್ರಹ್ಮರ ನಡುವೆ ನೆಗೆಳ್ದ ಮಹಾ ತೇಜೋ ಮೂರ್ತಿಯಾದ ಲಿಂಗವಾದುದು ತಾನೆ. ಅಂತು ಅಖಂಡಿತವಾಗಿ ಸರ್ವ ತೇಜೋ ಮುಖವಾಗಿ ಸಕಲನಿಃಕಲವಾಗಿ ಪಂಚಸಂಜ್ಞೆಯನ್ನುಳ್ಳುದಾಗಿ ತನ್ನ ಸ್ವಲೀಲಾ ಸ್ವತಂತ್ರತೆಯಿಂದಿಪ್ಪ ಆ ಮಹಾಲಿಂಗವೇ, ಭುವನಾಧ್ವ, ತತ್ವಾಧ್ವ, ವರ್ಣಾಧ್ವ, ಮಂತ್ರಾಧ್ವ, ಪದಾಧ್ವ, ಕಲಾಧ್ವ ಮೊದಲಾದ ಚರಾಚರಾತ್ಮರುಗಳಿಗೆ ತಾನೇ ಜನ್ಮಸ್ಥಾನವಾದನಾಗಿ ಅಂತು ಸರ್ವ ತತ್ತ್ವಂಗಳು ಲಿಂಗಮಧ್ಯದಲ್ಲಿಯೇ ಹುಟ್ಟಿ ಅಡಗುತ್ತಿಹವೆಂದು ಅರಿದು ಲಿಂಗವಾಗಿಪ್ಪ ಶರಣನೇ ಬಲ್ಲಾತನು. ಆ ಬಲ್ಲ ಶರಣನಿಂದ ಆ ಮಹಾಲಿಂಗದ ಘನ ಕಾಣಲಾಯಿತೆಂಬುದೇ ವಚನದ ತಾತ್ಪರ್ಯಾರ್ಥ."

ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ' ಎಂದೆನಿಸು ಲಿಂಗವು ಎನ್ನ ಕರಸ್ಥಲಕೆ ಬಂದು ಕರತಲಾಮಲಕದಂತೆ ತೋರು ದ್ದಾನೆ, ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ"

ಲಿಂಗವೆಂಬುದು ಪರಶಿವಯುಕ್ತ. ಲಿಂಗವೆಂಬುದು ಪರಶಿವನ ದೇಹ. ಲಿಂಗವೆಂಬುದು ಪರಶಿವನ ಘನ ತೇಜ. ಲಿಂಗವೆಂಬುದು ಶಿವನ ನಿರತಿಶಯಾನಂದ ಸುಖ. ಲಿಂಗವೆಂಬುದು ಪರಶಿವನ ಜ್ಞಾನ. ಲಿಂಗವೆಂಬುದು ಪರಶಿವನು ತಾನು. ಲಿಂಗವೆಂಬುದು ಮಯ ಜಗಜ್ಜನ್ಮ ಭೂಮಿ ತಾನು. ಲಿಂಗವೆಂಬುದು ಅಖಂಡಿತ ಪಂಚ ಸಂಜ್ಞೆ ತಾನು. ಲಿಂಗವೆಂಬುದು ಹರಿಹರ ಬ್ರಹ್ಮರ ನಡುವೆ ಜೋತಿರ್ಮಯ ಲಿಂಗ. ಶ್ರುತಿಃ :—" ಆಲಯಂ ಸರ್ವ ಭೂತಾ ಲಯಾನಾಂ ಲಿಂಗಮುಚ್ಯತೇ—ಎಂಬುದಾಗಿ"

ಯಾವುದರಲ್ಲಿ ಸರ್ವಭೂತಗಳೂ ಹುಟ್ಟುತ್ತವೆಯೋ, ಯ ಅವು ಲಯವಾಗುತ್ತವೆಯೋ ಅದೇ ಲಿಂಗವೆಂದು ಹೇಳಿರುವುದ ವೆಂದರೆ ಪರಬ್ರಹ್ಮವೆಂದಾಯಿತು.

## ಈಶಾವಾಸ್ಯಾದಿ ಉಪನಿಷತ್ತುಗಳಲ್ಲಿ ಶಕ್ತಿವಿಶಿಷ್ಟ ಶಿವನ

ರಾನಡೆಯವರ 'ಉಪನಿಷತ್-ರಹಸ್ಯ'ವೇ ಮೊದಲಾದ ಗ್ರಂಥಗಳಲ್ಲಿ ಹದಿಮೂರು ಉಪನಿಷತ್ತುಗಳು ಹಳೆಯವೆಂದು ನಿರ್ಧರಿಸ ಅದರಲ್ಲಿ ದಶೋಪನಿಷತ್ತುಗಳೂ ಶ್ವೇತಾಶ್ವತರವೂ ಸೇರಿವೆ. ಈ ಉಪ ಗಳಲ್ಲಿ ಹರಿಹರ ತಾರತಮ್ಯವು ಕಾಣುವುದಿಲ್ಲ. ಇವುಗಳಲ್ಲಿ ಸೃಷ್ಟಿ ಶಕ್ತಿವಿಶಿಷ್ಟಶಿವನ ಕಲ್ಪನೆಯು ಇರುವುದನ್ನು ಉಲ್ಲೇಖಿಸಲಾಗಿದೆ. ನಿರ್ಮಾಣದ ವಿಷಯದಲ್ಲಿ ಆ ಉಪನಿಷತ್ತಿನ ಕಾಲದಲ್ಲಿ ಪ್ರಚಲಿತ ಪ್ರಮೇಯಗಳನ್ನು ಟೀಕಿಸಿ ತನ್ನ ಸಿದ್ಧಾಂತವನ್ನು ಪ್ರತಿಪಾದಿಸುವ ಶ್ವೆ ರೋಪನಿಷತ್ತು ಅಂದಿಗೆ ಹಿಂದಿನ ಉಪನಿಷತ್ತುಗಳ ಸಾರಸರ್ವ ಒಳಗೊಂಡಿದೆಯೆಂಬುದು ವಿದ್ವಾಂಸರ ಅಭಿಪ್ರಾಯ. ಆ ಉಪನಿ ಹೇಳಿರುವುದನ್ನು ಮೊದಲು ಗಮನಿಸಬಹುದು. ಸೃಷ್ಟಿಗೆ 'ದೇ ಶಕ್ತಿ'ಯೇ ಕಾರಣವೆಂದು ಆ ಉಪನಿಷತ್ತಿನಲ್ಲಿ ಹೇಳಿದೆಯಷ್ಟೆ* ಶ್ವೆ

* ತೇಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂ

ರೋಪನಿಷತ್ತಿನಲ್ಲಿಯೇ ಶಕ್ತಿವಿಶಿಷ್ಟನಾದವನೆಂದು ಹೇಳಿರುವ ಆ ದೇವನಾರೆಂಬುದನ್ನು ಅನೇಕ ಮಂತ್ರಗಳಲ್ಲಿ ಹೇಳಿದೆ. ಮೊದಲನೆಯ ಅಧ್ಯಾಯದ ಹತ್ತನೆಯ ಮಂತ್ರದ* ಕನ್ನಡ ಪದ್ಯಾನುವಾದವಿದು :

ಕಂದ : ಹರನಮೃತಾಕ್ಷರನೇಕಂ ।
ಕ್ಷರಂಪ್ರಧಾನಮದನಾತ್ಮಮಂ ಹರನಾಳ್ವಂ ॥
ಹರಿಪುದು ಮಾಯಾಖಿಲಮಂ ।
ನೆರೆಯಂತ್ಯದೆ ತತ್ತ್ವಭಾವಯೋಗಧ್ಯಾನಂ ॥

ಶ್ರೀರಾಮಾನುಜರು ಶ್ರೀಭಾಷ್ಯದಲ್ಲಿ ಶ್ವೇತಾಶ್ವತರದ ಅನೇಕ ಆಧಾರಗಳನ್ನು ತೆಗೆದುಕೊಂಡಿರುವರಾದರೂ, ವೈಷ್ಣವರಾದ ಅವರು ಹರ ಮೊದಲಾದ ಪದಗಳಿಗೆ ರೂಢಿಯಾದ ಅರ್ಥವನ್ನು ಬಿಟ್ಟು ಎಳೆದೆಳೆದು ಹೇಗೊ ಬೇರೆ ಅರ್ಥವನ್ನು ಮಾಡಲೇಬೇಕಾಗುವುದು. ಈ ಮಂತ್ರದಲ್ಲಿನ ಹರನೆಂಬ ಪದಕ್ಕೆ ಅರ್ಥವನ್ನು ಶ್ರೀಭಾಷ್ಯದಲ್ಲಿ ಹೀಗೆ ಮಾಡಿದ್ದಾರೆ. "ಅಮೃತಾಕ್ಷರಂ ಹರ ಇತಿಭೋಕ್ತಾ ನಿರ್ದಿಶ್ಯತೇ ಪ್ರಧಾನಮಾತ್ಮನೋ ಭೋಗ್ಯತ್ವೇನ ಹರತೀತಿ ಹರಃ." ಆದರೆ, ಶೈವೋಪನಿಷತ್ತೆಂದು ಪ್ರಸಿದ್ಧವಾದ ಈ ಉಪನಿಷತ್ತಿನಲ್ಲಿ ಹರನೆಂಬ ಪದಕ್ಕೆ ಶಿವನೆಂಬರ್ಥವಲ್ಲದೆ ಬೇರೆಯರ್ಥವು ಹೊಂದದು.

"ಈಶಾವಾಸ್ಯಮಿದಂ ಸರ್ವಂ" ಎಂದು ಈಶಾವಾಸ್ಯ ಉಪನಿಷತ್ತು ಪ್ರಾರಂಭವಾಗುವುದು. ಈಶನೆಂದರೆ ಶಿವನೆಂಬುದು ಪ್ರಸಿದ್ಧವಾದ ಅರ್ಥ. ಪ್ರಸಿದ್ಧವಾದ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಮಾಡಬೇಕಾದರೆ ಅದಕ್ಕೆ ತಕ್ಕ ಕಾರಣಗಳಿರಬೇಕು. ಏಕೆಂದರೆ "ರೂಢಿರ್ಯೋಗಮಪಹರತಿ" ಎಂಬ ಪೂರ್ವ ಮೀಮಾಂಸೆಯ ಕಟ್ಟು ಹಾಗೆ ಮಾಡಲು ಅಡ್ಡಬರುವುದು. ವೇದಾಂತ ದೇಶಿಕರ ಭಾಷ್ಯದಲ್ಲಿ "ರೂಢಿರ್ಯೋಗಮಪಹರತೀತಿ ನ್ಯಾಯಾದೀಶೋಽತ್ರ ರುದ್ರಃಸ್ಯಾತ್" ಎಂದು ಪೂರ್ವಪಕ್ಷವನ್ನು ಮಂಡಿಸಿರುವರು. ಈಶ ಎಂಬ ಪದಕ್ಕೆ ರೂಢಿಯಾಗಿ ಶಿವನೆಂಬ ಅರ್ಥವಿರುವಲ್ಲಿ, ಬೇರೆ ಅರ್ಥವನ್ನು ಮಾಡಲು

---

* ಕ್ಷರಂ ಪ್ರಧಾನಮಮೃತಾಕ್ಷರಂ ಹರಃ ಕ್ಷರಾತ್ಮಾನಾವೀಶತೇ ದೇವ ಏಕಃ ।
ತಸ್ಯಾಭಿಧ್ಯಾನಾದ್ಯೋಜನಾತ್ ತತ್ತ್ವಭಾವಾತ್ ಭೂಯಶ್ಚಾಂತೇ
ವಿಶ್ವಮಾಯಾ ನಿವೃತ್ತಿಃ ॥ ೧–೧೦.

ಬಾರದು. ಸರ್ವೇಶನಾದ ವಿಷ್ಣುವೆಂದರ್ಥ ಮಾಡಲು ಸರ್ವ ಎಂಬ ಈಶ ಪದದೊಡನೆ ಸೇರಿಲ್ಲವೆಂಬುದನ್ನು ಗಮನಿಸಿರುವರು. ಅದಕ್ಕೆ " **ಸರ್ವಭೂತಾಂತರಾತ್ಮಾಪಹತಪಾಪ್ಮಾ ದಿವ್ಯೋ ದೇವ** ಏಕೋ **ನಾರಾಯಣಃ** " ಎಂಬ ಮಹೋಪನಿಷತ್ತಿನ ಶ್ರುತಿಯೇ ಮೊದಲಾದ ಆಧಾರಗಳಲ್ಲಿ ನಾರಾಯಣನೊಬ್ಬನೇ ದೇವನು ಮತ್ತು ಸರ್ವಾಂತರ್ಯಾಮಿಯು ಎಂದು ಹೇಳಿರುವುದರಿಂದ ಇಲ್ಲಿ ಈಶಪದಕ್ಕೆ ರೂಢಿಯ ಶಿವ ಅರ್ಥವನ್ನು ಬಿಟ್ಟು ನಾರಾಯಣನೆಂದು ಅರ್ಥ ಮಾಡಬೇಕೆಂದು ಪೂರ್ವ ಪಕ್ಷಕ್ಕೆ ಸಮಾಧಾನವನ್ನು ಮಾಡಿದ್ದಾರೆ. ಆದರೆ ಶ್ರೀ ರಾಮಾನುಜ ವೈಷ್ಣವರೇ ತಮ್ಮ ಭಾಷ್ಯಗಳಲ್ಲಿ ಯಾವ ಶ್ವೇತಾಶ್ವತರ ಉಪನಿಷತ್ತಿನ ವಾಕ್ಯ ಗಳನ್ನು ಆಧಾರವಾಗಿ ತೆಗೆದುಕೊಂಡಿದ್ದಾರೆಯೋ, ಅಂತಹ ಉಪನಿಷತ್ತು ಶಿವನೊಬ್ಬನೆ ದೇವನು, ಅನ್ಯದೇವನಿಲ್ಲವೆಂದು ಸ್ಪಷ್ಟವಾಗಿ ಹೇಳು ಮಂತ್ರದ* ಪದ್ಯಾನುವಾದವಿದು:

ಕಂದ: ಒರ್ವನೆ ದಲ್ ರುದ್ರಂ, ಪೆರ।
ತೊರ್ವಂ ದೇವಂ ಸಟೆ; ಪೊರೆವಂ ಶಕ್ತಿಗಳಿಂ॥
ಸರ್ವ ಜಗತ್ತಿದನಾಳ್ವಂ।
ಸರ್ವಾಂತರ್ಯಾಮಿ ಸೃಷ್ಟಿ ವಿಲಯದ ಕರ್ತಂ॥

ಕೆಲವು ಉಪನಿಷತ್ತುಗಳಲ್ಲಿ ನಾರಾಯಣನೊಬ್ಬನೆ ದೇವನು, ಅವನು ಸರ್ವಾಂತರ್ಯಾಮಿಯು ಎಂದು ಹೇಳಿರುವಂತೆಯೇ ಮತ್ತೆ ಕೆಲವು ಉಪನಿಷತ್ತುಗಳು ಶಿವನೊಬ್ಬನೇ ದೇವನು, ಅವನು ಸರ್ವಾಂತರ್ಯಾಮಿಯಾಗಿ ಎಲ್ಲವನ್ನೂ ಆಳುವನು ಎಂದು ಹೇಳಿರುವುದರಿಂದ, ಶಿವ, ಹರ, ಈಶ ಎಂದು ಹೇಳುವ ಉಪನಿಷತ್ತುಗಳಲ್ಲಿರುವ ಈಶನೇ ಮೊದಲಾದ ಪದಗಳಿಗೆ ರೂಢಿಯಾಗಿ ಶಿವನೆಂಬ ಅರ್ಥವನ್ನು ತ್ಯಜಿಸಲು ಕಾರಣವಿರುವುದಿಲ್ಲ.

---

* " ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುರ್ಯ ಇಮಾಲ್ಲೋಕಾನೀಶತ ಈಶನೀಭಿಃ।
ಪ್ರತ್ಯಙ್ ಜನಾಸ್ತಿಷ್ಠತಿ ಸಂಚುಕೋಚಾಂತಕಾಲೇ ಸಂಸೃಜ್ಯ
ವಿಶ್ವಾ ಭುವನಾನಿ ಗೋಪಾ

ಇನ್ನು ಎರಡನೆಯದಾದ ಕೇನೋಪನಿಷತ್ತಿನಲ್ಲಿ, ಪರಬ್ರಹ್ಮವೇ ದೇವಾದಿ ದೇವತೆಗಳಿಗೂ ಸಹಾ ಅವರವರ ಶಕ್ತಿಯನ್ನು ಕೊಡುವುದೆಂಬುದನ್ನು ಇಂದ್ರಾದಿಗಳಿಗೆ ತಿಳುಹಲು ಉಮಾದೇವಿಯು ಪ್ರತ್ಯಕ್ಷಳಾಗುವಳು. ಇಂದ್ರನು ಸಮೀಪಿಸಿ ಪ್ರಶ್ನೆ ಮಾಡಿದ್ದು **"ಬಹುಶೋಭಮಾನಾಮುಮಾಂ ಹೈಮವತೀಂ"** ಎಂದರೆ ಹಿಮವಂತನ ಮಗಳಾದ ಉಮೆಯನ್ನು. ಶ್ರೀ ಶಂಕರಾಚಾರ್ಯರ ಭಾಷ್ಯದಲ್ಲಿ ಇದನ್ನು ಸ್ಪಷ್ಟಮಾಡಿದೆ: **"ಹಿಮವತೋ ದುಹಿತಾ ಹೈಮವತೀ ನಿತ್ಯಮೇವ ಸರ್ವಜ್ಞೇನೇಶ್ವರೇಣ ಸಹವರ್ತತ ಇತಿ ಜ್ಞಾತುಂ ಸಮರ್ಥಾ ಇತಿ ಕೃತ್ವಾ ತಾಂ ಉಪಜಗಾಮ."** ಹಿಮವಂತನ ಮಗಳಾದ ಹೈಮವತಿಯು ಎಂದರೆ ಉಮಾದೇವಿಯು ಸರ್ವಜ್ಞನಾದ ಈಶ್ವರನ ಬಳಿ ಯಾವಾಗಲೂ ಇರುವಳಾಗಿ (ಆ ಪರಮಾತ್ಮನ ಮಹಿಮೆಯನ್ನು) ಬಲ್ಲವಳು, ಎಂದು ಆಕೆಯನ್ನು ಸಮೀಪಿಸಿ ಪ್ರಶ್ನಿಸಿದನು ಎಂಬುದು ಭಾಷ್ಯಾರ್ಥ. ಹೀಗೆ ಅಗ್ನಿಯೇ ಮೊದಲಾದವುಗಳಿಗೆ ಶಕ್ತಿಯನ್ನು ಕೊಡುವ ಪರಬ್ರಹ್ಮವು ಸರ್ವಜ್ಞನೂ ಈಶ್ವರನೂ ಆದ ಉಮಾಪತಿಯೇ ಎಂಬುದು ಸ್ಪಷ್ಟ. 'ಭಾರತಾರ್ಯರ ಧಾರ್ಮಿಕ ಸಂಸ್ಕೃತಿ'ಯನ್ನು ಬರೆದ ವಿಶ್ರಾಂತ ಸಂಸ್ಕೃತ ಮಹಾಪಾಠಶಾಲಾಧ್ಯಕ್ಷ ಚಂದ್ರಶೇಖರ ಶಾಸ್ತ್ರೀ, ಎಂ.ಎ. ಅವರು ಆ ಗ್ರಂಥದಲ್ಲಿ: **"ಇಚ್ಛಾಶಕ್ತಿಃ ಉಮಾ ಕುಮಾರೀ"** ಎಂಬ ಶ್ರುತಿಯೂ ಇದೆಯೆಂದು ಹೇಳಿ, ಅದನ್ನು ಆಧಾರವಾಗಿ ತೆಗೆದುಕೊಂಡಿರುವರು. ಉಮಾ ಶಕ್ತಿಯು ಪರಬ್ರಹ್ಮದ ಶಕ್ತಿಯೆಂಬುದಕ್ಕೆ ಈ ಶ್ರುತಿಯೂ ಆಧಾರವಾಗಿದೆ. **"ವಿದ್ಯೈವೋಮಾ। ವಿದ್ಯಾ ಸಹಾಯವಾನ್ ಈಶ್ವರ ಇತಿಸ್ಮೃತಿಃ ॥** ಎಂದು ಸ್ಮೃತ್ಯಾಧಾರವನ್ನು ಕೇನೋಪನಿಷತ್ತಿನ ಶಾಂಕರ ವಾಕ್ಯ ಭಾಷ್ಯದಲ್ಲಿ ತೆಗೆದುಕೊಂಡಿದ್ದಾರೆ.

ಇನ್ನು ಕೆಲವು ವಚನಗಳಲ್ಲಿರುವ ಪಶು ಪಾಶ ಮತ್ತು ಪತಿ ಎಂಬ ಪದಗಳಾದರೂ ಶ್ವೇತಾಶ್ವತರ ಉಪನಿಷತ್ತಿನಲ್ಲಿಯೂ ಕಂಡುಬರುವುವು. **"ಭಗವನ್ ಮೇ ಬ್ರೂಹಿ ಪರಮತತ್ತ್ವರಹಸ್ಯಂ ಕಿಂ ತತ್ತ್ವಂ ಕೋ ಜೀವಃ, ಕಃ ಪಶುಃ ಕಃ ಈಶಃ ಕೋ ಮೋಕ್ಷೋಪಾಯಃ"** ಎಂದು ಜಾಬಾಲೋಪನಿಷತ್ತಿನಲ್ಲಿ ಜಾಬಾಲಿ ಋಷಿಯನ್ನು ಪೈಪ್ಪಲಾದಿಯು ಪ್ರಶ್ನೆ ಮಾಡುತ್ತಾನೆ. ಲಿಂಗರೂಪದಲ್ಲಿ ಶಿವನನ್ನು ಪೂಜೆ ಮಾಡುವುದಕ್ಕೂ ಉಪನಿಷತ್ತಿ

ನಲ್ಲಿ ಆಧಾರವಿದೆ. ಮುಂಡಕೋಪನಿಷತ್ತಿನಲ್ಲಿ "**ನಾಯಮಾತ್ಮಾ ಬಲಹೀನೇನ ಲಭ್ಯೋ ನಚ ಪ್ರಮಾದಾತ್ ತಪಸೋವಾಪ್ಯಲಿಂಗಾತ್**" ಇದರ ಸರಳವಾದ ಅರ್ಥವಿದು : ಬಲಹೀನನಿಗೆ ಆತ್ಮಸಾಕ್ಷಾತ್ಕಾರವಾಗು ದಿಲ್ಲ; ಲಿಂಗರಹಿತನಾದವನಿಗೆ ತಪಸ್ಸಿನಿಂದಲೂ ಆತ್ಮಸಾಕ್ಷಾತ್ಕಾರವಾಗು ದಿಲ್ಲ. ಶ್ರೀ ಶಂಕರಾಚಾರ್ಯರು "**ತಪಸೋವಾಪ್ಯಲಿಂಗಾತ್-ಲಿಂಗರಹಿ ತಾತ್**" ಎಂದು ಭಾಷ್ಯ ಬರೆದಿರುವುದರಲ್ಲಿ ಇದೇ ಅರ್ಥ ಬರು ಆದರೆ ಅವರು ಲಿಂಗವೆಂದರೆ ಶಿವಲಿಂಗವೆಂಬ ರೂಢಿಯ ಅರ್ಥವನ್ನು ಲಿಂಗ ಶಬ್ದಕ್ಕೆ ಸಂನ್ಯಾಸವೆಂದು ಅರ್ಥ ಮಾಡಿರುವರು. ಆ ಅರ್ಥವು ವಾದರೂ ಹಾಗೆ ಅರ್ಥಮಾಡುವುದು '**ರೂಢಿರ್ಯೋಗಮಪಹ**' ಎಂಬ ನ್ಯಾಯಕ್ಕೆ ವಿರುದ್ಧವಾಗುವುದು. "**ತಪೋಽತ್ರಜ್ಞಾನಂ। ಲಿಂ ಸಂನ್ಯಾಸಃ ಸಂನ್ಯಾಸರಹಿತಾಜ್ಞಾನಾನ್ನಲಭ್ಯತ ಇತ್ಯರ್ಥ**" ತಪ ಎಂದರೆ ಜ್ಞಾನ; ಲಿಂಗವೆಂದರೆ ಸಂನ್ಯಾಸ; ಸಂನ್ಯಾಸವಿ ಜ್ಞಾನದಿಂದ ಆತ್ಮಸಾಕ್ಷಾತ್ಕಾರವಿಲ್ಲವೆಂದು ಶ್ರೀ ಶಂಕರರು ಭಾಷ್ಯದ ಪದಗಳಿಗೆ ಅರ್ಥ ಬರೆದಿರುವರು. ಮಧ್ವಾಚಾರ್ಯರು ಈ ಮಂತ್ರಕ್ಕೆ ಭಾ ವನ್ನು ಬರೆದಿಲ್ಲ. ರಾಮಾನುಜೀಯ ಸಿದ್ಧಾಂತದಂತೆ ಭಾಷ್ಯವನ್ನು ಬರೆ ವರು, ಶ್ರೀರಂಗ ರಾಮಾನುಜರು. ಇವರು "**ಲಿಂಗಂ ಶಿಖಾ ಯಜ್ಞೋ ಪವೀತ ಶಿಕ್ಯಜಲ ಪವಿತ್ರಾದಿ ತದ್ರಹಿತಾತ್ ಸಂನ್ಯಾಸಾದಪೀತ್ಯರ್ಥ**" ಎಂದು ಅವರ ಬಾಷ್ಯದಲ್ಲಿ ಬರೆದಿರುವರು. ಲಿಂಗವೆಂದರೆ ಶಿಖಾ, ಯಜ್ಞೋ ಪವೀತ, ನೆಲುವಿನಲ್ಲಿಟ್ಟಿರುವ ಜಲ, ಪವಿತ್ರವೇ ಮೊದಲಾದ ಚಿಹ್ನೆಗಳಿ ಇರುವುದರಿಂದಲೂ ಸಂನ್ಯಾಸದಿಂದಲೂ ಆತ್ಮಸಾಕ್ಷಾತ್ಕಾರವಾಗುವ ವೆಂದು ಅವರು ಭಾಷ್ಯದಲ್ಲಿ ಹೇಳಿರುವರು. ನೇರವಾದ ಅರ್ಥವನ್ನು ಭಾಷ್ಯಕಾರರು ಬಿಟ್ಟಿರುವುದಕ್ಕೆ ಅವರು ಲಿಂಗರಹಿತರೆಂಬುದೊಂದೇ ಕಾ ವೆಂಬುದು ವೀರಶೈವರ ವಾದ.

ನಾಸದೀಯ ಸೂಕ್ತದಲ್ಲಿ ಯಾವ ಪರತತ್ತ್ವವನ್ನು "ಆಭು" ಎಂ ಸಾರ್ಥಕವಾದ ಪದದಿಂದ ಕರೆದಿದೆಯೋ ಅದೇ ಪರತತ್ತ್ವವನ್ನೇ ಶ್ವೇತಾ ರೋಪನಿಷತ್ತಿನಲ್ಲಿ ಮಂಗಳವೆಂಬರ್ಥವುಳ್ಳ "ಶಿವ" ಎಂಬ ಪವಿತ್ರನಾಮ ಕರೆದಿದೆ. "**ನಾಸದಾಸೀತ್, ನೋಸದಾಸೀತ್, .... ನರತ್ರಾ**" ಎ

ಎಂದರೆ ಸದಸತ್ತುಗಳೂ ಹಗಲು ರಾತ್ರಿಯೇ ಮೊದಲಾದ ದ್ವಂದ್ವಗಳಾಗುವ ಮುನ್ನವೇ "**ತುಚ್ಛೇನಾಭ್ವಪಿಹಿತಂ ಯದಾಸೀತ್**" ಎಂದರೆ ಶಕ್ತಿ ವಿಶಿಷ್ಟವಾದ ಆಭು (ಬ್ರಹ್ಮ)ವಿದ್ದಿತೆಂದು ನಾಸದೀಯ ಸೂಕ್ತದಲ್ಲಿ ಹೇಳಿದೆ ಯಷ್ಟೆ. ಶ್ವೇತಾಶ್ವತರದಲ್ಲಿಯೂ, ನಾಸದೀಯ ಸೂಕ್ತದ ಪದಗಳನ್ನೇ ಉಪಯೋಗಿಸಿ ಆಗ ಇದ್ದುದೇನೆಂಬುದನ್ನು ಹೇಳಿದೆ.

"ಯದ್ವಾತಮಸ್ತನ್ನದಿವಾ ನರಾತ್ರಿಃ ನಸನ್ನಚಾಸಚ್ಛಿವ ಏವ ಕೇವಲಃ ।
ತದಕ್ಷರಂ, ತತ್‌ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ ॥"

ಇಲ್ಲಿಯೂ ಸದಸತ್ತುಗಳೂ ಹಗಲು ರಾತ್ರಿಯೂ ಆಗುವ ಮುನ್ನವೇ ಇದ್ದುದು 'ಶಿವ'ನೆಂದು ಹೇಳಿದೆ. ಈ ಮಂತ್ರದ ವಿಜ್ಞಾನ ಭಗವತ್ ಕೃತ ವಿವರಣೆ ಯಲ್ಲಿ "**ನಾಸದಾಸೀನ್ನೋಸದಾಸೀತ್ತಮ ಆಸಿದಿತಿ ಶ್ರುತ್ಯಂತರೋಕ್ತಂ**" ಎಂದು ಹೇಳಿ ನಾಸದೀಯ ಸೂಕ್ತವೇ ಈ ಮಂತ್ರಕ್ಕೆ ಆಧಾರವೆಂಬುದನ್ನು ಸ್ಪಷ್ಟ ಮಾಡಿದೆ. ಆದುದರಿಂದ ನಾಸದೀಯ ಸೂಕ್ತದ "ಆಭು" ಮತ್ತು ಶ್ವೇತಾಶ್ವತರದ "ಶಿವ" ಇವೆರಡೂ ಒಂದೇಯೆಂದಾಯಿತು. ಅರ್ಥಾತ್ ನಾಸದೀಯ ಸೂಕ್ತದ ಪರತತ್ತ್ವವು ಪರಶಿವಬ್ರಹ್ಮವೇ.

"**ಶಿವ ಏವ ಕೇವಲಃ**" ಎಂದು ಶ್ವೇತಾಶ್ವರದಲ್ಲಿ ಹೇಳಿರುವುದು "**ತದೇಕಂ ತಸ್ಮಾದ್ಧಾನ್ಯನ್ನಪರಃ ಕಿಂಚನಾಽಽಸ**" ಎಂದು ನಾಸದೀಯ ಸೂಕ್ತದಲ್ಲಿ ಹೇಳಿರುವುದರ ಅನುಸಾರವಾಗಿ ಹೇಳಿದಂತಿದೆ. ಹೀಗೆ ಅದ್ವೈತ ವಾಗಿದ್ದ "ಆಭು"ವು, ತುಚ್ಛ ಎಂದರೆ ಮಾಯೆಯೊಡನಿದ್ದಿತೆಂದು ಹೇಳು ವಂತೆಯೇ, ಶ್ವೇತಾಶ್ವತರದಲ್ಲಿ ಶಿವನಿಂದ ಜ್ಞಾನಶಕ್ತಿಯು ಹೊರಹೊಮ್ಮಿ ತೆಂದು ಹೇಳಿದೆ. "**ಭರ್ಗೋ ದೇವಸ್ಯ ಧೀಮಹಿ**" ಎಂಬ ಗಾಯತ್ರೀ ಮಂತ್ರದಲ್ಲಿರುವ 'ಭರ್ಗ" ಎಂಬ ಪದಕ್ಕೆ ಶಿವನೆಂಬುದೇ ರೂಢಿಯ ಅರ್ಥ; ಧೀಮಹಿ ಎಂದರೆ ಧರೇಮಹಿ ಎಂದರ್ಥ ಮಾಡಬೇಕಾಗುವುದು. ಶಿವನನ್ನು ಧಾರಣೆ ಮಾಡಬೇಕೆಂದು ಹೇಳಿದಂತಾಯಿತು. ಸ್ಥೂಲತನುವಿನಲ್ಲಿ ಧಾರಣೆ ಮಾಡಲು ಇಷ್ಟಲಿಂಗ ರೂಪದಲ್ಲಿ ಧರಿಸಬೇಕು; ಸೂಕ್ಷ್ಮ ಮತ್ತು ಕಾರಣ ತನುಗಳಲ್ಲಿ ಪ್ರಾಣಲಿಂಗ ಮತ್ತು ಭಾವಲಿಂಗ ರೂಪದಲ್ಲಿ ಧರಿಸಬೇಕು. ಹಾಗೆ ಮಾಡಿದರೆ "**ಧೀಯೋಯೋನಃ ಪ್ರಚೋದಯಾತ್**" ಎಂದು

ಹೇಳಿರುವುದು ಸಾರ್ಥಕವಾಗುವುದು. ಎಲ್ಲ ಅಂಗಗಳಲ್ಲಿಯೂ ಶಿವಚೈ ವುಂಟಾಗಿ ಶಿವಾನುಭಾವಕ್ಕೆ ಬುದ್ಧಿಯು ಪ್ರಚೋದನೆಗೊಳ್ಳುವುದು. "ತ ಸವಿತುರ್ವರೇಣ್ಯಂ" ಎಂಬ ಪದಗಳು ಸೂರ್ಯನನ್ನೋ ಬೇರೆ ದೇ ಯನ್ನೋ ಕುರಿತು ಹೇಳುವುವೆಂದು ಅರ್ಥ ಮಾಡಲು ಅವಕಾಶವೇ ದಂತೆ, ಶ್ವೇತಾಶ್ವತರದ ಮೇಲಿನ ಮಂತ್ರದಲ್ಲಿ "ಶಿವ ಏವ ಕೇವಲ ತದಕ್ಷರಂ ತತ್‌ಸವಿತುರ್ವರೇಣ್ಯಂ" ಎಂದು ಹೇಳಿ ಶಿವನೇ "ಸ ವರೇಣ್ಯ" ನೆಂಬುದನ್ನು ಸ್ಪಷ್ಟಮಾಡಿದೆ. ಪ್ರಪಂಚೋಪಶಮಂ ಶಾಂ ಶಿವಂ ಅದ್ವೈತಂ" ಎಂಬ ಶ್ರುತಿಯಿರುವುದೂ ಗಮನಾರ್ಹ.

## ಮೋಕ್ಷಸ್ವರೂಪ

ಇನ್ನು ಮೋಕ್ಷಸ್ವರೂಪವೇನು ಎಂಬುದು ವಿಚಾರಣೀಯವು. ಜ ಜಗತ್ತುಗಳು ಪರಮಾತ್ಮನಿಂದ ಹೇಗೆ ಹೊರಹೊಮ್ಮಿದವೋ, ಹಾಗೆ ಅವುಗಳ ಅಂತ್ಯವೆನ್ನಬಹುದು. "ಯದ್ದೃಷ್ಟಂ ತನ್ನಷ್ಟಂ" ಎಂದು ಬ ವರು.

> ಏನೇನೆಂದೆನಲಿಲ್ಲದ ಮಹಾಘನವು ತನ್ನ ಲೀಲೆಯಿಂದ ತಾನೇ ಸ್ವಯಂಭು ಲಿಂಗವಾಯಿತ್ತು; ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ; ಆ ಶಿವಶಕ್ತ್ಯಾತ್ಮಕದಿಂದಾದುದು ಆತ್ಮ. ಆತ್ಮನಿಂದಾದುದು ಆಕಾಶ; ಆಕಾಶದಿಂದಾದುದು ವಾಯು; ವಾಯುವಿನಿಂದಾದುದು ಅಗ್ನಿ; ಅಗ್ನಿಯಿಂದಾದುದು ಅಪ್ಪು; ಅಪ್ಪುವಿನಿಂದಾದುದು ಪೃಥ್ವಿ; ಪೃಥ್ವಿಯಿಂದಾದುದು ಸಕಲ ಜೀವವೆಲ್ಲ. ಇವೆಲ್ಲ ನಿಮ್ಮ ನೆನಹುಮಾತ್ರದಿಂದಾದುವು ಚಿಮ್ಮಲಿಗೆಯ ಚೆನ್ನಿಗರಾಮಾ.

ತೈತ್ತಿರೀಯೋಪನಿಷತ್ತಿನಲ್ಲಿ (ವ. ೨, ಮ. ೧) ಇದೇ ಕ್ರಮದ ಜಗದುತ್ಪತ್ತಿಯನ್ನು ಹೇಳಿದೆ.* ಇವು ವಿರುದ್ಧಕ್ರಮದಲ್ಲಿ ಪ್ರಳಯಕಾಲ

---

* "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ; ಆಕಾಶಾದ್ವಾಯುಃ, ವಾಯೋರಗ್ನಿಃ; ಅಗ್ನೇರಾಪಃ; ಅದ್ಭ್ಯಃ ಪೃಥಿವೀ; ಪೃಥಿವ್ಯಾ ಓಷಧಯಃ; ಓಷಧೀಭ್ಯೋಽನ್ನಂ; ಅನ್ನಾತ್ ಪುರುಷಃ"

ಲಯಹೊಂದುವುವು. ಪರತರ ತತ್ತ್ವವು ಜಗದುತ್ಪತ್ತಿಗೆ ನಿಮಿತ್ತ ಕಾರಣವೆ, ಸಹಕಾರಿ ಕಾರಣವೆ, ನಿಮಿತ್ತೋಪಾದಾನ ಕಾರಣವೆ ಎಂಬ ಪ್ರಶ್ನೆಯು ಏಳುವುದು. ಮುಂಡಕೋಪನಿಷತ್ತಿನಲ್ಲಿ* ಚೆನ್ನಾಗಿ ಉರಿಯುವ ಬೆಂಕಿಯಿಂದ ಸಾವಿರಾರು ಕಿಡಿಗಳು ಹೇಗೆ ಹೊರಹೊಮ್ಮುತ್ತವೆಯೋ ಹಾಗೆಯೇ ನಾಶ ರಹಿತವಾದ ಬ್ರಹ್ಮದಿಂದ ವಿವಿಧ ಪದಾರ್ಥಗಳು ಹೊರಹೊಮ್ಮಿ ಆ ಬ್ರಹ್ಮ ದಲ್ಲಿಯೇ ಲಯವಾಗುತ್ತವೆಯೆಂದು ಹೇಳಿದೆ. ಬೆಂಕಿಯಂತೆ ಪರಬ್ರಹ್ಮ, ಬೆಂಕಿಯ ಕಿಡಿಗಳಂತೆ ಚರಾಚರಗಳು ಎಂದು ಭಾವ.

ಹೇಗೆ ಜೇಡರ ಹುಳು ತನ್ನ ದೇಹದಿಂದ ಜಾಲವನ್ನೇ ಹೊರಗೆ ಹಾಕಿ ಮತ್ತೆ ಅದನ್ನು ದೇಹದೊಳಕ್ಕೆ ಸೆಳೆದುಕೊಳ್ಳುವುದೋ, ಹೇಗೆ ಭೂಮಿಯಲ್ಲಿ ಸಸ್ಯಗಳು ಹುಟ್ಟುವವೋ, ಹೇಗೆ ಮನುಷ್ಯನ ದೇಹದಲ್ಲಿ ಕೂದಲುಗಳು ಬೆಳೆ ಯುವವೋ, ಹಾಗೆಯೇ ಅಕ್ಷರ ಬ್ರಹ್ಮದಿಂದ ಈ ಜಗತ್ತು ಹುಟ್ಟುವು ದೆಂಬುದು ಈ ಉಪನಿಷತ್ತಿನ ಇನ್ನೊಂದು ಮಂತ್ರದ† ಅರ್ಥ. ಮೊದಲನೆಯ ಉದಾಹರಣೆಯಿಂದ ಪರಬ್ರಹ್ಮವು ನಿಮಿತ್ತೋಪಾದಾನ ಕಾರಣವೆಂಬುದು ತಿಳಿಯುವುದು ; ನಿರ್ಜೀವವಾದ ಪೃಥ್ವಿಯಿಂದ ಸಜೀವಿಯಾದ ಸಸ್ಯಗಳು ಹುಟ್ಟಲು ಸಾಧ್ಯವೆಂಬುದು ಎರಡನೆಯ ಉದಾಹರಣೆಯಿಂದ ತಿಳಿಯುವುದ. ಸಜೀವನಾದ ಮನುಷ್ಯನ ದೇಹದಲ್ಲಿ ನಿರ್ಜೀವವಾದ ಕೂದಲು ಬೆಳೆವು ದೆಂಬುದು ಮೂರನೆಯ ದೃಷ್ಟಾಂತದಿಂದ ತಿಳಿಯಬರುವುದು.

> "ಆಕಾಶದಲ್ಲಿ ತೋರುವ ಇಂದ್ರಚಾಪವಡಗುವುದಕ್ಕೆ ಆಕಾಶವೇ ಆಶ್ರಯವಲ್ಲದೆ ಬೇರೆ ಮತ್ತೆ ಆಶ್ರಯವುಂಟೆ ಅಯ್ಯಾ? ಗಾಳಿಯಿಂದ ತೋರಿದ ಸುಳಿಗಾಳಿಯಡಗುವುದಕ್ಕೆ ಗಾಳಿಯೇ ಆಶ್ರಯವಲ್ಲದೆ ಬೇರೆ ಮತ್ತೆ ಆಶ್ರಯವುಂಟೆ ? ಅಖಂಡೇಶ್ವರಾ"

ಈ ವಚನದಿಂದ ಜೀವಾತ್ಮಗಳು ಪರಮಾತ್ಮನಿಂದ, ಅಗ್ನಿಯಲ್ಲಿ ಕಿಡಿಗಳುದಿಸು

---

* ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ|
ತಥಾಕ್ಷರಾದ್ವಿವಿಧಾಃ ಸೋಮ್ಯ ಭಾವಾಃ ಪ್ರಜಾಯಂತೇ ತತ್ರಚೈವಾಪಿಯಂತಿ ||

† ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ, ಯಥಾಪೃಥಿವ್ಯಾಮೋಷಧಯಃ ಸಂಭವಂತಿ |
ಯಥಾ ಸತಃ ಪುರುಷಾತ್ ಕೇಶಲೋಮಾನಿ ತಥಾಕ್ಷರಾತ್ ಸಂಭವತೀಹ ವಿಶ್ವಂ||

ವಂತೆ, ಗಾಳಿಯಲ್ಲಿ ಸುಳಿಗಾಳಿಯುದಿಸುವಂತೆ ತದಂಶವಾಗಿ ಉದಯಿ-
ವೆಂದು ಹೇಳಿದಂತಾಯಿತು: ಮತ್ತು ಅಗ್ನಿಯ ಕಿಡಿಗಳು ಅಗ್ನಿಯಲ್ಲಿ,
ಗಾಳಿ ಗಾಳಿಯಲ್ಲಿ ಸೇರಿ ತದೇಕವಾಗುವ ಹಾಗೆ ಜೀವರುಗಳು ಪರಮಾತ್ಮ-
ಬೆರೆವರು ಎಂದು ಭಾವ. ಹೀಗೆ ದ್ವೈತಭಾವವಳಿದು ಜೀವನು ಶಿ-
ಬೆರೆವುದಕ್ಕೆ ವಚನವೊಂದರಲ್ಲಿ:—

"ಅಯ್ಯಾ ಚಂದ್ರನಿಂದಾದ ಕಳೆ ಚಂದ್ರನ ಬೆರಸಿ ಚಂದ್ರನಾದಂತೆ, ಸೂರ್ಯನಿಂದಾದ ಕಿರಣ ಸೂರ್ಯನ ಬೆರಸಿ ಸೂರ್ಯನಾದಂತೆ, ದೀಪ ದಿಂದಾದ ಬೆಳಕು ದೀಪವ ಬೆರಸಿ ದೀಪವಾದಂತೆ, ಸಮುದ್ರದಿಂದಾದ ನದಿ ಸಮುದ್ರವ ಬೆರಸಿ ಸಮುದ್ರವೆ ಆದಂತೆ"

ಎಂದು ವಿವರಿಸಿರುವರು.

"ಘನಗಂಭೀರ ಮಹಾವಾರಿಧಿಯಲ್ಲಿ ನೊರೆ ತೊರೆ ಬುದ್ಬುದ ಫೇನ ತರಂಗಗಳು ತೋರಿತ್ತಲ್ಲಾ ಎಂದೊಡೆ ಅವು ಬೇರಾಗಬಲ್ಲವೆ? ಪರಶಿವ ನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡಗಳಾದವಲ್ಲದೆ ಬೇರಾಗಬಲ್ಲವೆ? ಬೇರಾಗಬೇಕೆಂಬ ಅರೆಮರುಳರ ನಾನೇನೆಂಬೆ, ವಿಶ್ವವ ತಿಳಿದು ನೋಡಲು ಸಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗವು ತಾನೆ"

ಈ ವಚನದಲ್ಲಿ ಪರಮಾತ್ಮನೆಂಬ ಸಮುದ್ರದಲ್ಲಿ ಚರಾಚರ ಜಗತ್ತು ನೊ-
ಯಿದ್ದಂತೆ ಎಂದು ತಿಳಿಯಬೇಕೆಂದು ಹೇಳಿದಂತಾಯಿತು. ಪರಮ ಶಿವ-
ಸಮುದ್ರದಲ್ಲಿ ತಾನೂ ಹರಿಯೂ ಸರ್ವ ದೇವತೆಗಳೂ ಮನುಜ
ಮೃಗಾದಿಗಳೂ ತುಂತುರು ಹನಿಗಳೆಂಬುದು ನಿಜವೆಂದುಬ್ರಹ್ಮನು ಬ್ರಹ್ಮ-
ಯಲ್ಲಿ ಹೇಳಿದ್ದಾನೆ. ಜೀವ ಜಗತ್ತುಗಳು ಶಿವಾಂಶವೆಂಬುದಕ್ಕೆ
ಮುಂಡಿಗೆಯಂತಹ ವಚನಗಳನ್ನು ಕೊಟ್ಟು ಲಿಂಗಲೀಲಾವಿಲಾಸದಲ್ಲಿ
ಕೊಟ್ಟಿರುವ ವ್ಯಾಖ್ಯಾನಗಳನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟಿದೆ.

† ಏನೂ ಏನೂ ಇಲ್ಲದ ಬಯಲೊಳಗೊಂದು ಬಗೆಗೊಳಗಾದ ಬಣ್ಣ ತಲೆದೋರಿತ್ತು; ಆ ಬಣ್ಣವನಾ ಬಯಲು ಶೃಂಗರಿಸಲು ಬಯಲು

---

* ಪರಮ ಶಿವಸಮುದ್ರೇಽಹಂ ಹರಿಃ ಸರ್ವ ದೇವಾಃ ।
ಮನುಜ ಪಶು ಮೃಗಾದ್ಯಾಸ್ಸೀಕರಾ ಏವ ಸತ್ಯಂ ॥

† ಟೀಕು: ನಾದಬಿಂದುಗಳಿಲ್ಲದೆ, ಸಕಲ ತತ್ತ್ವಗಳೇನೂ ಇಲ್ಲದೆ, ಸರ್ವಶೂನ್ಯ-
ವಾಗಿ ನಿಷ್ಕಲವಾಗಿದ್ದಿತು ಪರಬ್ರಹ್ಮವೆಂಬುದೀಗ 'ಏನೂ ಏನೂ ಇಲ್ಲದ ಬಯ-

ಸ್ವರೂಪಗೊಂಡಿತ್ತು ; ಅಂತಪ್ಪ ಸ್ವರೂಪಿನ ಬೆಡಗು ತಾನೆ ನಮ್ಮ ಗುಹೇಶ್ವರ ಲಿಂಗದ ಪ್ರಥಮ ಭಿತ್ತಿ.

§ "ಬಣ್ಣ ಹಲವಪ್ಪಲ್ಲಿ ಬಣ್ಣ ತಾನೊಂದಾಗಿ, ಬಣ್ಣ ಮೂಜಗಕೆ ಮುಕ್ಕಣ್ಣ ತಾನು, ಬಣ್ಣಕರು ಬಣ್ಣದೊಳಗಾಗುವುದನೆ ಕಂಡು ಅಣ್ಣ ನಗುತಿರ್ದನಯ್ಯಾ, ಯೋಗಿನಾಥಾ !"

ಹೀಗೆ ಅದ್ವೈತವಾದ ಪರಶಿವತತ್ತ್ವದಲ್ಲಿ ಶಿವಾಂಶವಾಗಿ ಜೀವ ಜಗತ್ತುಗಳು ಬೇರಾಗಿ ಕೊನೆಯಲ್ಲಿ ಶಿವನೊಡನೆ ಅದ್ವೈತವಾಗಿ ಹೋಗುವುವೆಂಬುದೇ

---

ಎಂಬ ಶಬ್ದಕ್ಕರ್ಥ. ಅಂತು ಉಪಮಿಸಬಾರದ ನಿರವಯ ಪರಬ್ರಹ್ಮದ ಸ್ವಯಂ ಪ್ರಕಾಶಮಪ್ಪ ಚಿದ್ಬೆಳಗನುಪಮಿಸಬಾರದೆಂಬುದೀಗ 'ಬಯಲೊಳಗೊಂದು ಬಗೆಗೊಳಗಾದ ಬಣ್ಣ'ವೆಂಬ ಶಬ್ದಕ್ಕರ್ಥ. ಅಂತು ಅಖಂಡ ಚಿದ್ಬೆಳಗೆಯಾಗಿರ್ಪ ಪರಬ್ರಹ್ಮವು ತನ್ನ ಸ್ವಯಂ ಪ್ರಕಾಶಮಪ್ಪ ಸ್ವಚಿತ್ತಿನಿಂದ ಸ್ವಲೀಲಾ ಚಿಂತನೆ ದೋರಿತ್ತೆಂಬುದೀಗ 'ಬಣ್ಣ ತಲೆದೋರಿತ್ತು' ಎಂಬ ಶಬ್ದಕ್ಕರ್ಥ. ಅಂತು ಪರಬ್ರಹ್ಮವು ತನ್ನ ಸ್ವಚಿತ್ತಿನಿಂದ ಚಿಂತಿಸಿದ ಲೀಲಾ ಚಿಂತನೆಯ ನಿರ್ಧರಿಸಿ ತನ್ನ ಚಿದ್ಬೆಳಗಿನತ್ಯುತ್ಕೃಷ್ಟವಾಗಿ ಅಲಂಕರಿಸಿಕೊಂಡು ಅಖಂಡ ತೇಜೋಮೂರ್ತಿಯಾದ ಮಹಾಲಿಂಗವಾಯಿತ್ತೆಂಬುದೀಗ 'ಆ ಬಣ್ಣವ ನಾ ಬಯಲು ಶೃಂಗರಿಸಲು ಬಯಲು ಸ್ವರೂಪಗೊಂಡಿತ್ತು ಎಂಬ ಶಬ್ದಕ್ಕರ್ಥ. ಅಂತು ತನ್ನ ಚಿದ್ವಿಲಾಸ ಲೀಲೆಯಿಂದ ಅಖಂಡ ತೇಜೋಮೂರ್ತಿಯಾದ ಮಹಾಲಿಂಗವೇ ಪ್ರಥಮವಾಗಿ ಸಕಲ ತತ್ತ್ವಂಗಳ ಸೃಷ್ಟಿಗೆ ಕಾರಣವಾಯಿತೆಂಬುದೀಗ 'ಅಂತಪ್ಪ ಕಲಾ ಸ್ವರೂಪಿನ ಬೆಡಗು ತಾನೆ ನಮ್ಮ ಗುಹೇಶ್ವರ ಲಿಂಗದ ಪ್ರಥಮ ಭಿತ್ತಿ" ಎಂಬ ಶಬ್ದಕ್ಕರ್ಥ.

§ ಟೀಕು : ಮಹಾಲಿಂಗದ ಚಿತ್ ಪ್ರಭಾಂಗವೆಂಬುದೀಗ ಬಣ್ಣವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಕ್ಕೆ ಲೀಲಾವಿಲಾಸದೋರಿದಲ್ಲಿ ಆ ಚಿತ್ಪ್ರಭಾ ಪ್ರಕಾಶವೇ ಸ್ಫುರಿಸಿ ನಾನತ್ವವನೈದಿ ಪರಿಚ್ಛಿನ್ನಾತ್ಮರಾದರೆಂಬುದೀಗ 'ಬಣ್ಣ ಹಲವಪ್ಪಲ್ಲಿ' ಎಂಬ ಶಬ್ದಕ್ಕರ್ಥ. ಅಂತು ಹಲವಾತ್ಮರಾದ ಚಿಚ್ಚೈತನ್ಯವೊಂದೆಂಬುದೀಗ 'ಬಣ್ಣ ತಾನೊಂದಾಗಿ' ಎಂಬ ಶಬ್ದಕ್ಕರ್ಥ. ಅಂತು ಲಿಂಗದ ಚಿತ್ಪ್ರಕಾಶವೇ ಮೂಜಗವಾಯಿತ್ತೆಂಬುದೀಗ 'ಬಣ್ಣ ಮೂಜಗಕ್ಕೆ ಮುಕ್ಕಣ್ಣ ತಾನು' ಎಂಬ ಶಬ್ದಕ್ಕರ್ಥ. ಅಂತು ಚಿದಂಶಿಕರಾದ ಆತ್ಮರು ದೇಹೇಂದ್ರಿಯ ಕುಲಗೋತ್ರಂಗಳು ಮೊದಲಾದ ನಾನಾ ಪ್ರಪಂಚಿನ ಬಣ್ಣದ ಸಂಸಾರಸಾಗರದೊಳಗೆ ಮುಳುಗಿ ಅಳುತ್ತಿಪ್ಪ ಜೀವರ ನೋಡಿ ವಿನೋದಿಸುತ್ತ ತಾಹೊರಗಾಗಿರ್ದ ಶಿವನೆಂಬುದೀಗ 'ಬಣ್ಣಕರು ಬಣ್ಣದೊಳಗಾಗುವದನೆ ಕಂಡು ಅಣ್ಣ ನಗುತಿರ್ದನಯ್ಯಾ ಯೋಗಿನಾಥಾ' ಎಂಬ ಶಬ್ದಕ್ಕರ್ಥ.

ವಚನಕಾರರ ಮತವು. ರಜ್ಜುವಿನಲ್ಲಿನ ಸರ್ಪದಂತೆ, ಶುಕ್ತಿಯಲ್ಲಿನ ರಜತದಂತೆ, ಸ್ಥಾಣುವಿನಲ್ಲಿನ ಚೋರನಂತೆ ಜಗತ್ತು ತೋರಿಕೆಯೆನ್ನುವುದನ್ನು ವಚನಕಾರರು ಒಪ್ಪರು.

"ಸರ್ವಂ ಶಿವಮಯಂ ಜಗತ್ತೆಂಬ ವಾಕ್ಯವನರಿಯದೆ ಹೋಗದಿರಾ ಮನವೆ. 'ಲಿಂಗ ಮಧ್ಯೆ ಜಗತ್ಸರ್ವಂ' ಎಂಬ ಮಹಾವಾಕ್ಯವ ಮರೆಯಲ್ಲಾ ಮನವೆ, ಸರ್ಪರಜ್ಜುವೆಂದು ನಂಬಿ ಕಪಿಲ ಸಿದ್ಧಮಲ್ಲಿಕಾರ್ಜುನಂಗೆ ಬೇರೆಯಾದೆಯಲ್ಲ ಮನವೆ"

"ಸರ್ವಂ ಶಿವಮಯಂ ಜಗತ್" ಎಂಬಲ್ಲಿಯೂ "ಸರ್ವಂ ಖಲ್ವಿದಂ ಬ್ರಹ್ಮ" ಎಂಬಲ್ಲಿಯೂ ಸುವರ್ಣಮಯವಾದ ಆಭರಣ ಹೇಗೋ ಹಾಗೆ ತಾದಾತ್ಮ್ಯದಲ್ಲಿ ಸಾಮಾನ್ಯಾಧಿಕರಣವಿದೆ. ಭ್ರಾಂತಿ ಪ್ರವೃತ್ತಿಯ ಹಗ್ಗ ಹಾವುಗಳಲ್ಲಿನಂತೆ ಸಂಸರ್ಗ ಸಾಮಾನ್ಯಾಧಿಕರಣವಿಲ್ಲ.

"ಚಿನ್ನದಿಂದಲಾದ ಹಲವು ಭಂಗಾರವಳಿದು ಕರಗಿದರೆ ಚಿನ್ನವೇ ಆದಂತೆ, ವಾರಿಕಲ್ಲು ಕರಗಿ ಮುನ್ನಿನ ಉದಕವೇ ಆದಂತೆ, ಚಿನ್ಮಯ ವಸ್ತುವಿನಿಂದ ಉದಯವಾದ ಚಿತ್ ಸ್ವರೂಪನಾದ ಶರಣನು ಆ ಚಿನ್ಮಯ ಪರವಸ್ತುವನೇ ಬೆರಸಿ, ಪರಮ ಶಿವಯೋಗಿಯಾದನಯ್ಯಾ ಮಹಲಿಂಗ ಗುರು ಸಿದ್ದೇಶ್ವರ ಪ್ರಭುವೇ."

ಬ್ರಹ್ಮಕ್ಕೂ ಜೀವಜಗತ್ತಿಗೂ ಸಂಬಂಧವನ್ನು ತಿಳಿಸಲು ಈ ವಚನ ಚಿನ್ನದ ಗಟ್ಟಿ, ಅದರಂಶವನ್ನುಳ್ಳ ಒಡವೆ ಮೊದಲಾದ ಉದಾಹರಣೆ ಕೊಟ್ಟು ಛಾಂದೋಗ್ಯದಲ್ಲಿ* ಶ್ವೇತಕೇತುವಿಗೆ ಅವನ ತಂದೆ ವಿವರಿಸಿ

---

* "ಯಥಾ ಸೋಮ್ಯೈಕೇನ ಮೃತ್ ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾದ್ವಾಚಾऽऽರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ ಯಥಾ ಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾದ್ವಾಚಾऽऽರಂಭಣಂ ವಿಕಾರೋ ನಾಮಧೇಯಂ ಲೋಹಮಿತ್ಯೇವ ಸತ್ಯಂ ಯಥಾ ಸೋಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾದ್ವಾಚಾऽऽರಂಭಣಂ ವಿಕಾರೋ ನಾಮಧೇಯಂ ಕೃಷ್ಣಾಯಸಮಿತ್ಯೇವ ಸತ್ಯಮೇವಂ ಸೋಮ್ಯ ಸ ಆದೇಶೋ ಭವತೀ"

ಮಣ್ಣಿನ ಹೆಂಟೆಯು ಗೊತ್ತಾದರೆ ಮಣ್ಣಿಂದಾದ ವಸ್ತುಗಳೆಲ್ಲವನ್ನು ತಿಳಿದುಕೊಳ್ಳಬಹುದು. ಚಿನ್ನದ ಗಟ್ಟಿಯು ಗೊತ್ತಾದರೆ ಚಿನ್ನದಿಂದಾದ ವಸ್ತುಗಳನ್ನೆಲ್ಲ ತಿಳಿದುಕೊಳ್ಳಬಹುದು. ಒಂದು ಉಗುರು ಕತ್ತಿಯು ಗೊತ್ತಾದರೆ ಕಬ್ಬಿಣದಿಂದಾದ ಎಲ್ಲ ವಸ್ತುಗಳನ್ನೂ ತಿಳಿಯಬಹುದು. ಹಾಗೆಯೇ ಬ್ರಹ್ಮವೊಂದನ್ನು ತಿಳಿದರೆ ಅದರಂಶವನ್ನೊಳಗೊಂಡ ಚರಾಚರ ವನ್ನೆಲ್ಲ ತಿಳಿಯಬಹುದೆಂಬರ್ಥ. ಮೇಲಿನ ಉದಾಹರಣೆಗಳಲ್ಲಿ ಮಣ್ಣಿನ, ಚಿನ್ನದ, ಕಬ್ಬಿಣದ ಅಂಶವನ್ನು ಬಿಟ್ಟು ಅವುಗಳಿಂದಾದ ಪದಾರ್ಥಗಳಲ್ಲಿ ಉಳಿದುದು ಬರಿಯ ನಾಮರೂಪ ಮಾತ್ರವೆಂದಾಯಿತು. ಆದರೆ ಅವುಗಳಲ್ಲಿ ಮಣ್ಣಿನ, ಚಿನ್ನದ, ಕಬ್ಬಿಣದ ಅಂಶವಿರುವಂತೆ ಚರಾಚರಗಳಲ್ಲಿ ಪರಮಾತ್ಮನ ಅಂಶವಿದೆ. ಆದುದರಿಂದಲೇ ಭಗವದ್ಗೀತೆಯಲ್ಲಿ "ಮಮೈವಾಂಶೋ ಜೀವ ಲೋಕೇ ಜೀವ ಭೂತಸ್ಸನಾತನಃ" ಎಂದು ಹೇಳಿದೆ. "ಅಂಶೋ ನಾನಾವ್ಯಪದೇಶಾತ್" ಎಂಬ ಬ್ರಹ್ಮಸೂತ್ರದ ತಾತ್ಪರ್ಯವೂ ಇದೆ. ಬ್ರಹ್ಮಸೂತ್ರದ ಈ ನಿಲುವನ್ನು ಸ್ಥಾಪಿಸಹೋಗುವುದು ದೀರ್ಘ ಲೇಖನಕ್ಕೆ ಅವಕಾಶ ಮಾಡಿಕೊಂಡಂತಾಗುವುದು. ರಾಧಾಕೃಷ್ಣರವರು ಅವರ ಇಂಡಿಯನ್ ಫಿಲಾಸಫಿಯ ಎರಡನೆಯ ಭಾಗದಲ್ಲಿ ವೇದಾಂತಸೂತ್ರ ವಿಷಯದಲ್ಲಿ ಇಂಗ್ಲೀಷಿನಲ್ಲಿ ಹೇಳಿರುವ ನಾಲ್ಕು ಮಾತುಗಳ ಸರಳಾರ್ಥವಿದು:

ಪರಬ್ರಹ್ಮವು ಜಗತ್ತಿಗೆ ನಿಮಿತ್ತೋಪಾದಾನಕಾರಣವಾಗಿದೆ. ಎಲ್ಲವು ಗಳ ಸೃಷ್ಟಿಕರ್ತನು ಪರಮಾತ್ಮನು ; ಮಣ್ಣು ಅಥವಾ ಚಿನ್ನವು ಅದರಿಂದ ಮಾಡಿದ ಪದಾರ್ಥಗಳಾಗಿ ಅವು ಪರಿವರ್ತನೆಗೊಳ್ಳುವಂತೆ ಪರಮಾತ್ಮತತ್ತ್ವವು ಸಕಲ ಪದಾರ್ಥಗಳಾಗಿ ಪರಿವರ್ತನಗೊಳ್ಳುವುದು.... ಮಣ್ಣಿನ ಮಡಕೆಯೂ ಮಣ್ಣೂ ಅನ್ಯವಲ್ಲ ; ಹಾಗೆಯೇ ಬ್ರಹ್ಮವೂ ಜಗತ್ತೂ ಅನ್ಯವಲ್ಲ.... ಛಾಂದೋಗ್ಯದಲ್ಲಿ ಕಾರಣ ಕಾರ್ಯಗಳಿಗೆ ಕೊಟ್ಟಿರುವ ಉದಾಹರಣೆಗಳು ಮಣ್ಣು, ಚಿನ್ನ, ಕಬ್ಬಿಣ ಮತ್ತು ಅವುಗಳಿಂದ ಮಾಡಿದ ಪದಾರ್ಥಗಳು ; ರಜ್ಜು ಮತ್ತು ಸರ್ಪ ಅಥವಾ ಶುಕ್ತಿ ಮತ್ತು ರಜತ ಇವುಗಳ ಉದಾಹರಣೆಯು ಕೊಡಲ್ಪಟ್ಟಿಲ್ಲ. ಬ್ರಹ್ಮನ ಪರಿಣಾಮದಿಂದಾಗಿರುವುದ ರಿಂದ, ಅಂತ್ಯವುಳ್ಳ ಪದಾರ್ಥಗಳು ಸಹ ಸತ್ಯವಾದುವೆ. ಬ್ರಹ್ಮವು ಜಗತ್ತಿನ

ಉಪಾದಾನ ಕಾರಣವೆಂಬ ಮಾತು ಜಗತ್ತು ಬ್ರಹ್ಮದ ಪರಿಣಾಮ ದನ್ನು ತೋರಿಸುತ್ತದೆ. ಜಗತ್ತು ಬರಿಯ ಮಾಯೆಯಲ್ಲ, ಅಥವಾ ಕನಸಿ ತೋರಿಕೆಯಲ್ಲ. ಹಾಗಿರದೆ, ಅದು ಬ್ರಹ್ಮದಲ್ಲಿಯೇ ಹುಟ್ಟಿ ಬ್ರಹ್ಮದ ಜೀವಿಸಿ ಬ್ರಹ್ಮದಲ್ಲಿಯೇ ಲಯಹೊಂದುವ ಸತ್ಯವಾದ ವಸ್ತು. ನಿಷ್ಕಲ ಪರಬ್ರಹ್ಮಕ್ಕೆ ಸೃಷ್ಟಿ ಕ್ರಿಯಾಶಕ್ತಿಯು ಅಗ್ನಿಗೆ ದಾಹಕಶ ಹೇಗೋ ಹಾಗೆ ಎಂಬುದು ಬಾದರಾಯಣರ ಅಭಿಪ್ರಾಯ."*

ಶ್ರೀ ಶಂಕರ ರಾಮಾನುಜಾದಿಗಳು ತಮ್ಮ ತಮ್ಮ ಸಿದ್ಧಾಂತಸ್ಥಾ ಗಾಗಿ ವೇದಾಂತಸೂತ್ರವನ್ನು ಆಯಾ ಸಿದ್ಧಾಂತದ ಕಡೆಗೆ ಎಳೆದೆಳೆದು ಬರೆದಿರುವರು. ಯಾವ ಸಿದ್ಧಾಂತವನ್ನಾಗಲಿ ಸ್ಥಾಪಿಸಬೇಕೆಂದು ದಿರುವ ಶ್ರೀ ರಾಧಾಕೃಷ್ಣನ್‌ರವರು ವೇದಾಂತ ಸೂತ್ರದ ವಿಷ ಸೂಚಿಸಿರುವ ಬಾದರಾಯಣರ ಅಭಿಪ್ರಾಯವು ಏನೆಂಬುದು ವಚನ ಅಭಿಪ್ರಾಯದಂತೆಯೇ ಇರುವುದು ಗಮನಾರ್ಹ.

---

*"Brahman is the material cause as well as the instrumental cause of the world. Brahman is the creator of things, as clay or gold becomes things of clay or of gold. Brahman and the world are not different (ananya) even as the clay pot is not different from clay.... The instances of cause and effect given in the Chandogya Upanishad are earth, gold and iron and things made of them and not rope and snake or shell and silver. Finite things are real determinations of Brahman. The statement that Brahman is the material cause of the world suggests that the world is a modification of the substance of Brahman. The world is not an illusion a dreamlike structure but a real positive something which has its origination, existance and absorption in Brahman. Badarayana believes that the power of creation belongs to the pure stainless Brahman as heat belongs to fire".

ಮೋಕ್ಷದಲ್ಲಿ ಜೀವಬ್ರಹ್ಮರು ಜಲದಲ್ಲಿ ಜಲದ ಕಣವು ಬೆರೆದಂತೆ ಬೆರೆದು ಹೋಗಿ ಪೂರ್ಣವಾದ ಅದ್ವೈತವೇರ್ಪಡುವುದೆಂಬುದೇ ವಚನಕಾರರ ಸಿದ್ಧಾಂತ. ಇದು ಶಾಂಕರಸಿದ್ಧಾಂತದಂತೆಯೇ ಇದೆಯೆನ್ನಬಹುದು. ಸಿದ್ಧಾಂತಶಿಖಾಮಣಿಯಲ್ಲಿ[1] ಹೇಳಿದಂತೆ, ಜಲದಲ್ಲಿ ಜಲವೂ, ಬೆಂಕಿಯಲ್ಲಿ ಬೆಂಕಿಯೂ ಬೆರೆದಂತೆ ಜೀವನು ಪರಶಿವಬ್ರಹ್ಮದಲ್ಲಿ ಬೆರೆದು ಅವಿಭಾಗವಾಗುವನು. ಮುಂಡಕೋಪನಿಷತ್ತಿನಲ್ಲಿ[2] ಹೇಳಿದಂತೆ ನದಿಗಳು ಸಮುದ್ರವನ್ನು ಹೊಕ್ಕಮೇಲೆ ಇದು ಸಮುದ್ರದ ನೀರು, ಇದು ನದಿಯ ನೀರು ಎಂದು ಹೇಳಲಾಗುವುದಿಲ್ಲ. ನದಿಯ ನಾಮರೂಪಗಳು ಅಳಿದುಹೋಗಿ ನೀರಿನಲ್ಲಿ ನೀರು ಬೆರೆಯುವುದು. ಹಾಗೆಯೇ ಮುಕ್ತಿಯಲ್ಲಿ ಜೀವನು ಶಿವನಲ್ಲಿ ಬೆರೆಯುವನೆಂದು ಭಾವ "ಲಿಂಗವ ಪೂಜಿಸಿ ಫಲವೇನಯ್ಯಾ, ಕೂಡಲಸಂಗಮದೇವರ ಪೂಜಿಸಿ ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ ?" ಎಂದು ಬಸವಣ್ಣನವರು ಹೇಳಿರುವುದರಲ್ಲಿಯೂ ಇದೇ ಭಾವವಿದೆ. ಮೋಕ್ಷಸ್ಥಿತಿಯನ್ನು ವಿವರಿಸುವ ಕೆಲವು ವಚನಗಳಿವು :

"ಏನೆಂಬೆನೇನೆಂಬೆನೊಂದೆರಡಾದುದ! ಏನೆಂಬೆನೇನೆಂಬೆನೆರಡೊಂದಾದುದ! ಅವಿರಳ ಘನಲಿಂಗೈಕ್ಯವ ಮಹಾದಾನಿ ಕೂಡಲಸಂಗಮದೇವ ತಾನೆ ಬಲ್ಲ."

"ಕರ್ಪುರದ ಗಿರಿಯ ಉರಿಯು ಹಿಡಿದೊಡೆ ಇದ್ದಲಿಯುಂಟೆ ? ಮಂಜಿನ ಶಿವಾಲಯಕ್ಕೆ ಬಿಸಿಲಿನ ಕಳಶವುಂಟೆ ? ಗುಹೇಶ್ವರನೆಂಬ ಲಿಂಗವನರಿದು ಮರಳಿ ನೆನೆಯಲುಂಟೆ ?"

"ಬಯಲು ಬಯಲು ಬೆರೆದಲ್ಲಿ ಮೇರೆಯುಂಟೆ ಅಯ್ಯಾ ? ಕ್ಷೀರ ಕ್ಷೀರ ಕೂಡಿದಲ್ಲಿ ಮರಳಿ ರೂಹಿಸಿ ಹಿಡಿಯಲುಂಟೆ ಅಯ್ಯಾ ನಿಮ್ಮೊಳಿಡೆವೆರದ ನಿಜೈಕ್ಯನ ಕುರುಹು ಮರಳಿ ತೋರಲುಂಟೆ ಅಯ್ಯಾ ಅಖಂಡೇಶ್ವರ."

---

1. ಜಲೇ ಜಲಮಿವನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ ।
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥

2. ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽಸ್ತಂಗಚ್ಛಂತಿ
ನಾಮರೂಪೇ ವಿಹಾಯ ।
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಂ
ಪುರುಷಮುಪೈತಿ ದಿವ್ಯಂ ॥

# ವಚನೋಪನಿಷತ್ತುಗಳಲ್ಲಿ ಪಾರಿಭಾಷಿಕ ಶಬ್ದಗಳು

## ವಚನೋಪನಿಷದ್ ವಾಙ್ಮಯಗಳಲ್ಲಿ ಒಂದು ಇನ್ನೊಂದರ ಮೇಲೆ ಬೆಳಕು ಬೀರುವುದು

ಉಪನಿಷದ್ ವಾಙ್ಮಯದಲ್ಲಿ ಪ್ರತಿಪಾದಿತವಾದ ಸಿದ್ಧಾಂತ ವಚನವಾಙ್ಮಯದಲ್ಲಿ ಮುಂದುವರಿದಿದೆಯಾದ ಕಾರಣ, ಈಶಾನ್ಯ ಉಪನಿಷತ್ತುಗಳ ಸಾರಸರ್ವಸ್ವವೇನೆಂಬುದನ್ನು ವಿಶದೀಕರಿಸಲು ಉಪನಿಷತ್ತುಗಳಲ್ಲಿ ಹೇಳಿರುವುದನ್ನು ವಚನವಾಙ್ಮಯದೊಡನೆ ತುಲನೆ ಮಾಡಬೇಕಾಗುವುದು. ವಚನ ವಾಙ್ಮಯದ ವಿಷದೀಕರಣೆಯಲ್ಲಿ ಸಂದೇಹ ಬಂದಾಗ ಉಪನಿಷದ್ ವಾಙ್ಮಯದ ಬೆಳಕು ಅವಶ್ಯವಾಗುವುದು. ಹಾಗೆಯೇ ಉಪನಿಷದ್ ವಾಙ್ಮಯದ ವಿಶದೀಕರಣದಲ್ಲಿ ಸಂದೇಹದ ಮೇಲೆ ದ್ದಾಗ ವಚನ ವಾಙ್ಮಯದಿಂದ ಹೊಸ ಬೆಳಕು ಬಿದ್ದು ಸಂದೇಹವು ಅಳಿಯುವುದು. ಆದುದರಿಂದ ವಚನೋಪನಿಷದ್ ವಾಙ್ಮಯದ ತುಲನಾತ್ಮಕ ವಿವೇಚನೆಯು ಅತ್ಯವಶ್ಯ. ಇಂತಹ ತುಲನಾತ್ಮಕ ವಿವೇಚನೆಯು ಮಾಡುವ ಮೊದಲು ಉಭಯ ವಾಙ್ಮಯದಲ್ಲೂ ಉಪಯೋಗಿಸಲ್ಪಟ್ಟ ಪಾರಿಭಾಷಿಕ ಪದಗಳ ವಿವರಣೆಯನ್ನು ತಿಳಿಯದೆ ಮುಂದುವರಿಯುವುದು ಸುಲಭವಲ್ಲ. ಈ ಪಾರಿಭಾಷಿಕ ಪದಗಳು ಹೇಗೆ ರೂಪಿಸಲ್ಪಟ್ಟವು ಎಂಬುದನ್ನು ಆಲೋಚಿಸುವಾಗ ಪರಾತ್ಪರದ ಕಲ್ಪನೆಯು ಹೇಗೆ ವಿಕಾಸ ವಾಯಿತೆಂಬುದು ಗೋಚರವಾಗುವುದು.

## ಪಾರಿಭಾಷಿಕ ಪದಗಳು ಉದ್ದೇಶಪೂರ್ವಕವಾಗಿ ರೂಪಿಸಲ್ಪಟ್ಟವೆ

ಋಗ್ವೇದದ ದಶಮಮಂಡಲದಲ್ಲಿನ ನಾಸದೀಯ ಸೂಕ್ತದಲ್ಲಿ ಪರಾತ್ಪರವನ್ನು 'ಆಭು' ಎಂಬ ಪದದಿಂದ ಕರೆಯಲಾಗಿದೆ. ಉಪನಿಷ

ವಾಙ್ಮಯದಲ್ಲಿ ಅದೇ ಪರಾತ್ಪರವನ್ನು ಸತ್, ಅಸತ್ ಅಮೃತ, ಬ್ರಹ್ಮ, ಶಿವ, ಆಕಾಶ, ಪ್ರಾಣ ಮೊದಲಾದ ಪದಗಳು ನಿರ್ದೇಶಿಸುತ್ತವೆ. ಹಾಗೆಯೇ ವಚನ ವಾಙ್ಮಯದಲ್ಲಿ ಶೂನ್ಯ, ಬಯಲು, ನಿರ್ಬಯಲು, ಗಗನ, ಲಿಂಗ ಮೊದಲಾದ ಪದಗಳು ಪರಾತ್ಪರವನ್ನು ನಿರ್ದೇಶಿಸಲು ಉಪಯೋಗಿಸಲ್ಪಟ್ಟಿವೆ. ಈ ತೆರದ ಪದಗಳೇ ಪಾರಿಭಾಷಿಕ ಪದಗಳು. ಇವು ಏನೋ ಹೇಗೊ ಆರಿಸಿಕೊಂಡವಲ್ಲ. ಇವನ್ನು ಉಪಯೋಗಿಸಿದವರ ಪರಾತ್ಪರದ ಕಲ್ಪನೆಗೆ ಅನುಸಾರವಾಗಿ ಇವು ರೂಪಿಸಿಕೊಂಡವಾಗಿವೆ. ಹಿಂದೆ ರೂಪಿಸಲ್ಪಟ್ಟಿದ್ದ ಪಾರಿಭಾಷಿಕ ಪದಗಳನ್ನು ಬಿಟ್ಟು ಬೇರೆ ಪಾರಿಭಾಷಿಕಪದಗಳನ್ನು ಏಕೆ ವಚನಕಾರರು ರೂಪಿಸಿಕೊಂಡರೆಂಬುದು ಗಮನಾರ್ಹ ಅಂಶವಾಗಿದೆ.

## 'ಸತ್' ಮತ್ತು 'ಸತ್ಯ' ಪದಗಳ ಯೋಜನೆ

ಪ್ರಾಚೀನ ಆರ್ಯರು ಇಂದ್ರಾದಿ ನೈಸರ್ಗಿಕ ದೇವತೆಗಳನ್ನು ಯಜ್ಞಯಾಗಾದಿಗಳಿಂದ ತೃಪ್ತಿಪಡಿಸುತ್ತಿದ್ದವರು ಮನುಷ್ಯನಂತೆ ಸುಖದುಃಖಕ್ಕೊಳಗಾದ ಈ ದೇವತೆಗಳಲ್ಲಿ ಬೇಸರ ಹುಟ್ಟಿ ಏಕದೇವತೋಪಾಸನೆಯ ಕಡೆಗೆ ಮನಸ್ಸುಮಾಡಿದರಷ್ಟೆ. ವ್ಯಕ್ತಸ್ವರೂಪವುಳ್ಳ ದೇವನೊಬ್ಬನಲ್ಲಿ ಸಹಾ ಅವರ ಮನಸ್ಸು ನಿಲ್ಲದೆ. ಅವ್ಯಕ್ತ ಚೈತನ್ಯದ ಕಲ್ಪನೆಯಾಯಿತು "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬ ಉದ್ಗಾರದಲ್ಲಿ ಸಹಾ ಅವ್ಯಕ್ತ ತತ್ತ್ವದ ಕಲ್ಪನೆಯಿದೆ. 'ಸತ್' ಎಂಬ ಪದವು ಯಾವ ಒಂದು ವ್ಯಕ್ತಿಯನ್ನು ನಿರ್ದೇಶಿಸದು ; ಬ್ರಹ್ಮವು ಪರಿಮಿತ ಆಕಾರವುಳ್ಳದ್ದೂ ಅಲ್ಲ ; ಗಂಡೂ ಅಲ್ಲ ; ಹೆಣ್ಣೂ ಅಲ್ಲ "ಅಪಾಣಿ ಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ"—ಎಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿದಂತೆ: ಪರಾತ್ಪರವು ಕಾಲಿಲ್ಲದೆ ನಡೆವುದು, ಕೈಯಿಲ್ಲದೆ ಹಿಡಿವುದು, ಕಣ್ಣಿಲ್ಲದೆಕಾಂಬುದು, ಕಿವಿಯಿಲ್ಲದೆ ಕೇಳುವುದು—ಎಂಬ ಕಲ್ಪನೆ ಉಪನಿಷತ್ತುಗಳಲ್ಲಿದೆ.

ರಾಧಾಕೃಷ್ಣನ್‌ರವರ Indian Philosophy ಎಂಬ

ಗ್ರಂಥದಲ್ಲಿ ಹೇಳಿರುವಂತೆ[1] ಏಕ ದೇವತೋಪಾಸನೆಯಲ್ಲೂ ಆರ್ಯಋಷಿಗಳಿಗೆ ತೃಪ್ತಿಯಾಗಲಿಲ್ಲ. ಏಕೆಂದರೆ ದೇವತೆಯೆಂದರೆ ಗಂಡೋ ಹೆಣ್ಣೋ ಆದ ಆಕಾರವುಳ್ಳದ್ದು. ಆದುದರಿಂದ 'ಸತ್'ಪದದ ಯೋಜನೆಯಾಯಿತು. ಗಂಡೂ ಅಲ್ಲದ ಹೆಣ್ಣೂ ಅಲ್ಲದ ನಿರಾಕಾರ ವಸ್ತುವಿಗೆ "ಸತ್" ಎಂಬ ಪದವು ಸೂಕ್ತವಾದುದೇ. ಆದುದರಿಂದಲೇ ಬಹಳ ಹಳೆಯದೆನಿಸಿದ ಛಾಂದೋಗ್ಯೋಪನಿಷತ್ತಿನಲ್ಲಿಯೇ "ಸದೇವ ಸೋಮ್ಯೇದಮಗ್ರ ಆಸೀತ್" ಎಂದರೆ ಎಲ್ಲಕ್ಕೂ ಮೊದಲೇ 'ಸತ್' ಇದ್ದಿತೆಂದು ಹೇಳಿದೆ. 'ಸತ್' ಎಂಬ ಪದವು ಸತ್ಯವಾದುದು--ಎಂಬ ಅರ್ಥವುಳ್ಳದ್ದು. ಈ ಶಾಸ್ತ್ರದಲ್ಲಿ 'ಸತ್' ಪದಕ್ಕೆ ಬದಲು 'ಸತ್ಯ' ವೆಂಬ ಪದವೇ ಉಪಯೋಗಿಸಲ್ಪಟ್ಟಿದೆ. ಆದರೆ ಸತ್ಯವಾದುದೆನ್ನುವಾಗ ವ್ಯಕ್ತವೂ ಗ್ರಾಹ್ಯವೂ ಆದುದೆಂಬ ಭಾವನೆಯು ಬರುವುದು. ಆದುದರಿಂದ ಸತ್ಯವೆಂಬ ಪದವು ವ್ಯಕ್ತವಾದ ಜಗತ್ತಿನ ವಿಷಯಕ್ಕೆ ಹೆಚ್ಚು ಚೆನ್ನಾಗಿ ಅನ್ವಯಿಸುವುದು. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಅಮರವಾದ ಪರಾತ್ಪರವನ್ನು 'ಅಮೃತ' ಎಂಬ ಪದದಿಂದ ನಿರ್ದೇಶಿಸಿರುವುದೂ ವ್ಯಕ್ತಜಗತ್ತನ್ನು ಸತ್ಯವೆಂಬ ಪದದಿಂದ ನಿರ್ದೇಶಿಸಿರುವುದೂ ಹೆಚ್ಚು ಸೂಕ್ತವು. "ಅಮೃತಂ ಸತ್ಯೇನ ಛನ್ನಂ" (ಬೃ ೧-೬-೩) ಎಂದರೆ ಅಮೃತವಾದ ಪರಾತ್ಪರವು ಸತ್ಯಜಗತ್ತಿನಿಂದ ಮುಚ್ಚಲ್ಪಟ್ಟಿದೆಯೆಂದು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹೇಳಿರುವುದು "ತುಚ್ಛೇ ನಾಭ್ವಪಿಹಿತಂ" ಎಂದು ನಾಸದೀಯ ಸೂಕ್ತದಲ್ಲಿ ಹೇಳಿರುವುದನ್ನು ಜ್ಞಾಪಕಕ್ಕೆ ತರುವುದು. 'ಆಭು' ಎಂದರೆ ಪರಾತ್ಪರವು 'ತುಚ್ಛೇನ' ಎಂದರೆ ನಾಮರೂಪಾತ್ಮಕ ಮಾಯಾ ಪ್ರಪಂಚದಿಂದ, 'ಅಪಿಹಿತಂ' ಎಂದರೆ ಮುಚ್ಚಲ್ಪಟ್ಟಿದೆಯೆಂದು ಅರ್ಥ. "ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ"

---

1. "Monotheism, to which a large part of humanity even today clings failed to satisfy the later Vedic thinkers. They applied to the central principle the neuter term 'Sat' to show that it is above sex. They were convinced that there was something real of which Agni, Indra Varuna, etc. were only forms or names. That something was not many but one Impersonal"

ಎಂದು ಈಶಾವಾಸ್ಯ ಉಪನಿಷತ್ತಿನಲ್ಲಿ ಹೇಳಿರುವುದರಲ್ಲಿ ಸತ್ಯದ ಮುಖವು ಎಂದರೆ ಕಾರಣಬ್ರಹ್ಮದ ಮುಖವು ಹಿರಣ್ಮಯ ಪಾತ್ರೆಯಿಂದ ಎಂದರೆ ಕಾರ್ಯ ಬ್ರಹ್ಮವಾದ ಹಿರಣ್ಯಗರ್ಭನಿಂದ 'ಅಪಿಹಿತಂ' ಎಂದರೆ ಮುಚ್ಚಲ್ಪಟ್ಟಿದೆಯೆಂದು ಅರ್ಥ. ಅಂತು, ಅವ್ಯಕ್ತವಾದ ಪರಾತ್ಪರಕ್ಕೆ ಸತ್ಯವೆಂದು ಇಲ್ಲಿ ಹೇಳಿದೆ. ಆದರೆ ಮೇಲೆ ಹೇಳಿದಂತೆ ಬೃಹದಾರಣ್ಯಕದಲ್ಲಿ 'ಅಮೃತಂ ಸತ್ಯೇನ ಛನ್ನಂ' ಎಂದು (೧-೬-೩) ಹೇಳಿರುವುದರಲ್ಲಿ, ಸತ್ಯವೆಂದರೆ ವ್ಯಕ್ತವೂ ಗ್ರಾಹ್ಯವೂ ಆದ ನಾಮರೂಪಾತ್ಮಕ ಜಗತ್ತು, ಅಮೃತವೆನಿಸಿದ ಪರಾತ್ಪರವನ್ನಾಚ್ಛಾದಿಸಿದೆಯೆಂದಾಯಿತು. ಪರಾತ್ಪರವನ್ನು ಅದೇ ಉಪನಿಷತ್ತಿನಲ್ಲಿ "ಸತ್ಯಸ್ಯಸತ್ಯ"ವೆಂದು ಕರೆಸಿದೆ. (೧೧-೧-೨೦). ವ್ಯಕ್ತವೂ ಗ್ರಾಹ್ಯವೂ ಆದ ಈ ಸತ್ಯ ಜಗತ್ತಿಗೆ ಆಧಾರವಾದುದನ್ನು "ಸ್ಯತಸ್ಯ ಸತ್ಯ" ಎಂದರೆ ಸತ್ಯದ ಸತ್ಯವೆಂದುದು ಸೂಕ್ತವೇ ಸರಿ. ಆದುದರಿಂದ "ಸದೇವ ಸೋಮ್ಯೇದಮಗ್ರ ಆಸೀತ್" ಎಂಬಲ್ಲಿ ಹೇಳಿರುವಂತೆ ಪರಾತ್ಪರವನ್ನು "ಸತ್ಯ"ವೆಂದು ಕರೆವುದು ಕೆಲವು ಋಷಿಗಳಿಗೆ ಸೂಕ್ತವಾಗಿ ಕಾಣಲಿಲ್ಲ.

## "ಅಸತ್" ಪದದ ಯೋಜನೆ

"ಸತ್" ಅಲ್ಲದುದು "ಅಸತ್". ಈ ಪದದ ಪ್ರಯೋಗವೂ ಆಯಿತು. ತೈತ್ತಿರೀಯ ಉಪನಿಷತ್ತಿನಲ್ಲಿ "ಅಸದ್ವಾ ಇದುಮಗ್ರ ಆಸೀತ್, ತತೋ ವೈ ಸದಜಾಯತ'' (೨-೭) ಎಂದರೆ ಮೊದಲು (ಅವ್ಯಕ್ತವಾದ) ಅಸತ್ ಇದ್ದಿತು. ಅದರಿಂದ ಸತ್ (ವ್ಯಕ್ತ ಜಗತ್ತು) ಹುಟ್ಟಿತು ಎಂದು ಹೇಳಿದೆ. ಆದರೆ "ಅಸತ್" ಎಂಬ ಪದದಲ್ಲಿ ಅಭಾವದ ಭಾವನೆಯಿದೆ. ಗೀತೆಯಲ್ಲಿ "ನಾಸತೋ ವಿದ್ಯತೇ ಭಾವಃ" ಎಂದು ಹೇಳಿರುವಂತೆ ಇಲ್ಲದೆಯೇ ಇರತಕ್ಕದುದರಿಂದ ಇರುವುದು ಹೇಗಾಗುವುದು? ಎಂಬ ಪ್ರಶ್ನೆ ಏಳುವುದು.

## 'ಆಭು' ಪದದ ಪ್ರಯೋಗ

ಛಂದೋಗ್ಯೋಪನಿಷತ್ತಿನ ಕಾಲದಲ್ಲಿಯೇ "ಕಥಮಸತಃ ಸಜ್ಜಾಯೇತ" ಎಂದರೆ ಅಸತ್ತಿನಿಂದ ಸತ್ ಹೇಗೆ ಹುಟ್ಟುವುದೆಂಬ ಪ್ರಶ್ನೆಯು ಎದ್ದಿದೆ. ಅಷ್ಟೇ ಏಕೆ? ಈ ತೆರದ ಪ್ರಶ್ನೆಗಳು ನಾಸದೀಯ

ಸೂಕ್ತದ ಕಾಲಕ್ಕೆ ಮೊದಲೇ ಎದ್ದಿರಬೇಕು. ಇದರ ಪರಿಹಾರಕ್ಕೆಂದೇ ಎನ್ನುವಂತೆ ನಾಸದೀಯ ಸೂಕ್ತವು "ನಾಸದಾಸೀತ್ ನೋಸದಾಸೀತ್" ಎಂದರೆ ಸತ್ತಾಗಲೀ ಅಸತ್ತಾಗಲೀ ಸೃಷ್ಟಿಗೆ ಮೊದಲು ಇರಲಿಲ್ಲವೆಂಬ ಹೇಳಿಕೆಯಿಂದಲೇ ಪ್ರಾರಂಭವಾಗಿದೆ. ಆದುದರಿಂದಲೇ ಅದರಲ್ಲಿ ಪರತರ ತತ್ತ್ವವನ್ನು ಸತ್ತೆಂದಾಗಲೀ ಅಸತ್ತೆಂದಾಗಲೀ ಕರೆಯದೆ, "ಆಭು" (void) ಎಂಬ ಪದದಿಂದ ಕರೆದಿದೆ. ಉಪನಿಷತ್ತುಗಳಲ್ಲಿ "ಬ್ರಹ್ಮ"ವೆಂದು ಕರೆದಿರುವುದೂ ಇದೇ ತತ್ತ್ವವನ್ನೇ; ಅದನ್ನು "ಪ್ರಾಣ" "ಆಕಾಶ" ಮುಂತಾದ ಪದಗಳಿಂದ ಕರೆದಿರುವುದೂ ಉಂಟು. "ಶೂನ್ಯ"ವೆಂಬ ಪದವು ಬೌದ್ಧರ ಕಾಲದಲ್ಲಿಯೇ ಪ್ರಯೋಗಿಸಲ್ಪಟ್ಟಿತು. ಬಯಲು, ಗಗನ, ಶೂನ್ಯ, ಲಿಂಗ ಮೊದಲಾದ ಪದಗಳು ವಚನಕಾರರ ಕಾಲದಲ್ಲಿ ಬಳಕೆಗೆ ಬಂದವು. ಈ ತೆರದ ಪದಪ್ರಯೋಗದ ಔಚಿತ್ಯವು ವಿಚಾರಾರ್ಹವಾಗಿದೆ.

## ಪದಗಳಲ್ಲಿರುವ ಯೋಗಿಕಶಕ್ತಿ

ಪದಪ್ರಯೋಗದಲ್ಲಿ ಔಚಿತ್ಯದ ಕಡೆ ಗಮನವಿರಬೇಕು. ಪಕ್ಷಿಯೆಂದರೂ ಖಗವೆಂದರೂ ಹಕ್ಕಿಯೇ. ಚತುಷ್ಪದಗಳಲ್ಲಿಲ್ಲದಿರುವ ರೆಕ್ಕೆಯುಳ್ಳುದೆಂಬ ದೃಷ್ಟಿಯಿಂದ ಪಕ್ಷಿಯೆಂಬ ಪದವು ಸಾರ್ಥಕವೆನಿಸುವುದು; ಆಕಾಶಗಮನವುಳ್ಳುದೆಂಬ ದೃಷ್ಟಿಯಿಂದ ಖಗವೆಂಬ ಪದವು ಯೋಗ್ಯವಾಗುವುದು. ಶೂರ್ಪನಖಿ ಎಂಬ ಅಬಲೆ, ಹಿಡಂಬಿ ಎಂಬ ಶಶಿಮುಖಿ—ಈ ಪದಗಳು ಸೂಕ್ತವಲ್ಲ. ಹೀಗೆ ಪದಗಳಲ್ಲಿರುವ ಯೋಗಿಕ ಶಕ್ತಿಯನ್ನು ಸದುಪಯೋಗಪಡಿಸಿಕೊಳ್ಳಬೇಕು. ಸಾಮಾನ್ಯ ಸಾಹಿತ್ಯದಲ್ಲಿಯೇ ಪದಪ್ರಯೋಗದ ಔಚಿತ್ಯವು ಅವಶ್ಯವಾಗಿರುವಲ್ಲಿ, ವೇದಾಂತದಂತಹ ಗಹನ ವಿಚಾರದಲ್ಲಿ ಸೂಕ್ತ ಪದಪ್ರಯೋಗಕ್ಕೆ ಪ್ರಾಮುಖ್ಯತೆ ಇದ್ದೇ ಇರಬೇಕು. ವ್ಯಕ್ತವಾದುದೇನೂ ಇಲ್ಲದುದು ಎಂಬರ್ಥದಲ್ಲಿ ಟೊಳ್ಳು ಎಂಬರ್ಥವುಳ್ಳ "ಅಭು" ಎಂಬ ಪದದ ಪ್ರಯೋಗವು ಸಾರ್ಥಕವಾದುದೇ ಸರಿ. ಇದೇ ರೀತಿ "ಶೂನ್ಯ" "ಬಯಲು" ಮೊದಲಾದ ಪದಗಳ ಪ್ರಯೋಗವಾದರೂ ಸರಿಯೆನಿಸುವುದು.

## ಬ್ರಹ್ಮ ಪದ ಪ್ರಯೋಗ

ಋಗ್ವೇದದಲ್ಲಿ ಬ್ರಹ್ಮವೆಂಬ ಪದವು ಪರಬ್ರಹ್ಮವೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿಲ್ಲ. ಅದು ಮಂತ್ರ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಮಂತ್ರ ಅಥವಾ ಪ್ರಾರ್ಥನೆಗೆ ಅಧಿಕಾರಿ ಬೃಹಸ್ಪತಿ ಅಥವಾ ಬ್ರಹ್ಮಣಸ್ಪತಿ[1] ಜಗತ್ಕಾರಣವಾದುದು ಎಂಬ ಅರ್ಥದಲ್ಲಿ ಉಪನಿಷತ್ತುಗಳಲ್ಲಿ "ಬ್ರಹ್ಮ" ಎಂಬ ಪದವನ್ನು ಪ್ರಯೋಗಿಸಿರುವುದಕ್ಕೆ ಕಾರಣವಿದೆ. ಯಾವುದರಿಂದ ಈ ಭೂತಗಳೆಲ್ಲವೂ ಹುಟ್ಟುವುವೋ, ಯಾವುದರ ಆಧಾರದಿಂದ ಜೀವಿಸುವುವೋ, ಯಾವುದರ ಕಡೆಗೆ ಹೋಗಿ ಅದರಲ್ಲಿ ಲಯ ಹೊಂದುವುವೋ, ಅದೇ ಬ್ರಹ್ಮವೆಂದು ವಿಚಾರಮಾಡಬೇಕೆಂಬುದಾಗಿ ತೈತ್ತಿರೀಯ ಉಪನಿಷತ್ತಿನಲ್ಲಿ[2] ಹೇಳಿದೆ. ಎಲ್ಲವೂ ಪರತತ್ತ್ವದಿಂದ ಹೊರ ಹೊಮ್ಮುವುದೆಂಬ ದೃಷ್ಟಿಯಿಂದ ಬ್ರಹ್ಮವೆಂಬ ಪದವು ಸಾರ್ಥಕವಾಗುವುದು. "ಬೃಹ್ ವೃದ್ಧೌ" ಎಂಬ ಧಾತುವಿಗೆ ಮನಿನ್ ಪ್ರತ್ಯಯವು ಸೇರಿ "ಬ್ರಹ್ಮ" ವೆಂದಾಗುವುದು. "ತಪಸಾ ಚೀಯತೇ ಬ್ರಹ್ಮ, ತತೋನ್ನಮಭಿಜಾಯತೇ" ಎಂದರೆ ತಪಸ್ಸಿನಿಂದ ಬ್ರಹ್ಮವು ಅಭಿವೃದ್ಧಿ ಹೊಂದಿ ವ್ಯಕ್ತವಾದ ಜಗತ್ತು ಹೊರಹೊಮ್ಮುವುದು ಎಂದು ಮುಂಡಕೋಪನಿಷತ್ತಿನಲ್ಲಿ ಹೇಳಿರುವುದರಿಂದಲೂ ಉಪನಿಷತ್ಕಾರರ ಪರಾತ್ಪರದ ಕಲ್ಪನೆಗೆ "ಬ್ರಹ್ಮ"ವೆಂಬ ಪದವು ಅನುಕೂಲವಾದುದೇ ಸರಿಯೆಂಬುದು ಸ್ಪಷ್ಟ.

---

1. In the Rg Veda 'brahman' is used in the sense of 'sacred knowledge or utterance, a hymn or incantation' the concrete expression of spiritual wisdom.... knowledge. Brahaspathi or Brahmanaspathi is interpreted as the lord of prayer—Page 52 Introduction to Radhakrishnan's 'The Principal Upanishads'.

2. ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ ತದ್ ವಿಜಿಜ್ಞಾಸಸ್ವ ತದ್ಬ್ರಹ್ಮೇತಿ

## "ಗಗನ, ಆಕಾಶ, ಪ್ರಾಣ" ಮೊದಲಾದ ಪದಗಳ ಪ್ರಯೋಗ

ಗಗನದ ಮೇಲೊಂದು ಅಭಿನವ ಗಿಳಿಹುಟ್ಟಿ, ಸ್ವಯಂಸಂಭ್ರಮದಲ್ಲಿ
ಮನೆಯ ಮಾಡಿತ್ತು.
ಒಂದು ಗಿಳಿ ಇಪ್ಪತ್ತೈದು ಗಿಳಿಯಾಯಿತು. ಬ್ರಹ್ಮನಾ ಗಿಳಿಗೆ ಪಂಜರವಾದ;
ವಿಷ್ಣುವಾ ಗಿಳಿಗೆ ಕೂರೆಗೂಳಾದ, ರುದ್ರನಾ ಗಿಳಿಗೆ ಕೋಲುವೋದ....
ಗುಹೇಶ್ವರಾ'

ಅಲ್ಲಮಪ್ರಭುವಿನ ಈ ವಚನದಲ್ಲಿ ಗಗನವೆಂದರೆ ತ್ರಿಮೂರ್ತಿಗಳಿಗೆ ಅತೀತವಾದ ಪರತರತತ್ತ್ವವೇ. ಅದರಿಂದ ಅಭಿನವ ಗಿಳಿ ಎಂದರೆ ಜೀವಾತ್ಮನು ಹುಟ್ಟಿ, ಪಂಚವಿಂಶತಿ ತತ್ತ್ವಗಳು ಆವಿರ್ಭಾವವಾಗಿ ತ್ರಿಮೂರ್ತಿಗಳ ಸೃಷ್ಟಿ ಸ್ಥಿತಿ ಲಯ ಕಾರ್ಯಗಳಿಗೊಳಗಾಗುವುದು ಈ ವಚನದಲ್ಲಿ ಸೂಚಿಸಲ್ಪಟ್ಟಿದೆ. ಪರಬ್ರಹ್ಮವು ನಿರವಯವೆಂಬ ದೃಷ್ಟಿಯಿಂದ ಗಗನವೆಂಬ ಪದವು ಪರತರತತ್ತ್ವಕ್ಕೆ ಸೂಕ್ತವಾದುದು. ಗಗನವೆಂಬ ಪದಕ್ಕೆ ಸಮಾನವಾದ ಆಕಾಶವೆಂಬ ಪದವನ್ನಾದರೂ ಉಪನಿಷತ್ತುಗಳಲ್ಲಿ ಪರತತ್ತ್ವವನ್ನು ನಿರ್ದೇಶಿಸಲು ಉಪಯೋಗಿಸಿರುವುದುಂಟು.

"ಸರ್ವಾಣಿ ಹವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತ್ಯಸ್ತಂಯಂತಿ"

ಎಂದರೆ ಆಕಾಶದಲ್ಲಿಯೇ ಸರ್ವಭೂತಗಳೂ ಹುಟ್ಟಿ ಆಕಾಶದಲ್ಲಿಯೇ ಲಯವಾಗುವುವೆಂದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿವೆ. (ಛಾಂ. ೧-೯-೧) ಆಕಾಶವೆಂದರೆ ಪಂಚಭೂತಗಳಲ್ಲೊಂದಾದ ಆಕಾಶವೇ ? ಅಥವಾ ಪರತರತತ್ತ್ವವನ್ನು ಈ ಪದವು ನಿರ್ದೇಶಿಸುವುದೇ ? ಎಂಬ ಪ್ರಶ್ನೆಗಳು ಏಳುವುವು. ಈ ಪ್ರಶ್ನೆಗಳನ್ನು ಬ್ರಹ್ಮಸೂತ್ರದಲ್ಲಿನ "ಆಕಾಶಸ್ತಲ್ಲಿಂಗಾತ್" ಎಂಬ ಸೂತ್ರವು, ಹಿಂದೆ ಹೇಳಿದಂತೆ ಬಿಡಿಸುವುದು. 'ಅಸ್ಯಲೋಕಸ್ಯ ಕಾಗತಿಃ' ಎಂದರೆ ಈ ಲೋಕಕ್ಕೆ ಗತಿ ಯಾವುದು ಎಂಬ ಪ್ರಶ್ನೆಗೆ ಉತ್ತರವಾಗಿ ಪ್ರವಾಹಣ ಜೈವಲಿಯು 'ಆಕಾಶವೇ ಗತಿ, ಏಕೆಂದರೆ ಈ ಭೂತಗಳೆಲ್ಲವೂ ಆಕಾಶದಲ್ಲಿಯೇ ಹುಟ್ಟಿ ಆಕಾಶದಲ್ಲಿಯೇ ಲಯವಾಗುವುವು' ಎಂದು ಉತ್ತರ ಹೇಳುವನು. ಆದುದರಿಂದ ಹಿಂದೆ ಹೇಳಿದಂತೆ ಆಕಾಶ

ನೆಂದರೆ ಬ್ರಹ್ಮವೆಂದೇ ತಿಳಿಯಬೇಕೆಂಬುದು ಬ್ರಹ್ಮಸೂತ್ರದ ಸಮನ್ವಯ ಸಿದ್ಧಾಂತ; ಅರ್ಥಾತ್ ಬ್ರಹ್ಮಪದವು ಜಗತ್ಕಾರಣಕ್ಕೆ ಹೇಗೆ ಪಾರಿಭಾಷಿಕಪದವೋ ಹಾಗೆಯೇ ಈ 'ಆಕಾಶ' ಎಂಬುದು ಪ್ರವಣ ಜೈವಲಿಯು ಜಗತ್ಕಾರಣವನ್ನು ಹೇಳಲು ರೂಪಿಸಿದ ಪಾರಿಭಾಷಿಕಪದವೆಂದಾಯಿತು 'ಪ್ರಾಣ' ಎಂಬ ಪದವಾದರೂ ಜಗತ್ಕಾರಣಕ್ಕೆ ರೂಪಿಸಿದ ಪಾರಿಭಾಷಿಕ ಪದವೇ ಎನ್ನಬೇಕು. ಏಕೆಂದರೆ—ಛಾಂದೋಗ್ಯೋಪನಿಷತ್ತಿನಲ್ಲಿಯೇ ಪರಬ್ರಹ್ಮವನ್ನು 'ಪ್ರಾಣ'ವೆಂದು ಕರೆದಿರುವುದು, ಪರಬ್ರಹ್ಮವು ಚೈತನ್ಯ ಸ್ವರೂಪವಾದುದೆಂಬ ದೃಷ್ಟಿಯಿಂದಲಿರಬೇಕು. "ಸರ್ವಾಣಿ ಹವಾ ಇಮಾನಿ ಭೂತನಿ ಪ್ರಾಣಮೇವಾಭಿಸಂವಿಶಂತಿ ಪ್ರಾಣಮಭ್ಯುಜ್ಜಿಹ" ಎಂದು ಮೊದಲಾಗಿ ಛಾಂದೋಗ್ಯದಲ್ಲಿ ಹೇಳಿವೆ. ಪ್ರಾಣದಲ್ಲಿಯೇ ಎಲ್ಲವೂ ಹುಟ್ಟಿ ಅದರಿಂದ ಜೀವಿಸಿ ಅದರಲ್ಲಿಯೇ ಲಯವಾಗುವುದೆಂದು ಹೇಳಿರುವುದರಿಂದ ಪ್ರಾಣವೆಂದರೆ ಪರಬ್ರಹ್ಮವೇ—ಎಂದು, "ಅತ ಏವ ಪ್ರಾಣಃ" ಎಂಬ ಸೂತ್ರವು ನಿರ್ಧರಿಸುತ್ತದೆ.

## ಶೂನ್ಯಪದ ಪ್ರಯೋಗ

ಪರಾತ್ಪರವನ್ನು "ಶೂನ್ಯ"ವೆಂದು ಕರೆದಿರುವುದು ವಚನಕಾರರಲ್ಲಿ ಪ್ರಸಿದ್ಧವಾಗಿರುವುದಾದರೂ ಶೂನ್ಯವೆಂಬ ಪದ ಪ್ರಯೋಗವು ಬಹು ಪುರಾತನವಾದುದು. ಶೂನ್ಯ ಶಬ್ದವು ಆಕಾಶ, ಗಗನ, ವ್ಯೋಮ ಮೊದಲಾದ ಪದಗಳಂತಹುದು. ಆಕಾಶಂ, ಗಗನಂ, ಶೂನ್ಯಂ, ಅಂಬರಂ, ವ್ಯೋಮಂ, ಅನಂತಂ ಇವು ಸಮಾನಾರ್ಥಪದಗಳೆಂದು ಕೋಶದಿಂದ ತಿಳಿದು ಬರುವುದು. ಪರಾತ್ಪರವು ಎಲ್ಲಕ್ಕೂ ಆಧಾರವಾಗಿ, ಎಲ್ಲದರ ಒಳಹೊಕ್ಕು, ಎಲ್ಲೆಲ್ಲಿಯೂ ವ್ಯಾಪಿಸಿ, ಅವುಗಳಿಂದ ವಿಕಾರವನ್ನು ಹೊಂದದೆ, ಅನಂತವಾಗಿರುವುದೆಂಬುದನ್ನು ಸೂಚಿಸಲು ಗಗನ, ಶೂನ್ಯ, ವ್ಯೋಮ ಮೊದಲಾದ ಪದಗಳು ಸೂಕ್ತವಾದುವೇ. ಯೋಗ ವಾಸಿಷ್ಠದ ನಿರ್ವಾಣ ಪ್ರಕರಣದಲ್ಲಿ "ಚಿದ್ವ್ಯೋಮೈವಸ್ತ್ಯೈವ ಪರಂ ಶೂನ್ಯಂ" ಎಂದು ಹೇಳಲಾಗಿದೆ.

ಉಪನಿಷತ್ಕಾರರಾಗಲೀ, ವಚನಕರರಾಗಲೀ "ಶೂನ್ಯ" ಪದವನ್ನು

ಪ್ರಯೋಗಿಸುವಾಗ ವ್ಯಕ್ತವಾದುದೇನು, ಎಂದರೆ ಇಂದ್ರಿಯಗವ್ಯವಾದು ದೇನೂ ಇಲ್ಲವೆಂಬುದೇ ಅವರ ಅಭಿಪ್ರಾಯ; ಶೂನ್ಯವೆಂದು ಹೇಳುವುದರಿಂದ ಪರಾತ್ಪರದಲ್ಲಿ ಇಂದ್ರಿಯಾತೀತವಾದ ಚೈತನ್ಯಸ್ಫುರಣೆಯು ಅಭಾವವನ್ನು ಸೂಚಿಸುವ ದೃಷ್ಟಿಯು ಅವರಿಗಿಲ್ಲ.

## ಶಿವಪದ ಪ್ರಯೋಗ

'ಬ್ರಹ್ಮ'ವೆಂಬ ಪದದಲ್ಲಿ ಮೋಕ್ಷದಾಯಕವಾದುದೆಂಬ ಭಾವನೆಯು ಬರುವುದಿಲ್ಲ. ಮಾಂಡೂಕ್ಯೋಪನಿಷತ್ತಿನಲ್ಲಿ "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ" ಎಂದು ಹೇಳಿರುವುದರಲ್ಲಿ ಪರಾತ್ಪರವನ್ನು ಮಂಗಳಕರವಾದುದೆಂಬರ್ಥವುಳ್ಳ 'ಶಿವ' ಎಂಬ ಪದದಿಂದ ಕರೆದುದೂ ಸೂಕ್ತವೇ. ಏಕೆಂದರೆ ಪ್ರಪಂಚೋಪಶಮನೂ ಶಾಂತನೂ ಆದ ಶಿವನು ಮೋಕ್ಷದಾಯಕನು. 'ಬ್ರಹ್ಮ' ಎಂಬ ಪದವು ಬ್ರಹ್ಮನನ್ನೋ ಪರಬ್ರಹ್ಮ ವನ್ನೋ ನಿರ್ದೇಶಿಸುವುದು. ಹಾಗೆಯೇ ಶಿವನೆಂಬ ಪದವು ನಿಷ್ಕಲ ಪರತತ್ತ್ವ ವನ್ನೋ ಸಕಲ ಪರತತ್ತ್ವವನ್ನೋ ಸಂದರ್ಭಾನುಸಾರವಾಗಿ ನಿರ್ದೇಶಿಸು ವುದು. ಆ ಪದಗಳನ್ನು ಸಂದರ್ಭಾನುಸಾರವಾಗಿ ಅರ್ಥಮಾಡಿಕೊಳ್ಳಬೇಕು ಆದರೆ 'ಪರಬ್ರಹ್ಮ'ವೆಂಬ ಪದವೂ ಅದರಂತೆಯೇ, 'ಪರಶಿವ'ನೆಂಬ ಪದವೂ ನಿಷ್ಕಲ ತತ್ತ್ವವೊಂದನ್ನೇ ನಿರ್ದೇಶಿಸುತ್ತದೆ.

## "ಲಿಂಗ", "ಅಂಗ" ಪದ ಯೋಜನೆ

'ಲಿಂಗ' ಪದವು ಪರಬ್ರಹ್ಮವನ್ನು ಸೂಚಿಸುವುದೆಂದು ಹಿಂದೆಯೇ ಹೇಳಲಾಯಿತು. ಜೀವಾತ್ಮನೆಂಬರ್ಥದಲ್ಲಿ 'ಅಂಗ'ವೆಂಬ ಪದವನ್ನು ವಚನ ಕಾರರು ಉಪಯೋಗಿಸಿದರು. 'ಶಿವ' 'ಜೀವ' ಎಂಬ ಪದಗಳು ರೂಢಿ ಯಲ್ಲಿದ್ದು ಎಲ್ಲರಿಗೂ ಪರಿಚಿತವಾಗಿದ್ದರೂ, ಅದೇ ಅರ್ಥದಲ್ಲಿ 'ಲಿಂಗ' 'ಅಂಗ' ಎಂಬ ಪದಗಳನ್ನು ವಚನಕಾರರು ಉಪಯೋಗಿಸಿ, ತೊಡಕನ್ನೇಕೆ ಮಾಡಿರುವರೆಂದು ವೀರಶೈವರೂ ಸಹಾ ಕೇಳುವುದುಂಟು. ಉದ್ದೇಶ ಪೂರ್ವಕವಾಗಿಯೇ ಈ ಪದಗಳನ್ನು ವಚನಕಾರರು ರೂಪಿಸಿಕೊಂಡಿದ್ದಾರೆ. ಅನುಭವಸೂತ್ರದಲ್ಲಿ ಹೇಳಿದಂತೆ—

ಲಿಂಗಸ್ಥಲಂ ಶಿವಸ್ಸಾಕ್ಷಾಜ್ಜೀವಾತ್ಮಾಂಗ ಸ್ಥಲಂ ಭವೇತ್ |
ಲಿಂಗಾಂಗ ಸ್ಥಲಯೋರೈಕ್ಯಂ ಶಿವಜೀವೈಕ್ಯಮೇವ ಹಿ ||

ಶಿವಜೀವವೈಕ್ಯವನ್ನು ವಚನಕಾರರು 'ಲಿಂಗಾಂಗ ಸಾಮರಸ್ಯ'ವೆನ್ನುವರು. ಶಿವಜೀವೈಕ್ಯವನ್ನು ಪ್ರತಿಪಾದಿಸುವಾಗ ಶಿವ, ಜೀವ ಎಂಬ ಪದಗಳು ಐಕ್ಯವನ್ನು ಸೂಚಿಸುವುದಿಲ್ಲ ಲಿಂಗ ಮತ್ತು ಅಂಗ ಎಂಬ ಪದಗಳು ಇದನ್ನು ಸೂಚಿಸಲು ತಕ್ಕವಾಗಿವೆ- ಎಂಬುದನ್ನು ತೋರಿಸಲಾಗುವುದು.

## ಪದಗಳ ಯೋಜನೆಯಲ್ಲಿ ನಿರ್ದಿಷ್ಟ ದೃಷ್ಟಿ

ಅನುಭವಸೂತ್ರದಲ್ಲಿ ಹೇಳಿದಂತೆ—

ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ |
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವ ಪರಾಯಣೈಃ ||

ಅನೀತಿ ಬ್ರಹ್ಮ ಸನ್ಮಾತ್ರಂ ಗಚ್ಛತೀತಿ ಗಮುಚ್ಯತೇ |
ರೂಪ್ಯತ್ಯಂಗಮಿತಿ ಪ್ರಾಜ್ಞೈರಂಗತತ್ತ್ವ ವಿಚಿಂತಕೈಃ ||

ಜೀವಾತ್ಮವೇ ಮೊದಲಾದ ಚರಾಚರಗಳನ್ನೆಲ್ಲಾ ತನ್ನೊಳಗೆ ಲೀನಮಾಡಿಕೊಳ್ಳುವುದು ಲಿಂಗ; 'ಅ' ಎಂದರೆ ಪರಬ್ರಹ್ಮ. ಆದರತ್ತ ಗಮಿಸಿ, ಲೀನಗೊಳ್ಳುವುದರಿಂದ ಜೀವಾತ್ಮನನ್ನು ನಿರ್ದೇಶಿಸಲು 'ಅಂಗ'ವೆಂಬ ಪದವನ್ನು ರೂಪಿಸಿಕೊಂಡಿದ್ದಾರೆ. "ರೂಪ್ಯತೇ" ಎಂಬ ಪದವು ಬುದ್ಧಿಪೂರ್ವಕವಾಗಿ ಈ ಪದಗಳು ರೂಪಿಸಲ್ಪಟ್ಟವೆಯೆಂಬುದನ್ನು ಸೂಚಿಸುತ್ತದೆ. ಲಿಂಗಾಂಗ ಸಾಮರಸ್ಯದ ಎಂದರೆ ಶಿವಜೀವೈಕ್ಯದ ಸಿದ್ಧಾಂತವನ್ನು ವಿವರಿಸುವಾಗ 'ಜೀವ' 'ಶಿವ' ಎಂಬ ಪದಗಳಿಗಿಂತ 'ಲಿಂಗ', 'ಅಂಗ'—ಎಂಬ ಪದಗಳು ಹೇಗೆ ಸೂಕ್ತವಾದುವು ಎಂಬುದು ಈಗ ಸ್ಪಷ್ಟವಾದಂತಾಯಿತು. ಒಟ್ಟಿನಲ್ಲಿ ಹೇಳುವುದಿದು—ಶಿಭು, ಪ್ರಾಣ, ಆಕಾಶ, ಶೂನ್ಯ, ಗಗನ, ಬಯಲು, ಲಿಂಗ ಮೊದಲಾದ ಪದಗಳು ಪರಾತ್ಪರತತ್ತ್ವವನ್ನು ನಿರ್ದೇಶಿಸಲು ಉಪಯೋಗಿಸಲ್ಪಟ್ಟಿರುವ ಪಾರಿಭಾಷಿಕಪದಗಳು; ಈ ಪದಗಳು ಮೇಲೆ ಹೇಳಿದಂತೆ ನಿರ್ದಿಷ್ಟವಾದ ದೃಷ್ಟಿಯಿಂದ ಕಲ್ಪಿಸಿಕೊಂಡವುಗಳಾಗಿವೆ.

## ಲಿಂಗಾಂಗ-ಸಾಮರಸ್ಯ ಪದದ ಯೋಜನೆ

'ಲಿಂಗ' ಮತ್ತು 'ಅಂಗ' ಎಂಬ ಪದಗಳು ಹೇಗೆ ರೂಪಿಸಲ್ಪಟ್ಟಿವೆ ಯೆಂದು ವಿವರಿಸಿದ ಮೇಲೆ, ಲಿಂಗಾಂಗಸಾಮರಸ್ಯ—ಎಂಬಲ್ಲಿ ಸಾಮರಸ್ಯ ಪದವು ರೂಪಿಸಲ್ಪಟ್ಟಿರುವುದರಲ್ಲಿನ ಉದ್ದೇಶವನ್ನು ಹೇಳುವುದುಚಿತವು. ಅದ್ವೈತಸಿದ್ಧಾಂತದ ಮೋಕ್ಷಸ್ವರೂಪವು ಪ್ರಸಿದ್ಧವಾಗಿರುವುದು. ಶಿವಜೀವ ಸಾಮರಸ್ಯವೆಂಬುದು ಶಾಂಕರಸಿದ್ಧಾಂತದ ಮೋಕ್ಷ ಕಲ್ಪನೆಗೆ ಹೊಂದದು. ಒಂದೇ ವಸ್ತುವಿನ ಎರಡಂಶಗಳು ಒಂದಾಗುವುದು ಸಾಮರಸ್ಯ. ಜಲಧಿ ಯಲ್ಲಿ ಜಲವು ಸೇರಿದರೆ ಸಾಮರಸ್ಯವುಂಟಾಗುವುದು. ಶಾಂಕರಸಿದ್ಧಾಂತದಂತೆ ಜೀವನು ಶಿವಾಂಶನಲ್ಲ. "ಜೀವೋ ಬ್ರಹ್ಮೈವನಾಪರಃ" ಎಂದರೆ ಜೀವವು ಬ್ರಹ್ಮವೇ ಹೊರತು ಬೇರೆಯಲ್ಲವೆಂಬುದು ಶಾಂಕರಸಿದ್ಧಾಂತ. ಜೀವನು ಬ್ರಹ್ಮವೇ ಆದರೂ ಅಜ್ಞಾನದಿಂದ ತಾನು ಬೇರೆಯೆಂದು ತಿಳಿದಿರುವನು. ಜ್ಞಾನವಾದರೆ ತಾನು ಬ್ರಹ್ಮನೆಂದು ತಿಳಿಯುವನು. ಹೀಗೆ ಅಜ್ಞಾನದಿಂದ ಬಿಡುಗಡೆ ಹೊಂದುವುದೇ ಶಾಂಕರಸಿದ್ಧಾಂತ. ಒಂದೇ ವಸ್ತು ಇರುವುದರಲ್ಲಿ ಸಮರಸನಾಗದು. ಒಂದೇ ರಸದ ಭಾಗಗಳು ಎಂದರೆ ಸಾಮ್ಯವಿರುವ ಎರಡು ಒಂದಾದರೆ ಸಮರಸವಾಗುವುದು ; ಇರುವುದೊಂದು ಎರಡಾಗಲಿಲ್ಲ, ಆದರೆ ಎರಡಾದಂತೆ ತೋರುವುದೆನ್ನುವ ಶಾಂಕರಸಿದ್ಧಾಂತದಲ್ಲಿ ಸಾಮರಸ್ಯದ ಕಲ್ಪನೆ ಯಾಗದು. ಆದರೆ ವೀರಶೈವಸಿದ್ಧಾಂತದಲ್ಲಿ ಒಂದು ಎರಡಾಗುವುದು; ಒಂದು ಅಂಶಿ, ಒಂದು ಅಂಶ ; ಜೀವನು ಶಿವಾಂಶನು. ಅಂಶವು ಅಂಶಿಯಲ್ಲಿ ಲೀನವಾಗಲು ನೀರಿನಲ್ಲಿ ನೀರು ಬೇರೆದಂತೆ ವಿಭಾಗವು ಕಾಣದಂತಾಗಿ ಸಮರಸವಾಗುವುದು. ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದಂತೆ—

ಜಲೇ ಜಲಮಿವನ್ಯಸ್ತಂ ವಹ್ನಾವಹ್ನಿರಿವಾರ್ಪಿತಃ |
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ||

ಜೀವನು ಶಿವಾಂಶವೆಂಬ ದೃಷ್ಟಿಯಿಂದ ಮೋಕ್ಷದಲ್ಲಿ ಸಮರಸವು ಸಾಧ್ಯವಾಗುವುದು. ಲಿಂಗ ಮತ್ತು ಅಂಗ ಎಂಬುವು ಮಹಾಕಾಶ ಘಟಾಕಾಶ ಇದ್ದಂತೆ. ಘಟವೊಡೆದು ಅದರಲ್ಲಿನ ಆಕಾಶವು ಮಹಾಕಾಶದಲ್ಲಿ ಬೆರೆಯಲು ಲಿಂಗಾಂಗ ಸಾಮರಸ್ಯವಾದಂತಾಗುವುದು—

ಲಿಂಗಾಂಗೋಪಾಧಿಭೇದೇನ ದ್ವಿಧಾ ಭಿನ್ನಂ ಪರಸ್ಪರಂ |
ಮಹಾನ್ ಘಟಪ್ರಭೇದೇನ ಯಥಾಕಾಶಂ ಪ್ರತೀಯತೇ ||

ಬಯಲು ಬಯಲು ಬೆರೆದಲ್ಲಿ ಮೇರೆಯುಂಟೇ, ಅಯ್ಯ ?
ಕ್ಷೀರ ಕ್ಷೀರ ಕೂಡಿದಲ್ಲಿ, ಮರಳಿ ರೂಹಿಸಿ ಹಿಡಿಯಲುಂಟೆ ಅಯ್ಯ ?
ನಿಮ್ಮೊಳೊಡೆವೆರೆದ ನಿಜೈಕ್ಯನ ಕುರುಹು ಮರಳಿ ತೋರಲುಂಟೆ ?
ಅಯ್ಯಾ, ಅಖಂಡೇಶ್ವರಾ ?

ಶಾಂಕರಾದ್ವೈತದಲ್ಲಿ ಪರಿಚಿತವಾದ ಮೋಕ್ಷವೆಂಬ ಭ್ರಾಂತಿಯು ಬರದಿರಬೇಕೆಂದೂ, ಹಾಗೆಯೇ ಶಿವಾದ್ವೈತದ ಮೋಕ್ಷದ ಸ್ವರೂಪವು ಎದ್ದು ಕಾಣುವಂತಾಗಬೇಕೆಂದೂ ಸಾಮರಸ್ಯವೆಂಬ ಪದವು ರೂಪಿಸಲ್ಪಟ್ಟಿದೆ. ಆದರೆ ಜೀವನು ಶಿವನ ಅಂಶವೆಂದರೆ ಶಿವನಲ್ಲಿ ಕೊರೆದು ತೆಗೆದು ಬೇರ್ಪಡಿಸಿದ ತುಂಡೆಂಬ ಭಾವನೆಯು ಬರಬಾರದು. ಮಹಾಕಾಶದಲ್ಲಿ ಘಟಾಕಾಶವಿರುವಂತೆ ಜೀವನು ಶಿವನಿಂದ ಬೇರ್ಪಡದೆ ತದಂಶವಾಗಿಹನು. ಮಹಾಕಾಶವೂ ಬಯಲೇ, ಘಟಾಕಾಶವೂ ಬಯಲೇ ; ಲಿಂಗವು ಮಹಾಕಾಶದಂತೆ. ಲಿಂಗವೆಂಬ ಬಯಲಿನಲ್ಲಿ ಅಂಗವೆಂಬ ಬಯಲನ್ನು ಬಿತ್ತಿ ಬೆಳೆದರೂ ಬಯಲು ಬಯಲಾಗಿಯೇ ಉಳಿದಿದೆ. 'ಲಿಂಗ', 'ಅಂಗ', 'ಸಾಮರಸ್ಯ' ಎಂಬ ಪದಗಳು ಕ್ರಮವಾಗಿ 'ತತ್', 'ತ್ವಂ', 'ಅಸಿ' ಎಂಬ ಪದಗಳಿಗೆ ಬದಲಾಗಿ ಉಪಯೋಗಿಸಿದವುಗಳಾಗಿವೆ.

ಲಿಂಗಂ ತತ್‌ಪದಮಾಖ್ಯಾತಮಂಗಂ ತ್ವಂ ಪದಮೀರಿತಂ |
ಸಂಯೋಗೋಽಸಿಪದಪ್ರೋಕ್ತಮನಯೋರಂಗಲಿಂಗಯೋಃ ||

ಎಂದು ಅನುಭವಸೂತ್ರದ ಪಂಚಮಾಧಿಕರಣದಲ್ಲಿ ಹೇಳಿದೆ. 'ಸಂಯೋಗ' ಪದವನ್ನು 'ಸಾಮರಸ್ಯ' ಎಂಬ ಪದಕ್ಕೆ ಬದಲಾಗಿ ಉಪಯೋಗಿಸುವುದುಂಟು. ಸಂಯೋಗದಲ್ಲಿಯೂ ಎರಡು ಒಂದಾಗುವ ಭಾವವಿದೆ. ಹೆಚ್ಚು ಬಳಕೆಯಲ್ಲಿರುವ ಸಾಮರಸ್ಯಪದದಲ್ಲಿ ಐಕ್ಯದ ಸ್ವರೂಪವು ಪರಮಾವಧಿ ಮನವರಿಕೆಯಾಗುವುದು.

ಘೃತ ಘೃತವ ಬೆರೆಸಿದಂತೆ, ಕ್ಷೀರ ಕ್ಷೀರವ ಬೆರೆಸಿದಂತೆ, ತೈಲ ತೈಲವ ಬೆರೆಸಿದಂತೆ, ನೀರು ನೀರ ಬೆರೆಸಿದಂತೆ, ಜ್ಯೋತಿ ಜ್ಯೋತಿಯ ಕೂಡಿದಂತೆ, ಬಯಲು ಬಯಲು ಬೆರಸಿದಂತೆ, ಪ್ರಾಣ ಪ್ರಾಣ ಸಂಯೋಗವಾದ ಶರಣಲಿಂಗ ಸಮರಸವ ಏನೆಂಬೆನಯ್ಯಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

## 'ಶಿವಾನುಭಾವ' ಪದಯೋಜನೆ

ಶಿವಾನುಭಾವ ಎಂಬ ಒಂದು ಪದದ ಅರ್ಥವನ್ನಿಲ್ಲಿ ವಿವರಿಸಬೇಕು. ಇದೊಂದು ಬಹಳ ಮುಖ್ಯವಾದ ಪಾರಿಭಾಷಿಕ ಶಬ್ದ. ಶಿವಭಾವವು ಆಗಾಗ ಬಂದರೆ ಸಾಲದು; ಅನುಸ್ಯೂತವಾಗಿ ಎಂದರೆ ತೈಲಧಾರೆಯಂತೆ ಎಡೆಬಿಡದೆ ಶಿವಾನುಭಾವವಾಗಬೇಕು. ಸ್ಥೂಲ-ಸೂಕ್ಷ್ಮ-ಕಾರಣ ತನುಗಳ ಕಾರ್ಯಗಳೆಲ್ಲ ಶಿವಾನುಭವವಾಗುವುದು ಹೇಗೆ ? ಪಂಚೇಂದ್ರಿಯಗಳಿಂದ ಅನುಭವಿಸುವುದೆಲ್ಲ ಶಿವಾನುಭಾವವಾಗುವುದು ಹೇಗೆ ?—ಎಂಬ ವಿಷಯವು ಈಶಾವಾಸ್ಯೋಪನಿಷತ್ತಿನಲ್ಲಿನ "ತೇನತ್ಯಕ್ತೇನ ಭುಂಜೀಥಾಃ" ಎಂಬು ದನ್ನು ವಿವರಿಸುವಾಗ, ವಿಶದೀಕರಿಸಲ್ಪಡುವುದು. ಇನ್ನು ಹೇಳಬೇಕಾದುದಿಷ್ಟೆ: ಅಂಗ, ಲಿಂಗ, ಸಾಮರಸ್ಯ ಮೊದಲಾದ ಪಾರಿಭಾಷಿಕಪದಗಳು ಸಾರ್ಥಕ ವಾಗುವಂತೆ ರೂಪಿಸಿಕೊಂಡವಾಗಿವೆ. 'ವೇದವಾಙ್ಮಯದಿಂದ ವಚನ ವಾಙ್ಮಯದವರೆಗೆ ಆಧ್ಯಾತ್ಮಿಕ ಪ್ರಗತಿ'ಯನ್ನು ವಿಶದೀಕರಿಸುವುದಕ್ಕಾಗಿ ಬರೆಯಲ್ಪಟ್ಟ ಈ 'ವಚನೋಪನಿಷತ್' ಗ್ರಂಥದಲ್ಲಿ ವೇದೋಪನಿಷತ್‌ಗಳ ಕಾಲದಲ್ಲಿ ಆದ ಆಧ್ಯಾತ್ಮಿಕ ಪ್ರಗತಿಯನ್ನು ವಿಶದೀಕರಿಸಿದ್ದಾಯಿತು. ಹೀಗೆ ಮಾಡುವಲ್ಲಿ ವಚನವಾಙ್ಮಯದ ಸಹಾಯವು ಅಲ್ಪವೇನಲ್ಲ. ಇನ್ನೂ ವಚನ ವಾಙ್ಮಯದ ಹಿನ್ನೆಲೆಯಾದ ಪಾಶುಪತದ ಉಗಮ ಮತ್ತು ವಚನವಾಙ್ಮಯ ದವರೆಗೆ ಆದ ಪ್ರಗತಿಯನ್ನು ವಿಶದೀಕರಿಸುವ ಮೊದಲು ಸ್ಥಾಲೀಪುಲಾ ಕನ್ಯಾಯದಂತೆ ಒಂದೆರಡು ಉಪನಿಷತ್ತುಗಳ ಪರಿಚಯವನ್ನು ವಚನ ವಾಙ್ಮಯದ ಸಹಾಯದಿಂದ ಮಾಡಲಾಗುವುದು. ಇವೆಲ್ಲಕ್ಕೂ ಮೊದಲು ಈಗಾಗಲೇ ಸ್ಥೂಲವಾಗಿ ಪರಿಚಯವಾಗಿರುವ ನಾಸದೀಯ ಸೂಕ್ತದ ಹೆಚ್ಚು ವಿಮರ್ಶೆಯು--ಈ ಸೂಕ್ತವು ವಚನೋಪನಿಷತ್ತುಗಳಿಗೆ ಬಹುಮಟ್ಟಿಗೆ ತಳಹದಿಯೇ ಆದುದರಿಂದ—ಅನಿವಾರ್ಯವು.

# ಸಾಯಣಭಾಷ್ಯಾಧಾರೋಪೇತ ವಿವರಣಾತ್ಮಕ

# ನಾಸದೀಯ ಸೂಕ್ತ

ವೇದ ವಾಙ್ಮಯವೆಂಬ ಬೃಹದಾರಣ್ಯದಲ್ಲಿ ವಜ್ರವೇ ಮೊದಲಾದ ರತ್ನಗಳ ಖನಿ ಪ್ರದೇಶಗಳುಂಟು. ಈ ಗಣಿಗಳನ್ನು ಅಗೆದು ರತ್ನಗಳನ್ನು ತೆಗೆದ ಸಾಯಣಾದಿ ಮಹನೀಯರ ಪ್ರಯತ್ನಗಳಿಲ್ಲದಿದ್ದರೆ ಆ ನವರತ್ನಗಳ ದರ್ಶನವು ನಮಗೆ ಆಗುತ್ತಿರಲಿಲ್ಲ. ಈ ನವರತ್ನಗಳಲ್ಲಿ ಶ್ರೇಷ್ಠವಾದ ವಜ್ರವೇ ನಾಸದೀಯ ಸೂಕ್ತ. ಋಗ್ವೇದದಲ್ಲಿ ಇಂದ್ರ ವಿಶ್ವಕರ್ಮ ಮೊದಲಾದವರಿಂದ ಜಗತ್ತು ಸೃಷ್ಟಿಯಾಯಿತೆಂದು ಹೇಳುವ ಅನೇಕ ಸೂಕ್ತಗಳುಂಟು. ಆದರೆ ಯಾವ ವ್ಯಕ್ತಿಯಿಂದಲಾಗಲೀ ಜಗತ್ತು ಸೃಷ್ಟಿಯಾಯಿತೆಂದು ಹೇಳುವ ಈ ಸೂಕ್ತಗಳಿಗಿಂತ, ಸತ್ ಅಸತ್ ಹಗಲು ರಾತ್ರಿ ಮೊದಲಾದವುಗಳ ಕಲ್ಪನೆಗೂ ಮೊದಲು. ಜಗತ್ತು ಸದಸತ್ತುಗಳಿಗೆ ಮೀರಿದ ಅವ್ಯಕ್ತ ಪರಬ್ರಹ್ಮದಿಂದ ಹೊರಹೊಮ್ಮಿತೆಂದು ಹೇಳುವ ನಾಸದೀಯ ಸೂಕ್ತವು ಶ್ರೇಷ್ಠವಾದುದು.

ಈ ಸೂಕ್ತವು ಪ್ರಪಂಚದ ಎಲ್ಲ ಭಾಗಗಳ ವಿದ್ವಾಂಸರ ಗಮನವನ್ನು ಸೆಳೆದು ಅನೇಕ ಭಾಷೆಗಳಲ್ಲಿ ಭಾಷಾಂತರಿಸಲ್ಪಟ್ಟಿದೆ. ಆದರೂ ಈ ಸೂಕ್ತವು ಅಪರಿಚಿತವಾಗಿಯೇ ಉಳಿದಿದೆಯೆಂದರೆ ಅತಿಶಯೋಕ್ತಿಯಲ್ಲ. ಸಾಮಾನ್ಯವಾಗಿ ಎಲ್ಲರಿಗೂ ಇದು ಪರಿಚಯವಾಗುವಂತೆ ಮಾಡಲು ಇಲ್ಲಿ ಪ್ರಯತ್ನ ಮಾಡಿದೆ ಇದು ಸುಲಭವಾಗಿ ಗ್ರಾಹ್ಯವಾಗಲು ಇದರ ದರ್ಶನವನ್ನು ಮೂರು ಹಂತಗಳಲ್ಲಿ ಮಾಡಲಾಗಿದೆ. ಇದರ ವಿವರಣೆಯನ್ನು ಪಡೆಯುವ ಮೊದಲೇ ಮೂಲದಲ್ಲಿ ಏನು ಹೇಳಿದೆಯೆಂಬುದನ್ನು ಅರಿಯಬೇಕು. ಆಗಲೇ ಸ್ವತಂತ್ರವಾಗಿ ಆಲೋಚಿಸಲು ಅವಕಾಶವಾಗುವುದು. ಮೊದಲನೆಯ ದರ್ಶನದಲ್ಲಿ ಮೂಲ ಮಂತ್ರಗಳನ್ನೂ, ಅವುಗಳಿಗೆ ಸರಿಯಾದ ಕನ್ನಡ ಪದ್ಯಾನುವಾದವನ್ನೂ ಕೊಡಲಾಗಿದೆ. ಇದರ ಇಂಗ್ಲೀಷ್ ಭಾಷಾಂತರವನ್ನು ಸಹಾ ಕೊಟ್ಟಿರುವುದು ಸೂಕ್ತವು ಮತ್ತಷ್ಟು ಸುಲಭ ಗ್ರಾಹ್ಯವಾಗಲೆಂದು. ಎರಡನೆಯ ದರ್ಶನದಲ್ಲಿ ಸಂಸ್ಕೃತವನ್ನು ಅರಿಯದವರು ಸಹಾ, ಈ ಸೂಕ್ತದ ಹೆಚ್ಚು ಪರಿ

ಚಯುಪನ್ನು ಮಾಡಿಕೊಳ್ಳಲು ಅನುಕೂಲಿಸುವಂತೆ, ಪ್ರತಿಯೊಂದು ಮಂತ್ರದ ಕನ್ನಡ ಪದ್ಯಾನುವಾದದ ಅಭಿಪ್ರಾಯವನ್ನು ಗದ್ಯದಲ್ಲಿ ತಿಳಿಸಿ ವಿವರಿಸ ಲಾಗಿದೆ. ಇನ್ನು ಮೂರನೆಯ ದರ್ಶನದಲ್ಲಿ ಮೂಲ ಮಂತ್ರಗಳನ್ನೂ ಅವು ಗಳ ಪ್ರತಿ ಪದಾರ್ಥವನ್ನೂ ಸಾಯಣ ಭಾಷ್ಯದ ಆಧಾರಗಳನ್ನೊಳಗೊಂಡ ವಿವೇಚನೆಯನ್ನೂ ಕೊಡಲಾಗಿದೆ.

ಲೋಕಮಾನ್ಯ ತಿಲಕರ ಗೀತಾ ರಹಸ್ಯದಲ್ಲಿ ಈ ಸೂಕ್ತದ ಹಿರಿಮೆಯ ವಿಷಯವಾಗಿ ಬರೆದಿರುವ ಭಾಗವು ಸಂಗ್ರಾಹ್ಯವಾದುದರಿಂದ ಅದನ್ನು ಇಲ್ಲಿ ಉದ್ಧರಿಸಿದೆ.

"ಸೃಷ್ಟಿಯ ಅಗಮ್ಯ ಮೂಲತತ್ತ್ವವು ಯಾವುದು ಮತ್ತು ಅದರಿಂದ ಈ ವಿವಿಧ ದೃಶ್ಯ ಸೃಷ್ಟಿಯು ಹೇಗೆ ಉತ್ಪನ್ನವಾಯಿತು ಎಂಬ ವಿಷಯಕ್ಕೆ ಈ ಸೂಕ್ತದಲ್ಲಿ ಪ್ರದರ್ಶಿಸಲ್ಪಟ್ಟಂಥ ಪ್ರಗಲ್ಭ ಸ್ವತಂತ್ರ ಮತ್ತು ಗೂಢವಾದ ತತ್ತ್ವಜ್ಞಾನದ ಮಾರ್ಮಿಕ ವಿಚಾರಗಳು ಬೇರೆ ಯಾವ ಧರ್ಮದ ಮೂಲ ಗ್ರಂಥಗಳಲ್ಲಿಯೂ ಕಂಡು ಬರುವುದಿಲ್ಲ. .... ... "ನಮಗೆ ಕಾಣಿಸುವಂಥ ಸಾಮಾನ್ಯವಾಗಿ ನಮ್ಮ ಇಂದ್ರಿಯಗಳಿಗೆಲ್ಲ ಗೋಚರಿಸುವಂಥ, ವಿನಾಶಿಯೂ ವಿಕಾರಿಯೂ ಆದ ನಾಮರೂಪಾತ್ಮಕ ವಿವಿಧ ನೋಟಗಳ ಜಾಲದಲ್ಲಿಯೇ ನಾವು ಸಿಕ್ಕಿಕೊಂಡಿರುವೆವು, ಅದರ ರಚನೆಗೆ ಒಂದೇ ಒಂದಾದ ಮತ್ತು ಅಮೃತ ವಾದಂಥ ಯಾವುದೊಂದು ತತ್ತ್ವವು ಇದೆ ಎಂಬುದನ್ನು ಜ್ಞಾನದೃಷ್ಟಿಯಿಂದ ಗುರುತಿಸುವುದೇ ಎಲ್ಲ ವೇದಾಂತ ಶಾಸ್ತ್ರದ ಸಾರವು. ಮೇಲ್ಕಾಣಿಸಿದ ಸೂಕ್ತಿಯನ್ನು ರಚಿಸಿದ ಋಷಿಯ ಬುದ್ಧಿಯು ಈ ಸಾರವಸ್ತುದ ಬೆಣ್ಣೆಯ ಮುದ್ದೆಯನ್ನು ಒಂದೇ ಸಲಕ್ಕೆ ಜಪ್ಪನೆ ಹಾರಿ ಹಿಡಿದಿರುವುದನ್ನು ಲಕ್ಷಿಸಿದರೆ ಅವನ ಅಂತರ್ಜ್ಞಾನವು ಎಷ್ಟು ತೀವ್ರವಾಗಿತ್ತೆಂಬುದು ತಾನೇ ವ್ಯಕ್ತವಾಗು ವುದು."

ನಾಸದೀಯ ಸೂಕ್ತದ ವಿಚಾರವನ್ನು ಪ್ರಾರಂಭಿಸುವ ಮೊದಲು ಇದರ ವಿವರಣೆಗೆ ವಚನ ವಾಙ್ಮಯವು ಒದಗಿಸಿಕೊಟ್ಟಿರುವ ಸಹಾಯವು ಅತ್ಯಮೂಲ್ಯ ವೆಂದೇ ಹೇಳಬೇಕು. ಅಂದಿನ ನಾಸದೀಯ ಸೂಕ್ತದ ಋಷಿಗೆ ಹೊಳೆಯದ ವಚನಕಾರರ 'ಮನಸ್ಸಿಗೆ ಗೋಚರವಾಗಿದೆ'ಯೆಂಬುದು ಸುಸ್ಪಷ್ಟವಾಗುತ್ತದೆ. ಶರಣರು ನಾಸದೀಯ ಸೂಕ್ತವನ್ನು ಅಭ್ಯಸಿಸಿ ಅವರಲ್ಲಿನ ಜ್ಞಾನವನ್ನು

ಮನಗಂಡರೇನೋ ಅನಿಸದಿರದು. ಹೀಗಾಗಿದ್ದರೂ, ಇಂದ್ರ ಪ್ರಜಾಪತಿ ವಿಶ್ವಕರ್ಮ ಮೊದಲಾದವರಿಂದ ಸೃಷ್ಟಿಯಾಯಿತೆಂದು ಹೇಳುವ ಸೂಕ್ತಗಳೆಲ್ಲವನ್ನೂ ಬಿಟ್ಟು ವಚನಕಾರರು ನಾಸದೀಯ ಸೂಕ್ತವೊಂದರಿಂದಲೇ ಪ್ರಭಾವಿತರಾದುದು ಅವರ ಹಿರಿಮೆಯನ್ನು ತೋರಿಸುತ್ತದೆ. ಆದರೆ ವಚನಕಾರರ ಸೃಷ್ಟಿ ವಚನಗಳನ್ನು ನೋಡಿದರೆ, ಅವು ಅವರಿಗೆ ಸ್ವತಂತ್ರವಾಗಿಯೇ ಹೊಳೆದವು ಎಂಬುದು ವ್ಯಕ್ತವಾಗುತ್ತದೆ. ಇದು ಅಸಂಭವವಲ್ಲವೆನ್ನಲು, ಮಾನ್ಯ ದಿವಾಕರರ ವಚನ ಶಾಸ್ತ್ರ ರಹಸ್ಯದ ಕೆಲವು ಮಾತುಗಳನ್ನಿಲ್ಲಿ ಉದ್ಧರಿಸಬೇಕಾಗುವುದು. "ಪರಮಾರ್ಥಿಗಳ ಬಳಗವು ಎಲ್ಲೆಲ್ಲಿಯೂ ಒಂದೇ ಎಂದು ಹೇಳಬಲ್ಲೆವು. ಅವರು ಉತ್ತರ ದಕ್ಷಿಣ ಧ್ರುವದಷ್ಟು ದೂರವಿರಲಿ, ಅಥವಾ ಅವರು ಅತ್ಯಂತ ಸುಸಂಸ್ಕೃತ ಭಾಷೆಯನ್ನು ಇಲ್ಲವೇ ಗ್ರಂಥಸ್ಥವಾಗದ ಯಾವುದೊಂದು ನುಡಿಯನ್ನು ಮಾತಾಡುತ್ತಿರಲಿ, ಅವರು ಜಗದಾದಿಯಲ್ಲಿ ಹುಟ್ಟಿರಲಿ, ಇಲ್ಲವೇ ಜಗತ್ತಿನ ಪ್ರಳಯದ ಸಮಯಕ್ಕೆ ಹುಟ್ಟಲಿ, ಅವರು ಸ್ತ್ರೀಯರಿರಲಿ ಪುರುಷರಿರಲಿ, ಹಿರಿಯರಿರಲಿ ಕಿರಿಯರಿರಲಿ, ಯಾವದೇ ಧರ್ಮದವರಿರಲಿ, ಯಾವದೇ ಉದ್ಯೋಗದವರಿರಲಿ, ಅವರೆಲ್ಲರೂ ಒಂದೇ ಮಹಾ ಸಂಗೀತದಲ್ಲಿ ತಮ್ಮ ಸ್ವರಗೂಡಿಸಿರುವರು ; ಅವರೆಲ್ಲರೂ ವಿಶ್ವಾತ್ಮನೊಡನೆ ಏಕರಸವಾಗಲು ಹಗಲಿರುಳೂ ಹೆಣಗುವರು". ಚಿನ್ನದಂತಹ ಈ ಮಾತುಗಳು ನಾಸದೀಯ ಸೂಕ್ತ ಮಂತ್ರದ್ರಷ್ಟೃ ಪ್ರಜಾಪತಿ ಪರಮೇಷ್ಠಿಗೂ ಸೃಷ್ಟಿ ವಚನಕಾರರಾದ ಶರಣರಿಗೂ ಅನ್ವಯಿಸದಿರವು.

ಈಗ ಪ್ರಥಮ ದರ್ಶನದಲ್ಲಿ ನಾಸದೀಯ ಸೂಕ್ತದ ಮೂಲ ಮಂತ್ರಗಳ ಎದುರಿಗೆ ಅದರ ಕನ್ನಡ ಪದ್ಯಾನುವಾದವನ್ನು ಕೊಟ್ಟಿದೆ. ಪದ್ಯಾನುವಾದದಲ್ಲಿ ಮೂಲದಲ್ಲಿರುವಷ್ಟನ್ನೇ ಭಾಷಾಂತರಿಸಿದೆ. ಆದರೆ ಮೂಲ ಮಂತ್ರವು ಅಸ್ಪಷ್ಟವಾಗಿದ್ದಾಗ ಸಾಯಣ ಭಾಷ್ಯದ ಸಹಾಯದಿಂದ ಅರ್ಥ ಮಾಡಲಾಗಿದೆ. ಸಂಸ್ಕೃತ ಬಾರದವರು ಕನ್ನಡ ಪದ್ಯಾನುವಾದವನ್ನೇ ಒಟ್ಟಿಗೆ ಓದಿದರೆ ಋಷಿಯ ಆಶಯವು ಗೋಚರವಾಗುವುದು.

# ಪ್ರಥಮ ದರ್ಶನ

ನಾಸದಾಸೀನ್ನೋ ಸದಾಸೀತ್ತದಾನೀಂ
ನಾಸೀದ್ರಜೋ ನೋ ವ್ಯೋಮಾಪರೋ ಯತ್ ।
ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ
ಕಿಮಾಸೀದ್ ಗಹನಂ ಗಭೀರಂ ? ॥ ೧ ॥

ನ ಮೃತ್ಯುರಾಸೀದಮೃತಂ ನ ತರ್ಹಿ
ನ ರಾತ್ರ್ಯಾ ಅಹ್ನ ಅಸೀತ್ ಪ್ರಕೇತಃ ।
ಆನೀದವಾತಂ ಸ್ವಧಯಾ ತದೇಕಂ
ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥ ॥ ೨ ॥

ತಮ ಆಸೀತ್ತಮಸಾ ಗೂಳ್ಹಮಗ್ರೇಽ
ಪ್ರಕೇತಂ ಸಲಿಲಂ ಸರ್ವಮಾ ಇದಂ ।
ತುಚ್ಛ್ಯೇನಾಭ್ವಪಿಹಿತಂ ಯದಾಸೀತ್
ತಪಸಸ್ತನ್ಮಹಿನಾಜಾಯತೈಕಂ ॥ ॥ ೩ ॥

ಕಾಮಸ್ತದಗ್ರೇ ಸಮವರ್ತತಾಧಿ
ಮನಸೋ ರೇತಃ ಪ್ರಥಮ ಯದಾಸೀತ್ ।
ಸತೋ ಬಂಧುಮಸತಿ ನಿರವಿಂದನ್
ಹೃದಿ ಪ್ರತೀಷ್ಯಾ ಕವಯೋ ಮನೀಷಾ ॥ ॥ ೪ ॥

ಇರದಂದು ಸತ್ತೆನಿಪಸತ್ತೆನಿಪುದಾವುದುಂ ।
ಇರದಂದು ಲೋಕಗಳ್ ಮೇಲಿನಾ ವ್ಯೋಮಮುಂ ।
ಇರದಂದು ಅದರಾಚೆ ಪರಲೋಕವಾವುದುಂ ।
ಇರಲುಂಟೆ ಆವರಿಪುದೇನಾದರಾಮೊಡಂ ? ।
ಇರಲುಂಟೆ ಯಾರಿಗೆಲ್ಲುಂಟು ಸುಖಸಾಧನಂ ? ।
ಇರಲುಂಟೆ ಗಹನಂಗಭೀರವೆನಿಪಂಬುವುಂ ? । ॥ ೧ ॥

ಇರಲಿಲ್ಲ ಮರಣಮುಂ ಮತ್ತೆಯಮರತ್ವಮುಂ ।
ಇರಲಿಲ್ಲ ಪಗಲೆಂಬ ನಿಶಿಯೆಂಬುದಾವುದುಂ ।
ಇರಲಿಲ್ಲಿವಂ ತೋರ್ಪಿನ ಶಶಿ ಪ್ರಕೇತಮುಂ ।
ಇರಲಿಲ್ಲವದನುಳಿದುದಿನಿತುಮುಂ, ವಾಯುವುಂ ।
ಇರದೊಡಂ ಸ್ವಸ್ವರೂಪ್ಪೈಕ ಚಿಚ್ಛಕ್ತಿಯಿಂ ।
ಸ್ಫುರಿಸುತಿರ್ದುದದ್ವೈತ ಪರಮಾತ್ಮತತ್ತ್ವಂ॥ ॥ ೨ ॥

ಕವಿದಿತ್ತು ಗಾಢತಮಮಾರಂಭದಾದಿಯೊಳ್ ।
ಕವಿದಿತ್ತು ಗಾಢತಮಮೇನುಮುಂ ತಿಳಿಯದೊಲ್ ।
ಕವಿದಿತ್ತು ಮಾಯೆಯದು ಬಯಲೆನಿಪ ತತ್ತ್ವಮಂ ।
ತವೆ ಪರಮನೆಸಗಿದಾ ತಪದ ಮಹಿಮೆಯಿಂ ಸಂ-
ಭವಿಸಿತು (ದ್ವೈತ) ಜಗಮದ್ವೈತ ತತ್ತ್ವದಿಂ ॥ ೩ ॥

ಉದಿಸಿತಗ್ರದೊಳ್ ಮನದಬೀಜದ ರೂಪದಿಂ ।
ಅದು ವರ್ಧಿಸಿದುದು ಸೃಷ್ಟಿಸಲೆಳಸುವ ಕಾಮಂ ।
ಮೊದಲ ಬಾಂಧವ್ಯಮಿಂತು ಸತ್ತಿಗಸತ್ತಿನೊಳ್ ।
ಹೃದಯದೊಳ್ ಯೋಗಿಗಳ್ ಚಿಂತಿಸಿ ತಿಳಿದರಿದಂ ॥ ೪ ॥

ತಿರಶ್ಚೀನೋ ವಿತತೋ ರಶ್ಮಿರೇಷಾಂ
ಅಧಃಸ್ವಿದಾಸೀದುಪರಿ ಸ್ವಿದಾಸೀತ್ ।
ರೇತೋಧಾ ಆಸನ್ ಮಹಿಮಾನ ಆಸನ್
ಸ್ವಧಾ ಅವಸ್ತಾತ್ ಪ್ರಯತಿಃ ಪರಸ್ತಾತ್ ॥ ೫ ॥

ಕೋ ಅದ್ಧಾ ವೇದ ಕ ಇಹ ಪ್ರವೋಚತ್
ಕುತ ಆಜಾತಾ ಕುತ ಇಯಂ ವಿಸೃಷ್ಟಿಃ ।
ಅರ್ವಾಗ್ ದೇವಾ ಅಸ್ಯ ವಿಸರ್ಜನೇನಾಥಾ
ಕೋ ವೇದ ಯತ ಆಬಭೂವ ॥ ॥ ೬ ॥

ಇಯಂ ವಿಸೃಷ್ಟಿರ್ಯತ ಆಬಭೂವ
ಯದಿ ವಾ ದಧೇ ಯದಿ ವಾ ನ ।
ಯೋ ಅಸ್ಯಾಧ್ಯಕ್ಷಃ ಪರಮೇವ್ಯೋಮನ್
ಸೋ ಅಂಗ ವೇದ ಯದಿ ವಾ ನವೇದ ॥ ೭ ॥

ಹರಡಿದುದು ಸೃಷ್ಟಿಕ್ರಿಯಾರಶ್ಮಿಯೆತ್ತಲುಂ ।
ಹರಡಿದುದು ಮೇಲೆಡೆಗೆ ಕೆಳಗಡೆಗೆ ವಿಸ್ತೃತಂ ।
ಹರಡಿದುದು ಬಿಡದೊಡನೆ ಮಿಗಿಲಡ್ಡಲಾಗಿಯುಂ ।
ಉರೆಶ್ರೇಷ್ಠ ಭೋಕ್ತೃವೆನೆ ಭೋಗ್ಯ ವರ್ಗಕಿಂ ।
ಹೊರ ಹೊಮ್ಮಿದುವು ಮಹಾಂತಸುಭೋಗ್ಯ ವರ್ಗಗಳ್ ।
ನೆರೆ ಬೀಜ ಭೂತ ಕರ್ಮದ ಕರ್ತೃ ಭೋಕ್ತೃಗಳ್ । ॥ ೫ ॥

ಯಾವನವನೀ ವಿವಿಧ ಸೃಷ್ಟಿಯಂ ಸೃಜಿಸಿದಂ ।
ಯಾವುದರಿನೀ ವಿವಿದ ಸೃಷ್ಟಿಯಂ ಸೃಜಿಸಿದಂ ।
ದೇವತೆಗಳುಮೀಜಗದ ಸೃಷ್ಟಿಯನಂತರಂ
ಆವಿರ್ಭವಿಸಿದರೆನೆ ತಿಳಿಯರದನೇನುನುಂ । ॥ ೬ ॥

ಸೃಷ್ಟಿ ವೈವಿಧ್ಯಮಂ ಪೊರೆಯೆ ಪೊರೆಯದಿರಲುಂ ।
ಸೃಷ್ಟಿಸಿದ ಕರ್ತನೇ ಅಧಿಕಾರಿಯಾಗಿಹಂ ।
ಸೃಷ್ಟಿಯಧ್ಯಕ್ಷ ಪರಮವ್ಯೋಮನಂದಿಹಂ ।
ಸೃಷ್ಟಿ ವಿಷಯವನಲ್ಲದಿರಲ್ ತಿಳಿಯರಾರುಂ । ॥ ೭ ॥

ಋಗ್ವೇದದ ದಶಮ ಮಂಡಲದಲ್ಲಿ ೧೨೯ ನೆಯ ಸೂಕ್ತವೇ ನಾಸದೀಯ ಸೂಕ್ತವು ಪ್ರಜಾಪತಿ ಪರಮೇಷ್ಠೀ ಈ ಸೂಕ್ತದ ಋಷಿಯು ; ಪರಮಾತ್ಮನೇ ಈ ಸೂಕ್ತಕ್ಕೆ ದೇವತೆಯು ; ಇದರಲ್ಲಿ ಏಳು ಮಂತ್ರಗಳಿವೆ. ಇವುಗಳಲ್ಲಿ ಸೃಷ್ಟಿಯು ಆವಿರ್ಭಾವವಾಗುವುದನ್ನು ಹೇಳಿದೆ. ಇದಲ್ಲದೆ ಋಗ್ವೇದದಲ್ಲಿ ಅಘಮರ್ಷಣ, ಬ್ರಹ್ಮಣಸ್ಪತಿ, ದೀರ್ಘತಮಸ್ ಹಿರಣ್ಯಗರ್ಭ ಮೊದಲಾದ ಋಷಿಗಳಿಂದ, ಸೃಷ್ಟಿಯ ವಿಷಯವು ಹೇಳಲ್ಪಟ್ಟಿದೆ. ಇವರಲ್ಲಿ ಭಿನ್ನಾಭಿಪ್ರಾಯಗಳು ಇರುವುವಾದರೂ ಒಮ್ಮತವು ಕೆಲವು ವಿಷಯಗಳಲ್ಲುಂಟು. ಸೃಷ್ಟಿಯನ್ನು ಸೃಷ್ಟಿಕರ್ತನು ಏತರಿಂದ ಏತರ ಮೇಲೆ ನಿಂತು ಮಾಡಿದನು ಎಂಬ ಪ್ರಶ್ನೆಗಳು ಎದ್ದಿವೆ. ಪುರುಷನು, ತನ್ನೊಳಗಿನಿಂದಲೇ ಸೃಷ್ಟಿಯನ್ನು ಮಾಡಿದನೆಂದು ಹೇಳುವ ಪುರುಷ ಸೂಕ್ತವು ಶ್ರೇಷ್ಠವಾದುದು. ಸದಸತ್ತುಗಳ ಕಲ್ಪನೆಯೂ ಬಂದುದುಂಟು. ಸೃಷ್ಟಿಗಿಂತಲೂ ಮೊದಲು ಇದ್ದುದನ್ನು ಸತ್ ಎಂದೋ ಅಸತ್ ಎಂದೋ ಕರೆಯುವುದನ್ನು ಉಪನಿಷತ್ತುಗಳಲ್ಲಿ ನೋಡುವೆವಾದರೂ ಋಗ್ವೇದದಲ್ಲಿಯೂ ಜಗದಾದಿ ತತ್ತ್ವವನ್ನು ಹೀಗೆಯೇ ಬೇರೆ ಬೇರೆ ಹೆಸರಿನಿಂದ ಕರೆಯುವುದು ಇರಲಿಲ್ಲವೆನ್ನಲಾಗದು. 'ದೇವಾನಾಂ ಪೂರ್ವ್ಯೇಯುಗೇಽಸತಃ ಸದಜಾಯತ' ಎಂದು ಋಗ್ವೇದದ ೧೦ ನೆಯ ಮಂಡಲದ ೭೨ನೆಯ ಸೂಕ್ತದ ಎರಡನೆಯ ಮಂತ್ರದಲ್ಲಿ ಹೇಳಿದೆ. ಅದರ ಮುಂದಿನ ಮಂತ್ರದಲ್ಲಿಯೇ ಮತ್ತೆ 'ದೇವಾನಾಂ ಯುಗೇ ಪ್ರಥಮೇಽಸತಃ ಸದಜಾಯತ' ಎಂದು ಹೇಳಿದೆ. ಇದರಲ್ಲಿ ಸೃಷ್ಟಿಗೆ ಪೂರ್ವದಲ್ಲಿ ಇದ್ದುದಕ್ಕೆ 'ಅಸತ್' ಎಂದೂ ಅದರಿಂದ 'ಸತ್' ಹುಟ್ಟಿತೆಂದೂ ಹೇಳಿದೆ. ಆದರೆ ಋಗ್ವೇದದ ಮೊದಲನೆಯ ಮಂಡಲದಲ್ಲಿಯೇ 'ಏಕಂ ಸದ್ವಿಪ್ರಾ ಬಹುಧಾ ವದಂತಿ' ಎಂದೂ, ದಶಮ ಮಂಡಲದಲ್ಲಿ (೧೦-೧೧೪-೫) ಏಕಂ ಸಂತು ಬಹುದಾ ಕಲ್ಪಯಂತಿ' ಎಂದೂ ಹೇಳಿದೆ. ಹೀಗೆ ಜಗತ್ತಿಗೆ ಮೂಲವಾದುದನ್ನು ಕೆಲವು ಕಡೆ 'ಅಸತ್' ಎಂದು ಕರೆದರೆ, ಕೆಲವು ಕಡೆ 'ಸತ್' ಎಂದು ಕರೆಯಲಾಗಿದೆ. 'ಆಪೋ ಹ ಯದ್ ಬೃಹತೀರ್ವಿಶ್ವಮಾಯನ್ ಗರ್ಭಂ ದಧಾನಾ ಜನಯಂತೀರಗ್ನಿಂ' (೧೦-೧೨೧-೭) ಎಂಬ ಋಗ್ವೇದ ಮಂತ್ರದಲ್ಲಿ ಮೊದಲು ಇದ್ದುದು ನೀರೇ ಎಂದು ಹೇಳಿದೆ,

ಆದರೂ ನಾಸದೀಯ ಸೂಕ್ತದ ಋಷಿಯು ಈ ಹೇಳಿಕೆಗಳಲ್ಲಿ ಯಾವುದು ಸರಿ ಎಂಬುದನ್ನು ವಿಮರ್ಶಿಸದೆ ಸತ್, ಅಸತ್, ಮೊದಲಾದ ಕಲ್ಪನೆಗಳು ಸೃಷ್ಟಿಯಾದ ಅನಂತರ ಬಂದವುಗಳಾದುದರಿಂದ, ಸತ್, ಅಸತ್, ಜಲ, ಕತ್ತಲೆ, ಬೆಳಕು, ಭೂಮಿ, ಆಕಾಶ ಮೊದಲಾದ ಕಲ್ಪನೆಗಳು ಬರುವ ಮೊದಲೇ ಇವುಗಳೆಲ್ಲಕ್ಕೂ ಮೀರಿದ ತತ್ತ್ವವೊಂದು ಹೊರತು ಮತ್ತೇನೂ ಇರಲಿಲ್ಲವೆಂದೂ, ಮತ್ತೇನಿಲ್ಲವೆ ಇದ್ದುದದೊಂದು ತತ್ತ್ವವು ಚೈತನ್ಯವುಳ್ಳುದಾಗಿ ವಾಯುವಿಲ್ಲದೆ ಹೋದರೂ, ಸ್ವಶಕ್ತಿಯಿಂದ ಸ್ಫುರಿಸುತ್ತಿದ್ದಿತೆಂದೂ ಮೊದಲೆರಡು ಮಂತ್ರಗಳಲ್ಲಿ ಹೇಳಿದೆ. ಗಹನವೂ ಗಭೀರವೂ ಆದ ಸಲಿಲವು ಮೊದಲಿಲ್ಲದುದು ಹೊರಹೊಮ್ಮಿತೆಂದು ಹೇಳಿರುವುದನ್ನು ಸ್ಪಷ್ಟ ಮಾಡುವಂತೆ 'ತುಚ್ಛೇನ' ಎಂದರೆ ಮಾಯಾ ಶಕ್ತಿಯಿಂದ 'ಆಭು' ಎಂದರೆ, ಪರಬ್ರಹ್ಮವು ಅಪಿಹಿತವಾಗಿರುವುದನ್ನು ಅರ್ಥಾತ್ ಪರಶಿವಬ್ರಹ್ಮವು ಸೃಷ್ಟಿಕ್ರಿಯೆಗಾಗಿ ಶಕ್ತಿವಿಶಿಷ್ಟವಾದುದನ್ನು ಮೂರನೆಯ ಮಂತ್ರದಲ್ಲಿ ಹೇಳಿದೆ. ಇದರಲ್ಲಿಯೂ ನಾಲ್ಕನೆಯ ಮಂತ್ರದಲ್ಲಿಯೂ ಇಚ್ಛಾಜ್ಞಾನ ಕ್ರಿಯಾ ಶಕ್ತಿಗಳು ಹೊರಹೊಮ್ಮಿ ಸೃಷ್ಟಿಗಾರಂಭವಾಗುವುದನ್ನು ಹೇಳಿದೆ. ಇನ್ನು ಐದನೆಯ ಮಂತ್ರದಲ್ಲಿ ಸೃಷ್ಟಿ ಕ್ರಿಯೆಯು ಉದಯ ಕಾಲದ ಸೂರ್ಯರಶ್ಮಿಯು ಹರಡುವಂತೆ ಹರಡಿ ಭೋಕ್ತೃಭೋಗ್ಯಾದಿ ರೂಪವಾದ ಜಗವು ಪ್ರಸರಿಸುವುದನ್ನು ಹೇಳಿದೆ. ಇಷ್ಟೊಂದು ಪ್ರೌಢಿಮೆಯಿಂದ ಸೃಷ್ಟಿಕ್ರಿಯೆಯನ್ನು ವಿವರಿಸಿದ ಕವಿಯಲ್ಲಿ ನಮ್ರತೆ ಇದೆ. ದೇವತೆಗಳೂ ಸೃಷ್ಟಿಯೊಳಗಾದವರೇ ಆದುದರಿಂದ ಯಾರು ತಾನೆ 'ಇದಮಿತ್ಥಂ' ಎಂದು ಸೃಷ್ಟಿ ಕ್ರಿಯೆಯನ್ನು ಹೇಳಬಲ್ಲರು—ಎಂದಿದ್ದಾರೆ, ಆ ಕವಿ ಮಹರ್ಷಿ, ಆರನೆಯ ಮಂತ್ರದಲ್ಲಿ. ಎಲ್ಲವನ್ನು ಸೃಷ್ಟಿಸಿ ಅದರ ರಕ್ಷಣೆಯ ಭಾರವನ್ನು ಹೊತ್ತ ಪರಮಾತ್ಮನೇ ಸೃಷ್ಟಿ ಕ್ರಿಯೆಯ ವಿಷಯವನ್ನು ಬಲ್ಲನು ಅಥವಾ ಅವನಿಗೂ ತಿಳಿಯದೇನೊ—ಎಂಬ ಆಶ್ಚರ್ಯದ ಉದ್ಗಾರವಿದೆ ಕೊನೆಯ ಮಂತ್ರದಲ್ಲಿ.

ಇಂಗ್ಲೀಷನ್ನು ವಿಶೇಷವಾಗಿ ಓದಿದ ಇಂದಿನವರಿಗೆ, ಕೆಲವು ವೇಳೆ ಕನ್ನಡದಲ್ಲಿ ಹೇಳಿದುದರ ಅರ್ಥವು ಗ್ರಾಹ್ಯವಾಗುವುದಕ್ಕಿಂತ ಇಂಗ್ಲೀಷ್‌ನಲ್ಲಿ

ಹೇಳಿರುವುದನ್ನು ಓದಿದರೆ ಹೆಚ್ಚು ಗ್ರಾಹ್ಯವಾಗುವುದುಂಟೆಂದು ನಾಸದೀಯ ಸೂಕ್ತದ ಇಂಗ್ಲೀಷ್ ಭಾಷಾಂತರವನ್ನು ಈ ಕೆಳಗೆ ಕೊಟ್ಟಿದೆ:—

## THE SONG OF CREATION

1. Then was not non-existent nor existent: there was no realm of air, no sky beyond it.

   What covered in and where? and what gave shelter?

   Was water there, unfathomed depth of water?

2. Death was not then, nor was there aught immortal; no sign was there the day's and night's divider.

   That One thing breathless breathed by its own nature: apart from it was nothing whatsoever.

3. Darkness there was: at first concealed in darkness, this All was indiscriminated chaos.

   All that existed then was void and formless: by the great power of warmth was born that unit.

4. There after rose desire in the beginning, D esire the Primal seed and germof spirit Sages who searched with their heart's thought discovered the existent's kinship in the non-existent.

5. Transversely was their severing line extended. What was above it then, and what below it ?

There were begetters, there were mighty forces free action here and energy up yonder

6. Who verily knows and who can here declare it, whence it was born and whence comes this creation ?

The gods are later than this world's production. Who knows then, whence it first came into being?

7. He, the first origin of this creation, whether he formed it all or did not form it,

Whose eye controls this world in highest heaven, he verily knows it or perhaps he knows not.

*(Theology and Philosophy, Pages 36, 37 Every Man's Library Edition)*

# ದ್ವಿತೀಯ ದರ್ಶನ

ಋಗ್ವೇದವು, ಆರ್ಯಋಷಿ ಪುಂಗವರು ನಿಸರ್ಗ ದೇವತೆಗಳನ್ನು ಸ್ತವಿಸಿದ ಸೂಕ್ತಗಳ ಸಂಗ್ರಹವೆಂದರೆ ತಪ್ಪಾಗದು; ಆದರೆ ಹೀಗೆ ಹೇಳುವುದರಲ್ಲಿ ಋಗ್ವೇದದ ಋಷಿಗಳು ವಿಚಾರಾತ್ಮಕರಲ್ಲವೆಂಬ ಭಾವನೆಯಾಗಲೀ, ಅಂತರಾತ್ಮನ ಕಡೆಗೆ ದೃಷ್ಟಿಯನ್ನು ಹಾಯಿಸಿರುವವರಲ್ಲವೆಂಬ ಭಾವನೆಯಾಗಲೀ ಬರುವುದಾದರೆ, ತಪ್ಪಾಗುವುದು. ಏಕೆಂದರೆ, ವಚನೋಪನಿಷತ್ತಿನ ಪ್ರಾರಂಭದಲ್ಲಿಯೇ ವಿಶದೀಕರಿಸಿರುವಂತೆ ಋಗ್ವೇದದ ಋಷಿಗಳ ದೃಷ್ಟಿಯು ವಿಚಾರಪೂರಿತವಾದುದಾಗಿದ್ದುದಲ್ಲದೆ ಅಂತರಾತ್ಮನ ಕಡೆಗೆ ಒಲಿದಿದ್ದುದು ಋಗ್ವೇದದ ಅಂತ್ಯ ಭಾಗದಲ್ಲಿ ಕಂಡುಬರುವುದು. ಇಂದ್ರಾಗ್ನಿ ವರುಣಾದಿ ನಿಸರ್ಗ ದೇವತೆಗಳ ಸ್ತೋತ್ರದಲ್ಲಿ ಮಗ್ನರಾಗಿದ್ದವರಲ್ಲಿ ಯಾವ ದೇವತೆಯನ್ನು ಆರಾಧಿಸಬೇಕೆಂಬ ಚಿಕಿತ್ಸಕ ಬುದ್ಧಿಯು ಬಂದಿತೆಂಬುದು 'ಕಸ್ಮೈ ದೇವಾಯ ಹವಿಷಾ ವಿಧೇಮ' ಎಂಬ ಪ್ರಶ್ನೆಯು ಪಲ್ಲವಿಯಿರುವ ಮಂತ್ರಗಳಿಂದ ತಿಳಿದು ಬರುವುದು. ಹಾಗೆಯೇ, 'ವಿ ತ್ವಾ ಪತಃ ಶೇವಜ್ಞೋ ವಿದ್ಯಾಮ ಶೂರ ನವ್ಯಸಃ' ಎಂದರೆ-ಎಲೈ ಶೂರನೇ ನೀನು ಯಾರೆಂದು ಹೊಸದಾಗಿ ತಿಳಿಯೋಣ-ಎಂಬ ಅರ್ಥವಿರುವ ನುಡಿಯಲ್ಲಿ 'ನವ್ಯಸಃ' ಎಂಬ ಪದವು ಗಮನಾರ್ಹವಾಗಿದೆ; ಹಿಂದೇ ತಿಳಿದಿದ್ದುದನ್ನೇ ಮತ್ತೆ ಪರ್ಯಾಲೋಚನೆಗೆ ಒಳಗಾಗಿಸಿದುದು ಈ ಪದದಿಂದ ತಿಳಿದು ಬರುತ್ತದೆ.

ಪ್ರತಿಯೊಂದು ದೇವತೆಯನ್ನು ಪ್ರಾರ್ಥಿಸುವಾಗಲೂ ಆ ದೇವತೆಯೇ ಎಲ್ಲ ದೇವತೆಗಳಿಗಿಂತಲೂ ಶ್ರೇಷ್ಠವೆಂದು ಪ್ರಾರ್ಥಿಸುವ ಪದ್ಧತಿಯಲ್ಲಿ ಬೇರು ಹುಟ್ಟಿ 'ಏಕಂ ಸದ್ ವಿಪ್ರಾ ಬಹುಧಾ ವದಂತಿ' ಎಂದರೆ 'ದೇವನೊಬ್ಬ ನಾಮ ಹಲವು' ಎಂಬ ಭಾವನೆಯು ಬಲಿದುಬಂದುದು ಕಂಡು ಬರುತ್ತದೆ. ಅಶಾಶ್ವತವಾದ ಇಹಪರ ಸುಖಕ್ಕಾಗಿ, ಯಜ್ಞ ಯಾಗಾದಿಗಳಿಂದ ದೇವತೆಗಳನ್ನು ತೃಪ್ತಿಪಡಿಸುವುದರ ಬದಲು ಅಮೃತ ರೂಪವಾದ ಮೋಕ್ಷ ಸಾಮ್ರಾಜ್ಯಕ್ಕಾಗಿ ತ್ರಿಮೂರ್ತಿಗಳಿಗೂ ಕಾರಣವಾದ ತ್ರ್ಯಂಬಕನನ್ನು ಪ್ರಾರ್ಥಿಸುತ್ತಿದ್ದುದು ಕೆಳಗಿನ ಋಗ್ವೇದ ಮಂತ್ರದಿಂದ ಕಂಡು ಬರುತ್ತದೆ.

ತ್ರ್ಯಂಬಕನೆಂದರೆ ತ್ರಿಮೂರ್ತಿಗಳಿಗೂ ಕಾರಣನೆಂಬುದು ಸಾಯಣ ಭಾಷ್ಯದಿಂದ ತಿಳಿದು ಬರುತ್ತದೆ.

"*ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್||"

ಸೃಷ್ಟಿ ವೈಚಿತ್ರ್ಯವು ಋಷಿಗಳ ಚಿಕಿತ್ಸಕ ಬುದ್ಧಿಗೆ ಗೋಚರಿಸದೇ ಹೋಗಲಿಲ್ಲ. ಬಾಹ್ಯ ಜಗತ್ತು ಸೃಷ್ಟಿಯಾದುದು ಹೇಗೆ?

ಕಿಂಸ್ವಿದ್ ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾ ಪೃಥಿವೀ ನಿಷ್ಟತಕ್ಷುಃ| ಮನೀಷಿಣೋ ಮನಸಾ ಪೃಚ್ಛತೇದು ತದ್ಯದಧ್ಯತಿಷ್ಠದ್ ಭುವನಾನಿ ಧಾರಯನ್ || ಋ ೧೦-೮೧-೪

ಮನೆಯನ್ನು ಕಟ್ಟಲು ಮರಗಳು ಬೇಕು. ಅವನ್ನು ಕಾಡಿನಲ್ಲಿ ಕಡಿದು ತರಬೇಕು. ಆದರೆ ಜಗತ್ತನ್ನು ಕಟ್ಟಲು ವೃಕ್ಷ ಯಾವುದು? ಆ ವೃಕ್ಷವು ಬೆಳೆದ ವನವಾವುದು? ಲೋಕಗಳನ್ನು ಹೊತ್ತು ನಿಲ್ಲಲು ಸ್ಥಳವಾವುದು? ಈ ಪ್ರಶ್ನೆಗಳೆದ್ದವು? ಮಡಕೆ ಮಾಡಲು ಕುಂಬಾರನೊಬ್ಬ ಬೇಕು, ಮಣ್ಣುಬೇಕು, ಮಾಡುವ ಆಯುಧಬೇಕು. ಕುಂಬಾರನು ನಿಮಿತ್ತ ಕಾರಣ; ಮಣ್ಣು ಉಪಾದಾನ ಕಾರಣ; ಆಯುಧ ಸಹಕಾರಿ ಕಾರಣ. ಸೃಷ್ಟಿಕರ್ತನು ನಿಮಿತ್ತ ಕಾರಣನಾದರೆ ಅವನಿಗಿಂತಲೂ ಅನ್ಯವಾದ ಉಪಾದಾನ ಕಾರಣ ಮತ್ತು ಸಹಕಾರಿ ಕಾರಣಗಳಾವುವು? ಸೃಷ್ಟಿಕರ್ತನಿಗೆ ಅನ್ಯವಾದುದೇನು ಸೃಷ್ಟಿಗೆ ಮೊದಲೇ ಇರಲು ಹೇಗೆ ಸಾಧ್ಯ? ಆದುದರಿಂದ ಪರಮ ಪುರುಷನಾದ ಸೃಷ್ಟಿಕರ್ತನು ತನ್ನ ದೇಹದೊಳಗಿನಿಂದಲೇ ಎಲ್ಲವನ್ನು ಸೃಜಿಸಿದನೆಂಬ ಕಲ್ಪನೆ ಋಷಿಗಳಿಗೆ ಹೊಳೆದಿರಬೇಕು. ಇದೇ ಪುರುಷ ಸೂಕ್ತದಲ್ಲಿ ಕಂಡುಬರುವ ಕಲ್ಪನೆ.

---

*ಅರ್ಥ: ಸುಗಂಧಿಂ-ಪ್ರಸಾರಿತ ಪುಣ್ಯ ಕೀರ್ತಿ ರೂಪ, ಸುಗಂಧವುಳ್ಳವನೂ, ಪುಷ್ಟಿವರ್ಧನಂ-ಜಗತ್ ಪುಷ್ಟಿಯನ್ನು ಹೆಚ್ಚಿಸುವವನೂ ಆದ, ತ್ರ್ಯಂಬಕಂ-ತ್ರಿಮೂರ್ತಿಗಳಿಗೂ ಜನ್ಮದಾಯಕ ಪರಶಿವ ತತ್ತ್ವವನ್ನು, ಯಜಾಮಹೇ-ಪೂಜಿಸುತ್ತೇವೆ. ಬಂಧನಾತ್-ತೊಟ್ಟಿನಿಂದ, ಉರ್ವಾರುಕಮಿವ-ಉರ್ವಾರುಕ ಫಲವು ಕಳಚಿ ಬೀಳುವಂತೆ, ಮೃತ್ಯೋಃ-ಮರಣ ಧರ್ಮವುಳ್ಳ ಸಂಸಾರದಿಂದ, ಮುಕ್ಷೀಯ-ಬಿಡುಗಡೆ ಹೊಂದುವಂತಾಗಲಿ, ಮಾಮೃತಾತ್-ಅಮೃತತ್ವದಿಂದ ದೂರವಾಗದಿರಲಿ.

ಸಾಯಣಭಾಷ್ಯ ತ್ರ್ಯಂಬಕಂ- 'ತ್ರಯಾಣಾಂ ಬ್ರಹ್ಮವಿಷ್ಣು ರುದ್ರಾಣಾಂ ಪಿತರಂ'

(*) ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ |
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ|| ಋ ೧೦-೯೦-೧೩

ಪರಮಪುರುಷನ ಮನಸ್ಸಿನಿಂದ ಚಂದ್ರನೂ, ಕಣ್ಣಿನಿಂದ ಸೂರ್ಯನೂ, ಮುಖದಿಂದ ಇಂದ್ರಾಗ್ನಿಗಳೂ, ಪ್ರಾಣದಿಂದ ವಾಯುವೂ ಹುಟ್ಟಿದರೆಂದು ಈ ಮಂತ್ರದಲ್ಲಿ ಹೇಳಿದೆ ಈ ಕಲ್ಪನೆಯಲ್ಲಿ ನಿಮಿತ್ತ ಕಾರಣನಾದ ಪರಮ ಪುರುಷನೇ ಉಪಾದಾನ ಕಾರಣವೂ ಆದನು ; ಬೇರೆ ಸಹಕಾರಿ ಕಾರಣವಾವುದೂ ಅವಶ್ಯವಿಲ್ಲವೆಂಪಾಯಿತು. ಇದಕ್ಕೆ ಅನುಸಾರವಾದ ಉದಾಹರಣೆಯು "ಯಥೋರ್ಣನಾಭಿಃ ಸೃಜತೇ ಗೃಹ್ಣತೇಚ" ಎಂದು ಪ್ರಾರಂಭವಾಗುವ ಮುಂಡಕೋಪನಿಷತ್ತಿನ ಮಂತ್ರದಲ್ಲಿದೆ. ಜೇಡನು ತನ್ನೊಳಗಿನಿಂದಲೇ ತಂತುವನ್ನು ಎಳೆದುಕೊಂಡು ತಂತುಜಾಲವನ್ನು ನಿರ್ಮಿಸಿ ತನ್ನೊಳಗೇ ಬೇಕಾದಾಗ ಎಳೆದುಕೊಳ್ಳುವುದೆನ್ನುವುದರಲ್ಲಿ ನಿಮಿತ್ತೋಪಾದಾನೋಭಯ ಕಾರಣಕ್ಕೆ ಒಳ್ಳೆಯ ಉದಾಹರಣೆಯಿದೆ. "ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರ ಸೂರ್ಯೌ" ಎಂದು ನೊಡಲಾಗುವ ಮುಂಡಕಶ್ರುತಿಯು ಮೇಲಿನ ಋಗ್ವೇದದ ಮಂತ್ರದಂತೆಯೇ ಇದೆ ಆದರೆ ಮುಂಡಕ ಶ್ರುತಿಯಲ್ಲಿ ಪರಬ್ರಹ್ಮದ ಅಂಗಗಳು, ಚಂದ್ರ ಸೂರ್ಯಾದಿಗಳು ಎಂಬ ಭಾವನೆ ಬರುವಂತಿದೆ; ಮುಂಡಕ ಉಪನಿಷತ್ತಿನಲ್ಲಿಯೇ "ಬ್ರಹ್ಮೈವೇದಮಿದಂ ಸರ್ವಂ" ಇದೆಲ್ಲವೂ ಬ್ರಹ್ಮವೇ ಎಂದು ಹೇಳಿರುವುದರಲ್ಲಿಯೂ ಅದೇ ಭಾವನೆಯಿದೆ. ನಾಸದೀಯ ಸೂಕ್ತದ ಕಲ್ಪನೆಯಲ್ಲಿ ಋಷಿಗಳ ಚಿಕಿತ್ಸಕ ಬುದ್ಧಿಯು ಮುಂದುವರೆದಿದೆಯೆನ್ನುವುದಕ್ಕಿಂತ ಅದು ಅವರು ಮಂತ್ರದ್ರಷ್ಟಾರರು ಎಂಬುದನ್ನು ತೋರುವುದೆನ್ನುವುದು ಹೆಚ್ಚು ಸಮರ್ಪಕವಾದುದು. ನಾಸದೀಯ ಸೂಕ್ತದಂತೆ ಸೃಷ್ಟಿಯೊಂದು ಆವಿರ್ಭಾವ. ಈ ಆವಿರ್ಭಾವವಾದರೂ ಯಾವುದಾದರೂ ಒಂದು ವ್ಯಕ್ತಿಯಿಂದ ಆಯಿತೆಂಬ ಭಾವನೆಯು ಈ ಸೂಕ್ತದಲ್ಲಿ ಇಲ್ಲ.

(*) ಅರ್ಥ : ಮನಸಃ = ಮನಸ್ಸಿನಿಂದ, ಚಂದ್ರಮಾಃ = ಚಂದ್ರನು, ಜಾತಃ = ಹುಟ್ಟಿದನು. ಚಕ್ಷೋಃ = ಕಣ್ಣಿನಿಂದ ಸೂರ್ಯಃ = ಸೂರ್ಯನು, ಅಜಾಯತ = ಹುಟ್ಟಿದನು. ಮುಖಾತ್ = ಮುಖದಿಂದ ಇಂದ್ರಶ್ಚ ಅಗ್ನಿಶ್ಚ = ಇಂದ್ರಾಗ್ನಿಗಳು, ಪ್ರಾಣಾತ್ = ಪ್ರಾಣದಿಂದ, ವಾಯುಃ = ವಾಯುವು ಅಜಾಯತ = ಹುಟ್ಟಿದರು.

ಉಪನಿಷದ್ವಾಙ್ಮಯದಲ್ಲಿ ಸಹಾ ನಾಸದೀಯ ಸೂಕ್ತಕ್ಕಿಂತಲೂ ಮುಂದೆ ಹೋದ ಕಲ್ಪನೆಯು ಇದೆ ಎನ್ನಲಾಗುವುದಿಲ್ಲ. ಯಾವುದರಿಂದ ಜಗತ್ತು ಆವಿರ್ಭಾವವಾಯಿತೋ ಅದನ್ನು ಕೆಲವು ಕಡೆ ಉಪನಿಷತ್ತುಗಳಲ್ಲಿ 'ಸತ್' ಎಂದರೆ, ಕೆಲವು ಕಡೆ ಅದನ್ನು 'ಅಸತ್' ಎನ್ನಲಾಗಿದೆ. ಅಸತ್ತಿನಿಂದ ಸತ್ ಹೇಗೆ ಉದಯವಾದೀತು ಎಂಬ ಪ್ರಶ್ನೆ ಸಹಾ ಎದ್ದಿದೆ. ಮುಂದೆ ಈ ವಿಷಯವನ್ನು ಆಧಾರಗಳಿಂದ ಸ್ಪಷ್ಟಪಡಿಸಲಾಗುವುದು. ಇಲ್ಲಿ ಹೇಳಬೇಕಾದುದಿಷ್ಟೆ. ಸತ್-ಅಸತ್, ಭೂಮಿ-ಆಕಾಶ, ಇಹ ಲೋಕ-ಪರಲೋಕ, ಹಗಲು-ರಾತ್ರಿ, ಸೂರ್ಯ-ಚಂದ್ರ ಮೊದಲಾದ ದ್ವಂದಗಳಾಚೆಗೆ ಇವುಗಳನ್ನೆಲ್ಲ ಮೀರಿ ನಿಂದ ಜಗತ್ಕಾರಣವೊಂದುಂಟು; ಅದರಿಂದ ಜಗತ್ ಹೊರಹೊಮ್ಮಿದೆ—ಎಂಬ ಕಲ್ಪನೆ ನಾಸದೀಯ ಸೂಕ್ತದಲ್ಲಿದೆ. ಹಿರಿದಾದ ವಿಷಯವನ್ನು ಕಿರಿದಾದ ಸೂಕ್ತದಲ್ಲಿ ಹೇಳಿದ ವಿಷಯವನ್ನೆ ವಚನ ವಾಙ್ಮಯದಲ್ಲಿ ಜನರಾಡುವ ಮಾತಿನಲ್ಲಿ ವಿಶದೀಕರಿಸಲಾಗಿದೆ. ಅಜಹರಿಹರರೆಂಬ ತ್ರಿಮೂರ್ತಿಗಳಲ್ಲಿ ಯಾರಾದರೊಬ್ಬರಿಂದಲಾಗಲೀ ಜಗದುದಯವಾಯಿತೆಂದರೆ ಜಗತ್ಕಾರಣವು ಸದ್‌ರೂಪವಾದುದೆಂದಾಯಿತು. ಅಸತ್‌ನಿಂದ ಆಯಿತೆಂದರೆ ಅಭಾವದಿಂದ ಆಗುವುದೆಂತು? ಇಂತಹ ಗ್ರಹಿಕೆಗೆ ಬಾರದುದದನ್ನು ಅಲ್ಲಮ ಪ್ರಭುವು 'ಗಗನ ಕಮಲ ಕುಸುಮ ಪರಿಮಳದಿಂದತ್ತಲು' ಎಂದೂ, ಇದ್ದೆಯಲ್ಲಾ ಇಲ್ಲದಂತೆ ಎಂದೂ ಹೇಳಿ, ವಚನಕ್ಕೆ ನಿಲುಕದ ಅಭಿಪ್ರಾಯವನ್ನು ವಚನಮೊಳಗಾಗಿಸಿದರು.

> ಕಾಲ ಕಲ್ಪಿತಗಳಿಲ್ಲದಂದು, ಲೀಲೆ ಇಪ್ಪತ್ತೈದ ನಟಿಸದಂದು,
> ಸಾಲು ಪುಸ್ತಕ ಮಾಲೆ ಧರಿಸದಂದು...ಅಖಂಡೇಶ್ವರಾ
> ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು.
>
> ಅಸುರ ಮಾಲೆಗಳಿಲ್ಲ, ತ್ರಿಶೂಲಡಮರುಗವಿಲ್ಲ, ಬ್ರಹ್ಮಕಪಾಲವಿಲ್ಲ
> ಭಸ್ಮಭೂಷಣನಲ್ಲ ವೃಷಭವಾಹನನಲ್ಲ, ಋಷಿಗಳೊಡನಿದ್ದಾತನಲ್ಲ
> ಎನಗುವಾ ಸಂಸಾರದ ಕುರುಹಿಲ್ಲವಾತಂಗೆ ಹೆಸರಾವುದೂ ಇಲ್ಲ.

ತ್ರಿಮೂರ್ತಿಗಳಿಗೂ ಕಾರಣವಾದ ಅವ್ಯಕ್ತ ತತ್ತ್ವಕ್ಕೆ ಹೆಸರೊಂದನ್ನು ಇಟ್ಟರೆ ಅದಕ್ಕೆ ವ್ಯಕ್ತಕಲ್ಪನೆ ಬಂದೀತೆಂಬ ಭಯದಿಂದ ಈ ವಚನಕಾರನು ಅದಕ್ಕೆ ಹೆಸರಾವುದೂ ಇಲ್ಲವೆಂದಿರುವನು. ವಾಚನವಾಙ್ಮಯದ ಸೃಷ್ಟಿ ವಚನಗಳು ನಾಸದೀಯ ಸೂಕ್ತದ ನಿಲುವನ್ನು ತಿಳಿಯಲು ಸಹಾಯಕ

ವಾದುದರಿಂದ ಅವುಗಳ ಸಹಾಯದಿಂದಲೇ ನಾಸದೀಯ ಸೂಕ್ತವನ್ನು ಅರಿಯ
ಬೇಕು. ನಾಸದೀಯ ಸೂಕ್ತದ ಮೊದಲನೆಯ ಮಂತ್ರವು ಸೃಷ್ಟಿಯು
ಇನ್ನೂ ಹೊರಹೊಮ್ಮದ ಸ್ಥಿತಿಯನ್ನು ತಿಳಿಸುತ್ತದೆ. ಸೃಷ್ಟಿಯಾಗಲು
ಪರಮ ತತ್ತ್ವದಿಂದ ಶಕ್ತಿಯು ಆವಿರ್ಭವಿಸಿ ಅದರೊಡನೆ ಸೇರಬೇಕು. ಶ್ರೀ
ಶಂಕರಾಚಾರ್ಯರು, ಅವರ ಆನಂದಲಹರಿಯಲ್ಲಿ ಪರಮ ತತ್ತ್ವವನ್ನು
ಮಂಗಳ ಎಂಬ ಅರ್ಥವುಳ್ಳ "ಶಿವ" ಪದದಿಂದ ನಿರ್ದೇಶಿಸಿರುವರು. ಶಿವಾಭಿನ್ನ
ವಾದ ಶಕ್ತಿಯು ಹೊರಹೊಮ್ಮಿ ಶಿವನು ಶಕ್ತಿನಿಶಿಷ್ಟನಾದ ಹೊರತು ಸೃಷ್ಟಿ
ಯಾಗಲು ಸ್ಪಂದ ಸಹಾ ಆಗುವುದಿಲ್ಲವೆಂಬುದು ಶಿವಶ್ಶಕ್ತ್ಯಾ ಯುಕ್ತೋ
ಯದಿ ಭವತಿ ಶಕ್ತಃ ಪ್ರಭವಿತುಂ । ನಚೇದೇವಂ ದೇವೋ ನಖಲು
ಸ್ಪಂದಿತುಮಪಿ ಎಂದು ಪ್ರಾರಂಭವಾಗುವ ಆನಂದಲಹರಿಯ ಮೊದಲನೆಯ
ಪದ್ಯದ ಅಭಿಪ್ರಾಯ. ಈ ಸ್ಪಂದದಿಂದಲೇ ನಾದ, ಅದೇ 'ಉಲುಹು'.
(Vibration giving rise to noise) ಸೃಷ್ಟಿ ಪೂರ್ವ ಸ್ಥಿತಿಯಲ್ಲಿ
ಈ 'ಉಲುಹು' ಅಡಗಿರುತ್ತದೆ.

> ಆದಿ ಅನಾದಿ ಇಲ್ಲದಂದು, ಶೂನ್ಯ ಮಹಾಶೂನ್ಯವಿಲ್ಲದಂದು, ಸ್ಥೂಲ
> ಸೂಕ್ಷ್ಮವಿಲ್ಲದಂದು ಸಾಕಾರನಿರಾಕಾರವಿಲ್ಲದಂದು, ವಾಕು, ಪಾಣಿ
> ದಂದು ದ್ವೈತಾದ್ವೈತವಿಲ್ಲದಂದು ಶಂಕರ ಶಶಿಧರ ಈಶ್ವರರೆಂಬ
> ಗಣಾಧೀಶ್ವರರಿಲ್ಲದಂದು ಪ್ರವರ್ತನೆನಿವರ್ತನೆ ಇಲ್ಲದಂದು, ವೇದ
> ಕಲಾಣ ಇಲ್ಲದಂದು, ಇವರಾರೊಬ್ಬರ ನಾಮಸೀಮೆ ಇಲ್ಲದಂದು,
> ನೀನು ಉಲುಹು ಅಡಗಿದ್ದೆಯಲ್ಲಾ ಕಲಿದೇವಯ್ಯ

> ಅಂದು ಆದಿಬಿಂದು ಉದಯಿಸದಂದು, ಮಹಾಮಾಶಕ್ತಿ ಹುಟ್ಟದಂದು,
> ಪರಶಿವ ತತ್ತ್ವದಲ್ಲಿ ಚಿತ್ತು ತಲೆದೋರದಂದು,
> ಚಿತ್ತಿನಿಂದನಾದ ಬಿಂದು ಕಳೆಗಳುದಯವಾಗದಂದು,
> ನಾದಬಿಂದು ಕಳೆಗಳೊಂದಾಗಿ ಚಿತ್ಪಿಂಡ ರೂಪಿಸದಂದು,
> ಶೂನ್ಯ ಮಹಾಶೂನ್ಯವಿಲ್ಲದಂದು, ನಿಃಕಲನಿರಾಳತತ್ತ್ವನೆಂಬ ಹೆಸರಿಲ್ಲ
> ದಂದು ನಿತ್ಯನಿರಂಜನ ನೀನೊಬ್ಬನೆ ಇರ್ದೆಯಲ್ಲಾ ನಿನ್ನ ನೀನರಿಯದೆ!
> ಮಹಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ!

ಈ ವಚನಗಳಲ್ಲಿ ಹೇಗೋ ಹಾಗೆಯೇ, ನಾಸದೀಯ ಸೂಕ್ತದ ಮೊದ
ಲನೆಯ ಮಂತ್ರದಲ್ಲಿ ಪರಶಿವಬ್ರಹ್ಮದಲ್ಲಿ ಮಾಯಾ ಶಕ್ತಿಯು ಹೊರಹೊಮ್ಮದೆ
ಉಲುಹು ಅಡಗಿದ ಸ್ಥಿತಿಯನ್ನು ಹೇಳಲಾಗಿದೆ. ಅದರ ಕನ್ನಡ ಅನುವಾದ
ವನ್ನು ಮೇಲಿನ ವಚನಗಳೊಡನೆ ಅದನ್ನು ಹೋಲಿಸಲನುಕೂಲವಾಗುವಂತೆ
ಇಲ್ಲಿ ಕೊಟ್ಟಿದೆ.

ಇಲ್ಲಿ ಕೊಡಲಾಗುವ ನಾಸದೀಯ ಸೂಕ್ತದ ಕನ್ನಡ ಪದ್ಯಾನುವಾದ ವನ್ನು ಗ್ರಹಿಸುವ ಮೊದಲು ನಾಸದೀಯ ಸೂಕ್ತವೇ ಮೂಲಾಧಾರವಾಗಿ ರುವ ವಚನಕಾರರಾದ ಶರಣರ ನಿಲುವೇನೆಂಬುದನ್ನು ಸೂಕ್ಷ್ಮವಾಗಿ ವಿವರಿಸುವುದನ್ನು ಅವಲೋಕಿಸಿದರೆ ತುಲನಾತ್ಮಕ ವಿವೇಚನೆಗೆ ಸಹಾಯ ವಾಗುವುದು. ನಾಸದೀಯ ಸೂಕ್ತದಲ್ಲಿ ಹೇಳಿರುವ ಸವಸತ್‌ರವಿಶಶಿದಿನ ನಿಶಿಗಳಿಲ್ಲವಾಗ ಶಕ್ತಿಯುಂಬ ಹೊರಹೊಮ್ಮದಿದ್ದರೂ ತನ್ನಲ್ಲಿ ಅದ್ವಿತೀಯ ವಾಗಿ ತನ್ನ ಸ್ವರೂಪವೇ ಆದ ಶಕ್ತಿಯಿಂದ ಸ್ಫುರುಸುತ್ತಿದ್ದ ಪರತತ್ತ್ವವನ್ನು 'ತದೇಕಂ ತಸ್ಮಾದ್ಧಾನ್ಯತ್ ನ ಪರಃ ಎಂದು ಆ ಸೂಕ್ತದಲ್ಲಿಯೇ ಹೇಳಿದೆ ಯಷ್ಟೆ. ಶರಣರು ಹೇಳುವ ಸರ್ವಶೂನ್ಯ ನಿರಾಲಂಬ ಬ್ರಹ್ಮದ ಸ್ಥಲವು ಅದೇ. ನಾಸದೀಯ ಸೂಕ್ತದಲ್ಲಿ ಸೂಕ್ಷ್ಮವಾಗಿ ಹೇಳಿರುವ ಜಗತ್ ಸೃಷ್ಟಿ ವಿಷಯವನ್ನು ಉಪನಿಷತ್ಕಾರರೂ, ವಚನಕಾರರೂ ವಿಸ್ತರಿಸಿಕೊಂಡಿ ದ್ದಾರೆ. "ಯದಾ ತಮಃ, ನ ದಿವಾ, ನ ರಾತ್ರಿಃ, ನ ಸತ್, ನಚಾ ಸತ್, ಶಿವ ಏವ ಕೇವಲಃ" ಎನ್ನುವ ಶ್ವೇತಾಶ್ವತರ ಶ್ರುತಿಯಲ್ಲಿ ಮೇಲೆ ಹೇಳಿದ ಪರತತ್ತ್ವವನ್ನು ''ಶಿವ ಏವ'' ಎಂದು ಕರೆಯಲಾಗಿದೆ ಈ ಕಲ್ಪನೆಯನ್ನೇ ಶಿವಮಹಾಪುರಾಣದಲ್ಲಿಯೂ ಅದನ್ನು ಅನುಸರಿಸಿರುವ ಶ್ರೀಕಂಠ, ಶ್ರೀಕರ ಭಾಷ್ಯಗಳಲ್ಲಿಯೂ ಸಿದ್ಧಾಂತಶಿಖಾಮಣಿಯಲ್ಲಿಯೂ ವಿಸ್ತರಿಸಲಾಗಿದೆ. ನಾಸದೀಯ ಸೂಕ್ತದ ಮುಂದಿನ ಮಂತ್ರಗಳಲ್ಲಿ ಹೇಳಿರುವ ಇಚ್ಛಾಜ್ಞಾನಕ್ರಿಯಾಶಕ್ತಿಗಳ ಆವಿರ್ಭಾವದಿಂದ ಪರಶಿವತತ್ತ್ವವು ಭೋಕ್ತೃ, ಭೋಗ್ಯ, ಪ್ರೇರಕವೆಂಬ ತ್ರಿವಿಧವಾಗಿ ಆದುದನ್ನು ಶ್ವೇತಾಶ್ವತ ರೋಪನಿಷತ್ತು ಮೊದಲಾದ ಮೇಲೆ ಹೇಳಿದ ಆಧಾರಗಳು ವಿಸ್ತರಿಸಿ ಹೇಳಿವೆ. ಶ್ರೀಕಂಠ ಶ್ರೀಕರ ಭಾಷ್ಯಗಳಿಗೆ ಮುಖ್ಯ ಆಧಾರವಾಗಿರುವ ಶಿವಮಹಾ ಪುರಾಣದ ಅನೇಕ ಆಧಾರಗಳು ಆ ಭಾಷ್ಯಗಳಲ್ಲಿ ಉಲ್ಲೇಖವಾಗಿರುವುವು. ಅವುಗಳಲ್ಲಿ ಉಲ್ಲೇಖಾರ್ಹವಾದ ಶ್ಲೋಕವಿದು, ಪರಶಿವತತ್ತ್ವದಿಂದ ಶಕ್ತಿಯು ಹೊರಹೊಮ್ಮಿ ಜಗತ್ತಾಗುವುದನ್ನು ಹೇಳುತ್ತದೆ—

ವಿಶ್ವೋತ್ತರೋತ್ತರ ವಿಚಿತ್ರ ಮನೋರಥಸ್ಯ ।
ಯಸ್ಯೈಕ ಶಕ್ತಿ ಶಕಲೇ ಸಕಲಃ ಸಮಾಪ್ತಃ ।

ಅಧ್ವಾನಮಧ್ವಪತಿ ಮಧ್ವವಿದೋ ವದಂತಿ |
ತಸ್ಮೈ ನಮಸ್ಸಕಲ ಲೋಕ ವಿಲಕ್ಷಣಾಯ ||

ಪರಶಿವಬ್ರಹ್ಮದಿಂದ ಶಕ್ತಿಯು ಹೊರಹೊಮ್ಮಿ ಜಗತ್ತಾಗುವುದೆಂಬ ವಿಷಯದಲ್ಲಿ ಕಾಶ್ಮೀರಶೈವ ವೀರಶೈವಗಳೆರಡೂ ನಾಸದೀಯ ಸೂಕ್ತಕ್ಕೆ ಋಣಿಯಾಗಿವೆ. ವೀರಶೈವರು ಆಗಮಗಳನ್ನು ಮಾನಿಸುವರಾದುದರಿಂದ ಅವುಗಳಲ್ಲಿ ಹೇಳಿರುವ ೩೬ ತತ್ತ್ವಗಳು ಅವರಿಗೆ ಮಾನ್ಯವಾದರೂ, ಕಾಶ್ಮೀರ ಶೈವರು ಅವುಗಳ ಹೊರಹೊಮ್ಮುವಿಕೆಯಿಂದ ಸೃಷ್ಟಿ ವಿಷಯವನ್ನು ರಚಿಸಿರುವಂತೆ, ವೀರಶೈವರು ರಚಿಸುವುದಿಲ್ಲ. ಅವರ ಸಿದ್ಧಾಂತಕ್ಕೆ ವಿಶಿಷ್ಟವಾದ ಬೇರೆ ೩೬ ತತ್ತ್ವಗಳುಂಟು. ಆದರೆ ಎರಡು ಸಿದ್ಧಾಂತಗಳಿಗೂ ನಾಸದೀಯ ಸೂಕ್ತವೇ ಹಿನ್ನೆಲೆಯೆಂಬುದನ್ನು ಮರೆಯಲಾಗದು.

ಸಿದ್ಧಾಂತಶಿಖಾಮಣಿಯಲ್ಲಿ ಸೃಷ್ಟಿವೈಭವವನ್ನು ವರ್ಣಿಸುವ ಐದನೆಯ ಪರಿಚ್ಛೇದದ ಈ ಭಾಗವು ಪಠನಾರ್ಹವಾಗಿದೆ—

ಏಕ ಏವ ಶಿವಃ ಸಾಕ್ಷಾಚ್ಚಿದಾನಂದಮಯೋ ವಿಭುಃ |
ನಿರ್ವಿಕಲ್ಪೋ ನಿರಾಕಾರೋ ನಿರ್ಗುಣೋ ನಿಷ್ಪ್ರಪಂಚಕಃ || 33 ||

ಅನಾದ್ಯವಿದ್ಯಾ ಸಂಬಂಧಾತ್ ತದಂಶೋ ಜೀವನಾಮಕಃ |
ದೇವ ತಿರ್ಯಙ್ಮನುಷ್ಯಾದಿ ಜಾತಿಭೇದೇ ವ್ಯವಸ್ಥಿತಃ |
ಮಾಯೀ ಮಾಹೇಶ್ವರಸ್ತೇಷಾಂ ಪ್ರೇರಕೋ ಹೃದಿ ಸಂಸ್ಥಿತಃ || 34 ||

ಗುಣತ್ರಯಾತ್ಮಿಕಾ ಶಕ್ತಿರ್ಬ್ರಹ್ಮನಿಷ್ಠಾ ಸನಾತನೀ |
ತದ್ವೈಷಮ್ಯಾತ್ ಸಮುತ್ಪನ್ನಾ ತಸ್ಮಿನ್ ವಸ್ತುತ್ರಯಾಭಿಧಾ || 35 ||

ಕಿಂಚಿತ್ ಸತ್ತ್ವರಜೋ ರೂಪಂ ಭೋಕ್ತೃಸಂಜ್ಞಕಮುಚ್ಯತೇ |
ಅತ್ಯಂತ ತಾಮಸೋಪಾಧಿರ್ಭೋಜ್ಯಮಿತ್ಯಭಿಧೀಯತೇ || 36 ||

ಪರತತ್ತ್ವಮಯೋಪಾಧಿರ್ಬ್ರಹ್ಮ ಚೈತನ್ಯಮೀಶ್ವರಃ |
ಭೋಕ್ತಾ ಭೋಜ್ಯಂ ಪ್ರೇರಯಿತಾ ವಸ್ತುತ್ರಯಮಿದಂ ಸ್ಮೃತಂ ||37||

ಈ ಮಂತ್ರಗಳ ತಾತ್ಪರ್ಯವನ್ನು ಗಮನಿಸಿದರೆ ವೀರಶೈವರ ನಿಲುವು ವ್ಯಕ್ತವಾಗುವುದು. ದ್ವಿತೀಯರಹಿತವೂ, ವಿಕಲ್ಪರಹಿತವೂ, ಆಕಾರ

ರಹಿತವೂ, ವಿಭುವೂ, ಸಚ್ಚಿದಾನಂದಸ್ವರೂಪವೂ ಆದ ಪರಶಿವಬ್ರಹ್ಮವು ನಿಷ್ಪ್ರಪಂಚಕವಾಗಿಯೇ ಇರುವುದು. ಆದರೆ ನಿಷ್ಪ್ರಪಂಚಕವಾದ ಪರಶಿವ ಬ್ರಹ್ಮದಿಂದ ಪ್ರಪಂಚವು ಹೇಗೆ ಹೊರಹೊಮ್ಮುವುದು ಎಂಬ ಪ್ರಶ್ನೆಯು ಏಳುವುದು. ಭೋಗ್ಯವಸ್ತುವೆನಿಸುವ ಅಚಿತ್‌ಪ್ರಪಂಚವೂ ಅದನ್ನು ಭೋಗಿಸುವ ಭೋಕ್ತೃರೂಪನಾದ ಜೀವನೂ, ಇಹದ ಭೋಗದಲ್ಲಿನ ಭ್ರಮೆಯನ್ನು ಬಿಡಿಸಿ ಮೋಕ್ಷವನ್ನು ಪಡೆಯಲು ಪ್ರೇರಿಸುವ ಪ್ರೇರಕನೆನಿಸಿದ ಈಶ್ವರನೂ ಸೃಷ್ಟಿಯೊಳಗೆ ಸೇರಿದವರೆ. ಪರಶಿವಬ್ರಹ್ಮವು "ಏಕ ಏವ ಶಿವಃ" ಎಂದ ಮೇಲೆ, ಬೇರೊಂದಿಲ್ಲವಂತಿರುವ ಪರಶಿವಬ್ರಹ್ಮವೇ ಭೋಕ್ತೃ ಭೋಗ್ಯ ಪ್ರೇರಕರೂಪವಾದರೂ ಅದ್ವೈತವಾಗಿಯೇ ಉಳಿಯುವುದು. ಇದು ಶ್ವೇತಾಶ್ವತರಶ್ರುತಿಗನುಸಾರವಾಗಿದೆ—

ಏತಜ್ಜ್ಞೇಯಂ ನಿತ್ಯಮೇವಾತ್ಮಸಂಸ್ಥಂ, ನಾತಃ ಪರಂ ವೇದಿತವ್ಯಂ
ಹಿ ಕಿಂಚಿತ್ |
ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ, ಸರ್ವಂ ಪ್ರೋಕ್ತಂ
ತ್ರಿವಿಧಂ ಬ್ರಹ್ಮಮೇತತ್ ||

ಇದರ ಕನ್ನಡ ಅನುವಾದವಿದು—

ಇದು ನಿತ್ಯಮಾತ್ಮಸಂಸ್ಥಿಯು | ದಿದುವೆ ಜ್ಞೇಯಮಿದನುಳಿದರಿವುದೇನಿಲ್ಲಂ ||
ಇದು ಸರ್ವಂ ಬ್ರಹ್ಮಂ ತಾಂ | ವಿಧತ್ರಯಂ ಭೋಕ್ತೃ ಭೋಗ್ಯಮುಂ
ಪ್ರೇರಕಮುಂ ||

ಪ್ರಶಾಂತವಾದ ಚಿತ್‌ಸಾಗರದಲ್ಲಿ ಕಿಂಚಿತ್ ಚಲನವುಂಟಾದರೂ ಭೋಕ್ತೃ ಭೋಗ್ಯ ಪ್ರೇರಕವೆಂಬ ನೊರೆ ತೆರೆ ಬುದ್ಬುದಗಳುದಯವಾದರೂ ಅವು ಚಿತ್ ಸಮುದ್ರದಿಂದ ಬೇರೆಯಾಗುವುದಿಲ್ಲ. ಈ ಸಂಚಲನಗೊಳಿಸುವ ಶಕ್ತಿಯ್ಯು ಯಾವುದೆಂದರೆ 'ಗುಣತ್ರಯಾತ್ಮಿಕಾ ಶಕ್ತಿಃ ಬ್ರಹ್ಮನಿಷ್ಠಾ ಸನಾತನೀ" ಎಂಬುದೇ ಉತ್ತರ.

## ಶಿವಾದ್ವೈತಮಂಜರಿ, ಕರಣಹಸಿಗೆ, ಸೃಷ್ಟಿವಚನಗಳಲ್ಲಿ ಹನ್ನೊಂದು ಲಿಂಗತತ್ತ್ವಗಳ ವಿಕಾಸ

ಸಂಗ್ರಹರೂಪದಲ್ಲಿ ಪ್ರಭುದೇವೋಕ್ತ ಲಿಂಗತತ್ತ್ವಗಳ ವಿಕಾಸವನ್ನು ನೋಡಬಹುದು :

"ಮೊದಲು ನಿಃಕಲಬ್ರಹ್ಮವು; ಆ ನಿಃಕಲಬ್ರಹ್ಮದಿಂದ ಚಿತ್ತು; ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಲೆಗಳು ಪುಟ್ಟಿದುವು ; ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲ ಚಿತ್ತೆಂಬ ಚತುರ್ವಿಧವು ಘಟ್ಟಿಗೊಂಡು ಅಖಂಡ ಗೋಳಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತು. ಆ ಮಹಾಲಿಂಗದಿಂದ ಸದಾಶಿವಮೂರ್ತಿ ಪುಟ್ಟಿದನು; ಆ ಸದಾಶಿವನ ಪಂಚಮುಖದಿಂದ ಭೂತಂಗಳು ಪುಟ್ಟಿದವು; ಗೋಪ್ಯಮುಖದಲ್ಲಿ ಆತ್ಮನು ಪುಟ್ಟಿದನು. ಅಂತಪ್ಪ ಪರಬ್ರಹ್ಮದಿಂದಾದ ಅಂಗಸ್ಥಲವೊಂದಕ್ಕೆ ಕವಳಿಗೆಯಾಗಿ ಸೇರಿದ ಇಪ್ಪತ್ತೈದು ತತ್ತ್ವಂಗಳು—ಅವು ಎಂತಾವೆಲಾ ಸ್ವಾಮಿಯೆಂದು ಬೆಸಗೊಂಡೊಡೆ—ಅರಿವು ರೂಪಮಾದ ಶ್ರವಣಾದಿ ಇಂದ್ರಿಯಂಗಳೈದು ಕರ್ಮ ಕ್ರಿಯಾರೂಪಮಾದ ವಾಗಾದಿ ಇಂದ್ರಿಯಗಳೈದು, ಶಬ್ದ ವಿಷಯವೇ ಮೊದಲಾದ ವಿಷಯಂಗಳೈದು, ಪ್ರಾಣಾದಿ ವಾಯುಗಳೈದು ಈ ಪ್ರಕಾರದಿಂದ ಹೇಳಲ್ಪಟ್ಟವುಗಳಿಂದ ಕೂಡಿರುವುದೆ ಅಂಗವು ... ಮಹಾಲಿಂಗವು ತಾನೆ ಹನ್ನೊಂದು ತೆರನಾಯಿತು. ಏಕಾದಶ ತತ್ತ್ವಸ್ವರೂಪವನ್ನು ತಳೆಯಿತು. ಇಂತು ಏಕಾದಶ ತತ್ತ್ವಸ್ವರೂಪವನ್ನು ತಳೆದ ಪರಿಕ್ರಮಂ ತರುವಾಯದ ನಿಲುಕಡೆಯು ಹ್ಯಾಗಿಪ್ಪುದೆಲೆ ಸ್ವಾಮಿಯೆಂದು ಬೆಸರಗೊಂಡೊಡೆ—ಶಾಂತಿ ಶಕ್ತಿಯೆ ಮೊದಲಾದ ಶಕ್ತಿಗಳೈದು, ಶಿವಸಾದಾಖ್ಯವೇ ಮೊದಲಾದ ಕರ್ತೃಗಳೈದು, ಈ ಎಲ್ಲಕ್ಕೂ ಉಪರಿಯಾಗಿ ತೋರುವ ಮೇಲಣ ಮಹಾಲಿಂಗತತ್ತ್ವ ತಾನೊಂದು. ಪ್ರಥಮದಲ್ಲಿ ನಿರೂಪಣವ ಪಾಲಿಸಿದ ಅಂಗ ಸಂಬಂಧವಾದ ತತ್ತ್ವಗಳಿಪ್ಪತ್ತೈದು, ಲಿಂಗ ಸಂಬಂಧವಾದ ತತ್ತ್ವಗಳು ಹನ್ನೊಂದು, ಅಂಗಲಿಂಗ ಸಂಬಂಧವಾದ ಉಭಯತತ್ತ್ವಂಗಳೂ ಕೂಡಿ ಮೂವತ್ತಾರು ತತ್ತ್ವಂಗಳಾದವು."

ಸ್ವಪ್ರಭಾನಂದಶಿವಾಚಾರ್ಯವಿರಚಿತ ಶಿವಾದ್ವೈತಮಂಜರಿಯಲ್ಲಿಯೂ ಹನ್ನೊಂದು ಲಿಂಗ ತತ್ತ್ವಗಳು ಉಲ್ಲೇಖಿಸಲ್ಪಟ್ಟಿವೆ—"ಶಾಂತ್ಯತೀತೋತ್ತರಾಖ್ಯ ಮಹಾಲಿಂಗ ತತ್ತ್ವಮೇಕಂ, ಶಿಷ್ಟ ಪಂಚಲಿಂಗಗತ ಕಲಾಪಂಚಕಂ, ಶಿವಸಾದಾಖ್ಯ, ಮೂರ್ತಿಸಾದಾಖ್ಯ, ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಆಮೂರ್ತಸಾದಾಖ್ಯಪಂಚಕಂ ಚ ಮಿಳಿತ್ವಾ ಲಿಂಗತತ್ತ್ವಾನ್ಯೇಕಾದಶೇತಿ ಸಂಕೇತಃ"

ಕರಣ ಹಸಿಗೆಯಲ್ಲಿಯೂ ಇತರ ಆಧಾರಗ್ರಂಥಗಳಲ್ಲಿಯೂ ತತ್ತ್ವಾತೀತವಾದ ನಿಃಕಲಬ್ರಹ್ಮದವರೆಗೆ, ತತ್ತ್ವಾತೀತಪರಬ್ರಹ್ಮವು ಹಂತ ಹಂತವಾಗಿ ಸೃಷ್ಟಿಗೆ ಅಭಿಮುಖನಾಗುತ್ತ ಬರುವುದೆಂಬುದು ತಿಳಿದು ಬರುವುದು. ಆಧಾರಾಗಳನ್ನೆಲ್ಲ ಕೊಡುವುದು ಇಲ್ಲಿ ಹೆಚ್ಚಿಗೆಯೆಂದು ಆಧಾರಗಳೆಲ್ಲವುಗಳಿಂದ ತಿಳಿದಿರುವುದನ್ನು ಸುಲಭ ರೀತಿಯಲ್ಲಿ ತಿಳಿಯುವಂತೆ ಇಲ್ಲಿ ಉಲ್ಲೇಖಿಸಿದೆ.--ಏನೇನೂ ಇಲ್ಲದಂದು ಇದ್ದುದು. "ಸರ್ವಶೂನ್ಯ ನಿರಾಲಂಬ ಬ್ರಹ್ಮ" (ನಿಃವಯುವಲಿಂಗ); ಇದು 'ತಿಳಿದುಪ್ಪವೇ ಘಟ್ಟಿಗೊಂಡು ಎರೆದುಪ್ಪನಾದ ಹಾಗೆ' ಆಗಲು ಆದುದು ನಿರಂಜನ ಬ್ರಹ್ಮ; ಇದರ 'ನಿರಂಜನೋಂಕಾರ ಶಕ್ತಿಯ ನೆನಹು ಮಾತ್ರದಿಂದ' ಆದುದು ಶೂನ್ಯಲಿಂಗ; ಇದರ ಮಹಾಜ್ಞಾನ ಚಿತ್ತಿನ ನೆನಹು ಮಾತ್ರದಿಂದ' ಆದುದು ನಿಷ್ಕಲ ಬ್ರಹ್ಮ; 'ಇದರ ಜ್ಞಾನ ಚಿತ್ತು, ಆ ಚಿತ್ತಿನ ಚಿನ್ನಾದ, ಚಿದ್ಬಿಂದು ಚಿತ್ಕಳೆ ಚತುರ್ವಿಧವು ಗಟ್ಟಿಗೊಂಡು ಆದುದು ಮಹಾಲಿಂಗ; ಇದರಿಂದ ಸದಾಶಿವ ಮೂರ್ತಿಯಾದನು. ಸದಾಶಿವಮೂರ್ತಿಯು ಪಂಚಮುಖದಿಂದ ಮಹಾಲಿಂಗವೂ ಕರ್ಮಸಾದಾಖ್ಯಾದಿ ಐದು ಸಾದಾಖ್ಯಗಳೂ ನಿವೃತ್ತಿಕಲೆಯೇ ಮೊದಲಾದ ಐದು ಕಲೆಗಳೂ ಸೇರಿ ಆಗುವ ಹನ್ನೊಂದು ಲಿಂಗತತ್ತ್ವಗಳ ಆವಿರ್ಭಾವವಾಗುವುದು. ಸದಾಶಿವನ ಪಂಚಮುಖಗಳಿಂದ ಶಕ್ತಿಗಳು ಆವಿರ್ಭಾವವಾಗಿ ಅವುಗಳಿಂದ ಪಂಚಭೂತಗಳು ಉತ್ಪತ್ತಿಯಾಗುವುವು. ಈ ಪಂಚಭೂತಗಳಿಂದಲೇ ಕರ್ಮೇಂದ್ರಿಯ ಪಂಚಕ, ವಿಷಯ ಪಂಚಕ, ಜ್ಞಾನೇಂದ್ರಿಯ ಪಂಚಕ, ವಾಯು ಪಂಚಕ, ಅಂತಃಕರಣ ಪಂಚಕಗಳಾಗುವುವು ವೀರಶೈವ ಸಿದ್ಧಾಂತದ ವೈಶಿಷ್ಟ್ಯ. ನಿರವಯವ ಲಿಂಗವು ನಿರಂಜನ ಬ್ರಹ್ಮನಾದುದು ಹೇಗೆ, ನಿರಂಜನಬ್ರಹ್ಮವು ಶೂನ್ಯಲಿಂಗವಾದುದು ಹೇಗೆ, ಆ ಶೂನ್ಯಲಿಂಗವು ನಿಷ್ಕಲಬ್ರಹ್ಮನಾದುದು ಹೇಗೆ, ನಿಷ್ಕಲ ಬ್ರಹ್ಮವು ಮಹಾಲಿಂಗವಾದುದು ಹೇಗೆ, ಒಂದೊಂದಕ್ಕಿರುವ ವ್ಯತ್ಯಾಸಗಳೇನು ಎಂಬುದನ್ನು ಸ್ವಲ್ಪಮಟ್ಟಿಗಾದರೂ ಅರಿಯಲು 'ವೀರಶೈವ ತತ್ತ್ವ ಪ್ರಕಾಶಿಕೆ'ಯ ಕೆಲವು ವಾಕ್ಯಗಳನ್ನಿಲ್ಲಿ ಕೊಡಲಾಗಿದೆ_

"ತೋರಿಕೆಗಳೇನೂ ತೋರದಂದು ಏಕಮೇವಾದ್ವಿತೀಯಂ ಬ್ರಹ್ಮ ಎಂಬ ಶ್ರುತ್ಯರ್ಥವಾಗಿ ತೆರಹಿಲ್ಲದೆ, ಕುರುಹಿಲ್ಲದೆ, ಬರಿದಲ್ಲದೆ, ಮತ್ತೊಂದರ

ವಿಲ್ಲದೆ ಅಖಂಡರೂಪ ಚೈತನ್ಯವಾಗಿ, ಕೇವಲ ತಾನೆಯಾಗಿ ಅಖಂಡ ಮಹಾ ಚಿದಾಕಾಶರೂಪವಾದ ನಿರಂಜನಬ್ರಹ್ಮವೇ ನಿಶ್ಶಬ್ದವಾಗಿ ಅನಿರ್ವಾಚ್ಯ ವಾಗಿರ್ಪುದೇ ನಿರವಯುವಲಿಂಗ.... ನಿರವಯುವ ಲಿಂಗಸ್ವರೂಪವು ಹೇಳು ವುದಕ್ಕೆ ಅಶಕ್ಯ. ಅದೇನು ಕಾರಣವೆಂದೊಡೆ, ಒಂದು ಶ್ರುತಿ 'ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ' ಎನ್ನುತ್ತಿಹುದು. ಮತ್ತೊಂದು ಶ್ರುತಿ "ಅತ್ಯತಿಷ್ಠದ್ದಶಾಂಗುಲಂ" ಎನ್ನುತ್ತಿಹುದು....... ಆ ನಿರವಯುವಲಿಂಗವು ತನ್ನ ಲೀಲಾ ಅತಿ ಸೂಕ್ಷ್ಮಸ್ಮರಣೆಯಿಂದ ಅಖಂಡ ಚಿದಾಕಾಶಸ್ವರೂಪವಾದ ನಿರಂಜನಬ್ರಹ್ಮವಾಯಿತು. ಅತಿ ಸೂಕ್ಷ್ಮ ಸ್ಮರಣೆಯೆಂದುದು ಸೂಕ್ಷ್ಮದೊಳಗಣ ಸೂಕ್ಷ್ಮಸ್ಮರಣೆಯೆಂದುದೂ, ನಾದ ವೆಂದುದೂ ಒಂದೆ.... ಆ ನಿರಂಜನಬ್ರಹ್ಮವು ತನ್ನ ಸೂಕ್ಷ್ಮಸ್ಮರಣೆಯ ಚೈತನ್ಯಕಳೆಯಾಗಿ ಅಖಂಡ ಚಿದಾಕಾಶ ರೂಪವಾದ ಶೂನ್ಯಲಿಂಗ ವಾಯಿತು. ಆ ಶೂನ್ಯಲಿಂಗವು ತನ್ನ ಸ್ಮರಣೆಯಾದ ನಾದಘೋಷದ ಚೈತನ್ಯಕಳೆಯಾಗಿ, ಅಖಂಡಾದ್ವಯ ನಿತ್ಯನಿರವಯುವಜ್ಞಾನಪ್ರಭಾ ಚಿದಾಕಾಶಸ್ವರೂಪವಾದ ನಿಷ್ಕಲಬ್ರಹ್ಮವಾಯಿತು."

ಇದರ ಅಭಿಪ್ರಾಯವನ್ನು ಸ್ವಲ್ಪ ಆಲೋಚಿಸುವ. ಅಂದು-ಇಂದು-ಎಂದು-ಎಂದೆನಲಿಲ್ಲದಂದು, ಆದಿ ಅನಾದಿ ಇಲ್ಲದಂದು, ಇದ್ದುದು ಎಂಬ ಕುರುಹಿಲ್ಲದಂದು, ಇಲ್ಲದಂತೆ ಇದ್ದುದು—ನಿರವಯುವಲಿಂಗವು; ಗಗನ ದಾಚೆಗೆ ಅಲ್ಲ, ಗಗನ ಕುಸುಮದಾಚೆಗೆ ಅಲ್ಲ, ಗಗನಕುಸುಮಪರಿಮಳದಾಚೆಗೆ ಅದು ಇದ್ದುದು ತನ್ನ ತಾನರಿಯದಂತೆ. ಈ ನಿರವಯುವ ಲಿಂಗವೇ ನಾಸದೀಯ ಸೂಕ್ತದ ಮಂತ್ರಗಳಲ್ಲಿ ಅಭಿಪ್ರೇತವಾಗಿದೆ.

ನಿರಂಜನಬ್ರಹ್ಮವು ತೆರಹಿಲ್ಲದುದು ಎಂದರೆ ಬಿಡಿಬಿಡಿಯಾಗಿರದುದು: ಕುರುಹಿಲ್ಲದುದು ಎಂದರೆ 'ಇದಮಿತ್ಥಂ' ಎಂದು ಹೇಳಲಾಗದಂತಿರುವುದು. ಆದರೂ ಅದು ಬರಿದಲ್ಲದುದು ಎಂದರೆ ಅದರಲ್ಲಿ ಏನೂ ಇಲ್ಲವೆಂದಲ್ಲ; ಅದು ಅರಿವಿನ ಮುದ್ದೆಯಾದರೂ "ಇದಂ" "ಅದಃ" ಎಂಬ ದ್ವೈತಭಾವನೆಯಿಲ್ಲ ದುದಾಗಿ "ಮತ್ತೊಂದರಿವಿಲ್ಲದೆ" ಇರ್ಪುದು ಎಂದು ಹೇಳಲಾಗಿದೆ. ಇದಕ್ಕೂ ಮೊದಲಿನ ಹಂತವಾದುದು ನಿರವಯುವ ಬ್ರಹ್ಮವು. "ನಿರಂಜನಬ್ರಹ್ಮವೇ ನಿಶ್ಶಬ್ದವಾಗಿ ಅನಿರ್ವಾಚ್ಯವಾಗಿರ್ಪುದೇ ನಿರವಯಲಿಂಗ" ಎಂದು ಹೇಳ

ಲಾಗಿದೆ. ನಾದದಲ್ಲಿ ಶಬ್ದವಿದೆ. ನಾದಬಿಂದುಗಳು ಹೊರಹೊಮ್ಮದ ಮುನ್ನಿನ ಸ್ಥಿತಿ ನಿಶ್ಶಬ್ದವಾದ ನಿರವಯಲಿಂಗ. ಅದು ವಾಙ್ಮನಾತೀತವಾದುದರಿಂದ ಅನಿರ್ವಾಚ್ಯ; ಆದುದರಿಂದ 'ಅಪ್ರಾಪ್ಯ ಮನಸಾ ಸಃ' ಅದು ಎಂದು ಹೇಳಿದ್ದು ಅದು ವಿಶ್ವೋತ್ತೀರ್ಣವಾಗಿರುವುದರಿಂದ 'ಅತ್ಯತಿಷ್ಠದ್ದಶಾಂಗುಲಂ' ಎನಿಸಿದೆ. ವೀರಶೈವತತ್ತ್ವ ಪ್ರಕಾಶಿಕೆಯಲ್ಲಿ ಹೀಗೆ ವಿವರಣೆಯಿದೆ—

"ಲೀಲೆಯೆ ನೆನಹು. ಅದೇ ಆದಿರು, ಅದರಿಂದ ಮಾತ್ರದಲ್ಲಿ ಅತಿಸೂಕ್ಷ್ಮ ನಾದಘೋಷವುಂಟಾಗುವುದೆಂದರೆ.... ಜಗತ್‌ಕಾರಣವಸ್ತುವಿನಲ್ಲಿ ಜಗತ್‌ಸೃಷ್ಟಿ ವೈಭವಲೀಲೆ ತೋರಿತು. ಆ ನೆನಹೇ ನಿಷ್ಕಳ ಚಿತ್ತವೆಂದು ಹೇಳಲ್ಪಡುವುದು.... ಆ ಚಿತ್ತಿನ ಚಿತ್‌ಪ್ರಭಾಚೈತನ್ಯಘೋಷವೆ ಚಿನ್ನಾದ. ಆ ಚಿತ್ಕಳೆ ಚಿನ್ನಾದವೆರಡರ ಸಮರಸಾನಂದ ಪ್ರವಾಹದ ಘಟ್ಟಿಯೇ ಚಿದ್ಬಿಂದು........ ಚಿತ್ತೇ, ಈ ಚಿತ್ಕಳೆ ಚಿನ್ನಾದ ಚಿದ್ಬಿಂದುವೆಂಬ ಮೂರರೊಡನೆ ಸಮರಸಾನಂದವಾಗಿ ಘಟ್ಟಿಗೊಂಡು.... ಅಖಂಡ ಗೋಳಾಕಾರ ತೇಜೋಮೂರ್ತಿಯಾದ 'ಓಂ' ಎಂಬ ಪ್ರಣವರೂಪವಾಗಿ, ಕೇವಲ ಶುದ್ಧ ನಿಷ್ಕಳ ಚಿದ್ಬಿಂದುವಾಯಿತು. ಹೀಂಗಾದಾಗಲು ಮೊದಲು ಹೇಳಿದ ನಿಷ್ಕಲ ಬ್ರಹ್ಮವೇ, ಈ ನಿಷ್ಕಳ ಬಿಂದುವಿನ ಚೈತನ್ಯ ಕಳಾರೂಪವಾಗಿ ನಿಷ್ಕಳ ಮಹಾಲಿಂಗವೆನ್ನಲ್ಪಡುವುದು."

ಪ್ರಶಾಂತವಾದ ನಿಸ್ತರಂಗಾಂಬುಧಿಯಂತೆ, ನಿವಾತ ಜ್ಯೋತಿಯಂತೆ, ನಿರ್ವಿಕಲ್ಪ ಸಮಾಧಿಯಲ್ಲಿನ ಚಿತ್ತದಂತೆ ನಿರಾಲಂಬವಾಗಿ ತಾನು ತಾನೇ ಆಗಿರುವ ಪರಶಿವಬ್ರಹ್ಮ ಚೈತನ್ಯವೆ "ನಿರವಯವಲಿಂಗ". ಅದರಲ್ಲಿ ಸೃಷ್ಟಿ ವೈಭವಲೀಲೆ ತೋರುವುದಕ್ಕೆ ಪ್ರಾರಂಭವಾದಾಗ ಆಗುವ ಅತಿ ಸೂಕ್ಷ್ಮ ಸ್ಮರಣೆಯ ಸ್ಥಿತಿಯಲ್ಲಿ ಅದನ್ನು "ನಿರಂಜನ ಬ್ರಹ್ಮ"ವೆನ್ನುವರು. ಆಗ ಆಗುವ ನೆನಹು ಸ್ವಲ್ಪ ಸ್ಪಷ್ಟವಾದಾಗ ಆ ಸ್ಥಿತಿಯಲ್ಲಿ ಅದನ್ನು 'ನಿಷ್ಕಲ ಬ್ರಹ್ಮ'ವೆನ್ನುವರು. "ಲೀಲೆಯೇ ನೆನಹು, ಅದೇ ಆದಿರು, ಅದರಿಂದ ಮಾತ್ರದಲ್ಲಿ ಅತಿ ಸೂಕ್ಷ್ಮ ನಾದಘೋಷವುಂಟಾಗುವುದು." ಚಿತ್ತಿನ ಪ್ರಭೆಯೇ ಕಳೆ; ಚಿತ್‌ಪ್ರಭಾಘೋಷವೆ ನಾದ; ಇವೆರಡೂ ಸೇರಿ ಬಿಂದುವಾಗುವುದು. ನಾದ ಬಿಂದು ಕಳೆಗಳೂ ಇವುಗಳನ್ನು ಹೊರಹೊಮ್ಮಿಸಿದ ಚಿತ್ತವೂ ಸೇರಿ ಓಂ ಪೀಠವಾಗಿರುವ ಮಹಾಲಿಂಗವೆಂಬುದು ಸಾರಾಂಶ.

ವೀರಶೈವ ಸಿದ್ಧಾಂತಕ್ಕೆ ಮೂಲವು ಶ್ವೇತಾಶ್ವತರೋಪನಿಷತ್ತೆಂದರೆ, ಅದಕ್ಕೆ ಮೂಲವಾದುದು ಮೇಲೆ ಹೇಳಿದ ಋಗ್ವೇದಾಂತರ್ಗತ ನಾಸದೀಯ ಸೂಕ್ತ. ಆ ಸೂಕ್ತದಲ್ಲಿ 'ಕಾಮಸ್ತದಗ್ರೇ' ಎಂದು ಮೊದಲಾಗುವ ಮಂತ್ರದಲ್ಲಿ 'ಕಾಮ'ವೆಂದರೆ ಮೇಲೆ ಹೇಳಿದ ಸೃಷ್ಟಿ ವೈಭವ ಲೀಲೆಯೇ; ಇದು ಇಚ್ಛಾ ಶಕ್ತಿಯ ಆವಿರ್ಭಾವವಾಗಿದೆ. "ತಪಸಸ್ತನ್ಮ ಹಿನಾಜಾಯತೈಕಂ" ಎಂದು ಹೇಳಿರುವುದರಲ್ಲಿ ಜ್ಞಾನಶಕ್ತಿಯ ಆವಿರ್ಭಾವವಾಗಿದೆ. "ತಪಸಾ ಸ್ರಷ್ಟವ್ಯ ಪರ್ಯಾಲೋಚನ ರೂಪತ್ವಂ" ಎಂದು ಮೊದಲಾಗಿ ಹೇಳಿದ ಜಗತ್‌ಸೃಷ್ಟಿ ವಿಷಯಕವಾದ ಮುಂದಿನ ನಾಸದೀಯಸೂಕ್ತ ಮಂತ್ರದ ಸಾಯಣಭಾಷ್ಯವಿದು-- "ಏವಂ ಮಾಯಾ ಸಹಿತಃ ಪರಮೇಶ್ವರಃ ಸರ್ವಂ ಜಗತ್‌ಸೃಷ್ಟ್ವಾ, ಸ್ವಯಂಚಾನುಪ್ರವಿಶ್ಯ ಭೋಕ್ತೃ ಭೋಗ್ಯಾದಿರೂಪೇಣ ವಿಭಾಗಂ ಕೃತವಾನಿತ್ಯರ್ಥಃ" ಇನ್ನು ಶ್ವೇತಾಶ್ವತರಉಪನಿಷತ್ತಿನಲ್ಲಿ "ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್" ಎಂದು ಹೇಳಿರುವುದು ನಾಸದೀಯಸೂಕ್ತ ಮಂತ್ರಕ್ಕೆ, ಸಾಯಣ ಭಾಷ್ಯದಲ್ಲಿ ಹೇಳಿರುವ ಅರ್ಥಕ್ಕೆ ಅನುಸಾರವಾದೆ. "ಸಿದ್ಧಾಂತ ಶಿಖಾಮಣಿ"ಯಲ್ಲಿ "ಭೋಕ್ತಾ ಭೋಜ್ಯಂ ಪ್ರೇರಯಿತಾ ವಸ್ತುತ್ರಯಮಿದಂ ಸ್ಮೃತಂ" ಎಂದು ಹೇಳಿರುವುದರ ಮೂಲವು ನಾಸದೀಯ ಸೂಕ್ತವೂ ತದನುಸಾರವಾದ ಶ್ವೇತಾಶ್ವತರೋಪನಿಷತ್ತೂ ಎಂಬುದು ಸ್ಪಷ್ಟವಾದಂತಾಯಿತು.

## ಸರ್ವಶೂನ್ಯನಿರಾಲಂಬ ಸ್ಥಳದ ವಚನಗಳು

ಆದಿ ಮಧ್ಯಾವಸಾನವಿಲ್ಲದಂದು, ಆದಿಅನಾದಿ ಬಿಂದು ಕಳೆಗಳಿಲ್ಲದಂದು, ಸಾವಯುವ ನಿರವಯುವವಿಲ್ಲದೆಂದು, ತತ್ತ್ವ ಬ್ರಹ್ಮಾಂಡಾದಿ ಲೋಕಾದಿ ಲೋಕಂಗಳೇನೂ ಇಲ್ಲದಂದು, ನಿತ್ಯನಿರಂಜನ ಪರವಸ್ತು, ನೀನೊಬ್ಬನೆಯಿದ್ದೆಯಲ್ಲಾ ಮಹಾಲಿಂಗಗುರುಸಿದ್ಧೇಶ್ವರ ಪ್ರಭುವೇ.

ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಚಂದ್ರ, ಸೂರ್ಯ, ಆತ್ಮನೆಂಬ ಅಷ್ಟತನುಮೂರ್ತಿಸ್ವರೂಪಗೊಳ್ಳದಂದು, ನಾನು ನೀನೆಂಬ ಭ್ರಾಂತ ಸೂತಕ ಹುಟ್ಟದಂದು, ನಾಮರೂಪು ಕ್ರಿಯೆಗಳೇನೂ ಏನೂ ಇಲ್ಲಂದು, ಸರ್ವಶೂನ್ಯವಾಗಿದ್ದೆಯಲ್ಲ ನೀನು ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ.

## ನಾಸದೀಯಸೂಕ್ತದ ೧ ನೆಯ ಮಂತ್ರದ ಕನ್ನಡ ಪದ್ಯಾನುವಾದ

ಇರದಂದು ಸತ್ತೆನಿಪಸತ್ತೆನಿಪುದಾವುದುಂ।
ಇರದಂದು ಲೋಕಗರ್ಭ ಮೇಲಿನಾವ್ಯೋಮಮುಂ।
ಇರದಂದು ಅದರಾಚೆ ಪರಲೋಕವಾವುದುಂ।
ಇರಲುಂಟೆ ಆವರಿಪುದೇನಾದರಾದೊಡಂ?।
ಇರಲುಂಟೆ ಯಾರಿಗಲ್ಲುಂಟು ಸುಖಸಾಧನಂ?।
ಇರಲುಂಟೆ ಗಹನಂ ಗಭೀರಮೆನಿಪಂಬುವುಂ?। ॥ ೧ ॥

### ವಿವರಣೆ

ಸುಖಸಾಧನವೆಂಬ ಭೋಗ್ಯವಸ್ತುವಾಗಲೀ, ಅವನ್ನು ಅನುಭವಿಸುವ ಭೋಕ್ತೃ ವರ್ಗವಾಗಲೀ ಆವಿರ್ಭಾವವಾಗಿಲ್ಲದ ಕಾಲವದು. ಗಹನವೂ ಗಭೀರವೂ, ನೀರಿನಂತೆ ನಿಬಿಡವಾಗಿ ಆವರಿಸುವುದೂ ಆದ ಮಾಯಾಶಕ್ತಿಯು ಹೊರಹೊಮ್ಮಿಲ್ಲದ ಕಾಲವದು. ಹಾಗೆಂದ ಮೇಲೆ ಶಕ್ತಿ ತತ್ತ್ವದಿಂದಲೇ ಹೊರಹೊಮ್ಮುವ ಅಸತ್, ಸತ್, ಇಹಪರಲೋಕಗಳು ಯಾವವೂ ಆಗ ಇರಲಿಲ್ಲವೆಂದು ಹೇಳಬೇಕಾಗಿಯೇ ಇಲ್ಲ. ಸದಸತ್ತುಗಳಿಗೂ ಮೀರಿದ ಪರ ಶಿವಬ್ರಹ್ಮದಲ್ಲಿ ಶಕ್ತಿಯು ಹೊರಹೊಮ್ಮಿಲ್ಲವೆಂದರೆ ಅದು ಜಡವಾಗಿದ್ದಿತೆ ? - ಎಂಬ ಪ್ರಶ್ನೆಯು ಏಳುವುದು. ಅದು ಚೈತನ್ಯಯುತವಾಗಿತ್ತೆಂಬುದನ್ನು ಎರಡನೆಯ ಮಂತ್ರದಲ್ಲಿ ಹೇಳಿದೆ. ಅದರ ಅನುವಾದವನ್ನಿಲ್ಲಿ ಕೊಟ್ಟಿದೆ.

## ನಾಸದೀಯಸೂಕ್ತದ ೨ ನೆಯ ಮಂತ್ರದ ಕನ್ನಡ ಪದ್ಯಾನುವಾದ

ಇರಲಿಲ್ಲ ಮರಣಮುಂ ಮತ್ತಯುಮರತ್ವಮುಂ।
ಇರಲಿಲ್ಲ ಪಗಲೆಂಬ ನಿಶಿಯೆಂಬುದಾವುದುಂ।
ಇರಲಿಲ್ಲವಂ ತೋರ್ಪಿನ ಶಶಿ ಪ್ರಕೇತಮುಂ।
ಇರಲಿಲ್ಲ ಅದನುಳಿದುದಿನಿತುಮುಂ ; ವಾಯುವುಂ।
ಇರದೊಡಂ ಸ್ವಸ್ವರೂಪೈಕ ಚಿಚ್ಛಕ್ತಿಯಿಂ।
ಸು ರಿಸುತಿರ್ದುದದ್ವೈತ ಪರಮಾತ್ಮ ತತ್ತ್ವಂ ॥ ೨ ॥

## ವಿವರಣೆ

ಪರಶಿವಬ್ರಹ್ಮದಲ್ಲಿ ಸ್ಪಂದ ಸಹಾ ಆಗದೆ, ನಾದ ಬಿಂದು ಕಲೆಗಳು ಹೊರ ಹೊಮ್ಮದ ಸ್ಥಿತಿಯಲ್ಲಿ ಭೂಮಿಯೇ ಇರಲಿಲ್ಲವೆನ್ನುವಾಗ ಜೀವರುಗಳಿದ್ದವೆನ್ನು ವಂತಿಲ್ಲ. ಜೀವರುಗಳು ಹುಟ್ಟದಿರುವಾಗ ಸಾವು ಎಂಬುದಾಗಲೀ ಸಾಯುವು ದೆಂಬುದಿಲ್ಲದ ಅಮರತ್ವವೆಂಬುದಾಗಲೀ ಇರಲಿಲ್ಲವೆಂದು ಹೇಳಬೇಕಾದುದೇ ಇಲ್ಲ. ಜೀವರುಗಳೇ ಇರಲಿಲ್ಲವೆಂದ ಮೇಲೆ ಅವರ ಭೋಗಕ್ಕೆ ಅವಶ್ಯವಾದ ಹಗಲು ರಾತ್ರಿಗಳಾಗಲೀ ಅವನ್ನು ತೋರಿಸುವ ಸೂರ್ಯ ಚಂದ್ರರಾಗಲೀ ಉದಯಿಸಿರಲಿಲ್ಲ. ಪ್ರಾಣಿಗಳ ಪ್ರಾಣ ಚಲನೆಯೇ ಇಲ್ಲದಿರುವಾಗ ಪ್ರಾಣ ಚಲನೆಗೆ ಅವಶ್ಯವಾದ ವಾಯುವೂ ಇರಲಿಲ್ಲ. ಪ್ರಾಣವಾಡಲು ಅವಶ್ಯ ವಾದ ವಾಯುವಿರಲಿಲ್ಲವೆಂದ ಮೇಲೆ ಇದ್ದುದೊಂದೆಯಾದ ಪರಶಿವ ಬ್ರಹ್ಮವು ಜಡವಾಗಿದ್ದಿತು ಎನ್ನಲಾಗುವುದಿಲ್ಲ. ವಾಯುವಿಲ್ಲದೆ ಚೈತನ್ಯವೆಲ್ಲಿ ಬಂದಿತೆಂದರೆ ಪರಶಿವಬ್ರಹ್ಮದ ಸ್ವರೂಪವೇ ಆದ ಚಿಚ್ಛಕ್ತಿಯಿಂದ ಅದು ಸ್ಫುರಿಸುತ್ತಿದ್ದಿತು. ಚೈತನ್ಯವೇ ಬೇರೆ ಪರಶಿವಬ್ರಹ್ಮವೇ ಬೇರೆ ಎಂಬ ಕಲ್ಪನೆ ಬರಬಾರದೆಂದು, 'ಆಗ ಇದ್ದುದು ಒಂದೇ ಮತ್ತೇನು ಇರಲಿಲ್ಲ' ಎಂದು ಹೇಳಿದೆ; ಹಾಗೆ ಒಂದೇ ಇದ್ದುದು ಚಿಚ್ಛಕ್ತಿ ಸ್ವರೂಪೈಕ ಪರಶಿವಾದ್ವೈತ ತತ್ತ್ವ.

ಮುಂದಿನ ಮಂತ್ರದಲ್ಲಿ ಜಗತ್ ಸೃಷ್ಟಿಗೆ ಅವಶ್ಯವಾದ ಮಾಯಾ ಶಕ್ತಿಯು ಹೊರಹೊಮ್ಮಿ ಶಿವನು ಶಕ್ತಿವಿಶಿಷ್ಟನಾಗುವುದನ್ನು ಹೇಳಿದೆ. ಅವನ ತಪಸ್ಸಿನ ಮಹಿಮೆಯಿಂದ ಎಂದರೆ ಜ್ಞಾನ ಶಕ್ತಿಯು ಆವಿರ್ಭಾವವಾಗಿ ಜಗತ್ತು ಹೊರಹೊಮ್ಮುವುದನ್ನು ನಾಸದೀಯ ಸೂಕ್ತದ ಮೂರನೆಯ ಮಂತ್ರವು ಹೇಳುವುದು.

### ನಾಸದೀಯಸೂಕ್ತದ ೩ ನೆಯ ಮಂತ್ರದ ಕನ್ನಡ ಪದ್ಯಾನುವಾದ

ಕವಿದಿತ್ತು ಗಾಢತಮಮಾರಂಭದಾದಿಯೊಳ್ ।
ಕವಿದಿತ್ತು ಗಾಢತಮಮೇನುಮುಂ ತಿಳಿಯದೊಲ್ ।
ಕವಿದಿತ್ತು ಮಾಯೆಯದು ಬಯಲೆನಿಪ ತತ್ತ್ವಮಂ ।
ತವೆ ಪರಮನೆಸಗಿದಾ ತಪದ ಮಹಿಮೆಯಿಂ, ಸಂ ।
ಭವಿಸಿತು (ದ್ವೈತ) ಜಗಮದ್ವೈತ ತತ್ತ್ವದಿಂ ॥ ೩ ॥

## ವಿವರಣೆ

ಅಗ್ನಿಯಲ್ಲಿಯೇ ಹೊರಹೊಮ್ಮಿದ ಹೊಗೆಯು ಮರೆಯಲ್ಲಿ ಅಗ್ನಿಯು ಆಚ್ಛಾದಿತವಾಗಿರುವಂತೆ, ಪರಬ್ರಹ್ಮನ ಮಾಯಾಶಕ್ತಿಯು ತಮಸ್ಸಿನಂತೆ ಗಾಢವಾಗಿ ಹೊರಹೊಮ್ಮಿ ಜಗದ್ರೂಪವಾಗಲು ಅಣುರೇಣು ತೃಣ ಕಾಷ್ಠದಲ್ಲಿ ಅಡಗಿರುವ ಪರಮಾತ್ಮನು ಜಗದ್ರೂಪ ಮಾಯೆಯಿಂದ ಆಚ್ಛಾದಿತನಾಗಿರುವನು. ಅವನ ಜ್ಞಾನ ಶಕ್ತಿಯು ಹೊರಹೊಮ್ಮಿದುದನ್ನು ಅವನ ತಪಸ್ಸೆಂದೂ ಆದರಿಂದ ಸೃಷ್ಟಿ ಕಾರ್ಯವು ಮುಂದುವರೆದಿತೆಂದೂ ಈ ಮಂತ್ರದಲ್ಲಿ ಹೇಳಿದೆ. ಯಾವ ಕಾರ್ಯವಾಗಬೇಕಾದರೂ ಮೊದಲು ಆ ಕಾರ್ಯ ಮಾಡುವ ಇಚ್ಛೆಯಾಗಿರಬೇಕಷ್ಟೆ. ಅದನ್ನು ಈ ಮಂತ್ರದಲ್ಲಿ ಹೇಳದಿರುವುದರಿಂದ ಮುಂದಿನ ಎಂದರೆ ನಾಸದೀಯ ಸೂಕ್ತದ ನಾಲ್ಕನೆಯ ಮಂತ್ರದಲ್ಲಿ–ಮೊದಲೇ ಪರಶಿವಬ್ರಹ್ಮದ ಇಚ್ಛಾಶಕ್ತಿಯು ಹೊರಹೊಮ್ಮಿತು–ಎಂಬುದನ್ನು ಹೇಳುತ್ತದೆ.

## ನಾಸದೀಯಸೂಕ್ತದ ೪ ನೆಯ ಮಂತ್ರದ ಕನ್ನಡ ಪದ್ಯಾನುವಾದ

ಉದಿಸಿತಗ್ರದೊಳ್ ಮನದ ಬೀಜದ ರೂಪದಿಂ।
ಅದು ವರ್ಧಿಸಿದುದು ಸೃಷ್ಟಿಸಲೆಳಸುವ ಕಾಮಂ।
ಮೊದಲ ಬಾಂಧವ್ಯ ಮಿಂತುಸತ್ತಿಗಸತ್ತಿನೊಳ್।
ಹೃದಯದೊಳ್ ಯೋಗಿಗಳ್ ಚಿಂತಿಸಿ ತೀರ್ದರಿದಂ ॥ ೪ ॥

## ವಿವರಣೆ

ಇಚ್ಛೆಯಿಲ್ಲದೆ ಯಾವ ಕಾರ್ಯವನ್ನೂ ಯಾರೂ ಮಾಡುವುದಿಲ್ಲ. ಕಾರ್ಯವೆಂಬ ವೃಕ್ಷಕ್ಕೆ ಕಾರಣವಾದ ಇಚ್ಛೆಯೆಂಬ ಬೀಜವು ಮನಸ್ಸಿನಲ್ಲಿ ಹುಟ್ಟಬೇಕು. ತಪಸ್ ಎಂದರೆ ಆ ಕಾರ್ಯವು ಹೇಗೆ ಆಗಬೇಕೆಂಬ ಚಿಂತಾಧಾರೆಯು ಆದರ ಮೇಲೆ ಬಿದ್ದು ಅದು ಅಂಕುರಿಸಬೇಕು. ಕ್ರಿಯೆಯಿಂದ ಅದು ಹೆಮ್ಮರವಾಗಬೇಕು. ಸೃಷ್ಟಿಯಾಗಬೇಕಾದರೂ ಇಚ್ಛಾಶಕ್ತಿ, ಜ್ಞಾನ ಶಕ್ತಿ ಮತ್ತು ಕ್ರಿಯಾ ಶಕ್ತಿಗಳು ಆವಿರ್ಭಾವವಾಗಬೇಕು. ತಪೋರೂಪ ಜ್ಞಾನ ಶಕ್ತಿಯ ವಿಷಯವನ್ನು ಮೂರನೆಯ ಮಂತ್ರದಲ್ಲಿ ಹೇಳಿರುವುದರಿಂದ ಇಚ್ಛಾಶಕ್ತಿಯ ಆವಿರ್ಭಾವವು ಜ್ಞಾನ ಶಕ್ತಿಗಿಂತಲೂ ಮೊದಲೇ ಆಯಿತೆಂದು ಈ ಮಂತ್ರದಲ್ಲಿ ಹೇಳಿದೆ. ಹೀಗೆ, ಇಚ್ಛಾಜ್ಞಾನಶಕ್ತಿಗಳು

ಆವಿರ್ಭಾವವಾದ ಅನಂತರ, ಕ್ರಿಯಾಶಕ್ತಿಯು ಆವಿರ್ಭಾವವಾಗಿ ಜಗತ್ತಿ ಎಲ್ಲೆಲ್ಲಿಯೂ ಉದಯಿಸುವುದನ್ನು ಐದನೆಯ ಮಂತ್ರವು ಹೇಳುತ್ತದೆ.

ನಾಸದೀಯಸೂಕ್ತದ ೫ ನೆಯ ಮಂತ್ರದ ಕನ್ನಡ ಪದ್ಯಾನುವಾದ

ಹರಡಿದುದು ಸೃಷ್ಟಿ ಕ್ರಿಯಾರಶ್ಮಿಯೆತ್ತಲುಂ|
ಹರಡಿದುದು ಮೇಲೆಡೆಗೆ ಕೆಳಗಡೆಗೆ ವಿಸ್ತೃತಂ|
ಹರಡಿದುದು ಬಿಡದೊಡನೆ ಮಿಗಿಲಡ್ಡಲಾಗಿಯುಂ|
ಉರೆಶ್ರೇಷ್ಠ-ಭೋಕ್ತೃವೆನೆ ಭೋಗ್ಯ ವರ್ಗಕಿಂ|
ಹೊರಹೊಮ್ಮಿದವು ಮಹಾಂತ ಸುಭೋಗ್ಯವರ್ಗಗಳ್|
ನೆರೆಬೀಜಭೂತ ಕರ್ಮದ ಕರ್ತೃಭೋಕ್ತೃಗಳ್ ||೫||

## ವಿವರಣೆ

ಪರಶಿವ ಬ್ರಹ್ಮದಿಂದ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳು ಹೊರಹೊಮ್ಮಿದ ಮೇಲೆ, ಸೂರ್ಯರಶ್ಮಿಗಳು ಉದಯವಾದ ಕೂಡಲೆ ಅವು ಜಗತ್ತಿನಲ್ಲೆಲ್ಲ ಹರಡುವಂತೆ ಸೃಷ್ಟಿ ಕಾರ್ಯವೂ ಎಲ್ಲ ಭಾಗದಲ್ಲಿಯೂ ನಡೆಯಿತು. ಹೀಗೆ ಸೃಷ್ಟಿಯಾದ ಜಗತ್ತನ್ನೇ ಎರಡು ಭಾಗವನ್ನಾಗಿ ವಿಂಗಡಿಸಬಹುದು. ಒಂದು ಜೀವವರ್ಗ, ಎರಡನೆಯದು ಜೀವಿಗಳ ಭೋಗಕ್ಕಿರುವ ನಿರ್ಜೀವ ವರ್ಗ. ಇವು ಗಳಲ್ಲಿ ಭೋಕ್ತೃ ವರ್ಗವೆನಿಸುವ ಜೀವ ವರ್ಗವು ನಿರ್ಜೀವವೆನಿಸುವ ಭೋಗ್ಯ ವರ್ಗಕ್ಕಿಂತಲೂ ಶ್ರೇಷ್ಠವು ; ಆದರೆ ಭೋಗ್ಯ ವರ್ಗವು ಮಹತ್ತರವಾದು ದಾಗಿದೆ. ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳೇ ಭೋಕ್ತೃಗಳಿಗೆ ಮುಂದಿನ ಜನ್ಮಕ್ಕೆ ಬೀಜವಾಗಿರುತ್ತವೆ.

ಹೀಗೆಲ್ಲ ಸೃಷ್ಟಿ ವಿಷಯವನ್ನು ಹೇಳಿದರೂ ಸೃಷ್ಟಿ ವಿಷಯ ಜ್ಞಾನವು ಸ್ಪಷ್ಟವಾಗಿ ಯಾರಿಗಾದರೂ ಆಗಿದೆಯೆಂಬುದನ್ನು ಮುಂದಿನೆರಡು ಮಂತ್ರ ಗಳಲ್ಲಿ ಸಂದೇಹಿಸಲಾಗಿದೆ. ಯಾರು ಏತರಿಂದ ಸೃಷ್ಟಿ ಕಾರ್ಯವನ್ನು ಮಾಡಿದ ರೆಂದು ಹೇಳಲಾಗುವುದೇ ? ಹಾಗೆ ಹೇಳಲು ಶಕ್ತರಾಗಬೇಕಾದರೆ ಅವರು ಸೃಷ್ಟಿಯ ಕಾಲದಲ್ಲಿ ಇದ್ದವರಾಗಬೇಕು. ಸೃಷ್ಟಿ ಕಾಲದಲ್ಲಿ ಅವರು ಇರ ಬೇಕಾದರೆ ಅವರು ಸೃಷ್ಟಿಗೂ ಮೊದಲು ಹುಟ್ಟಿದವರಾಗಿರಬೇಕು. ಅಂತಹ ವರು ಹುಟ್ಟಿದ್ದರೆ ಅವರನ್ನು ಸೃಷ್ಟಿಸಿದವರು ಯಾರು ? ಎಂಬ ಪ್ರಶ್ನೆಯು

ಏಳುವುದು. ಈ ತೊಡಕುಗಳು ಆರ್ಯ ಋಷಿಗಳ ಮನಸ್ಸನ್ನು ಕದಕಿದವು ಎಂಬುದು ಸ್ಪಷ್ಟ.

ನಾಸದೀಯಸೂಕ್ತದ ೬ ನೆಯ ಮಂತ್ರದ ಪದ್ಯಾನುವಾದ

ಯಾವನವನೀ ವಿವಿಧ ಸೃಷ್ಟಿಯಂ ಸೃಜಿಸಿದಂ|
ಯಾವುದರಿನೀ ವಿವಿಧ ಸೃಷ್ಟಿಯಂ ಸೃಜಿಸಿದಂ |
ದೇವತೆಗಳುಮೀ ಜಗದ ಸೃಷ್ಟಿಯನಂತರಂ
ಆವಿರ್ಭವಿಸಿದರೆನೆ ತಿಳಿಯರದನೇನುಮಂ |
ಯಾವನಿದನೆಲ್ಲಮಂ ನಿಜವಾಗಿ ತಿಳಿದವಂ?
ಯಾವನೀಲೋಕದೊಳಿದನನಿತಂ ಪೇಳುವಂ? ||೬||

ವಿವರಣೆ

ಈ ವಿವಿಧವಾದ ಸೃಷ್ಟಿಯನ್ನು ಯಾರು ಸೃಷ್ಟಿಸಿದವರು? ಹಾಗೆ ಸೃಷ್ಟಿಸಿದವರು ಅದನ್ನು ಏತರಿಂದ ಸೃಷ್ಟಿಸಿದರು ? ದೇವತೆಗಳಾದರೂ ಅದನ್ನು ತಿಳಿದಿರುವರೆ ?—ಎಂದರೆ, ಅವರು ಸೃಷ್ಟಿಯಾದ ಅನಂತರವೇ ಹುಟ್ಟಿದವರು. ಆದುದರಿಂದ ಈ ವಿಷಯವನ್ನು ಯಾರು ಖಚಿತವಾಗಿ ಹೇಳಲಾರರೆಂಬುದೇ ಈ ಮಂತ್ರದಲ್ಲಿನ ಭಾವ.

ನಾಸದೀಯಸೂಕ್ತದ ೭ ನೆಯ ಮಂತ್ರದ ಪದ್ಯಾನುವಾದ

ಸೃಷ್ಟಿ ವೈವಿಧ್ಯವಂ ಪೊರೆಯೆ ಪೊರೆಯದಿರಲುಂ |
ಸೃಷ್ಟಿಸಿದ ಕರ್ತನೇ ಅಧಿಕಾರಿಯಾಗಿಹಂ |
ಸೃಷ್ಟಿಯಧ್ಯಕ್ಷ ಪರಮವ್ಯೋಮನರಿದಿಹಂ|
ಸೃಷ್ಟಿ ವಿಷಯಮನಲ್ಲದಿರಲ್ ತಿಳಿಯರಾರುಂ ||೭||

ವಿವರಣೆ

ಈ ಸೃಷ್ಟಿಯನ್ನು ನಿರ್ಮಿಸಿ ಅದನ್ನು ಕಾಪಾಡುತ್ತಿರುವ ಸೃಷ್ಟಿ ಕರ್ತನೊಬ್ಬನು ಇರಲೇಬೇಕು. ಅವನಿಗಾದರು ಈ ವಿಷಯ ತಿಳಿದಿರಲೇಬೇಕು. ಅಥವಾ ಅವನಿಗೂ ತಿಳಿಯದೇನೋ ಎಂದು ಋಷಿಯು ಈ ಮಂತ್ರದಲ್ಲಿ ಸಂದೇಹಿಸುತ್ತಿರುವನು; ಸೃಷ್ಟಿ ವಿಷಯವು ಅತಿ ಗೂಢವಾದುದು ಎಂದು ಭಾವ.

---

# ತೃತೀಯ ದರ್ಶನ

## ಋಗ್ವೇದದಲ್ಲಿನ ನಾಸದೀಯ ಸೂಕ್ತವು

**ಸಾಯಣ ಭಾಷ್ಯಾಧಾರ, ಪ್ರತಿಪದಾರ್ಥ, ಸರಳಾನುವಾದಗಳಿಂದ ಕೂಡಿದ ವಿವೇಚನೆಯೊಡನೆ—**

ನಾಸದಾಸೀನ್ನೋ ಸದಾಸೀತ್ ತದಾನೀಂ ನಾಸೀದ್ರಜೋ[1]
ನೋವ್ಯೋಮಾಪರೋ[2]ಯತ್ |

ಕಿಮಾವರೀವಃ ಕುಹ ಕಸ್ಯ ಶರ್ಮ[3]ನ್ನಂಭಃ ಕಿಮಾಸೀದ್ ಗಹನಃ
ಗಭೀರಂ || 1 ||

**ಪ್ರತಿಪದಾರ್ಥ** :—ತದಾನೀಂ—ಸೃಷ್ಟಿಗೆ ಪೂರ್ವದಲ್ಲಿ, ಅಸತ್—"ಅಸತ್" ಎನ್ನಬಹುದಾದುದೇನೂ. ನ ಆಸೀತ್—ಇರಲಿಲ್ಲ; ಸತ್—"ಸತ್" ಎನ್ನಬಹುದಾದುದೇನೂ. ನೋ ಆಸೀತ್—ಇರಲಿಲ್ಲ; ರಜಃ—ಲೋಕಗಳು, ನ ಆಸೀತ್—ಆರಲಿಲ್ಲ; ವ್ಯೋಮ—ಅಂತರಿಕ್ಷವು ನೋ—ಇರಲಿಲ್ಲ; ಪರಃ[2]—ಅದರಾಚೆಗೆ ಯತ್—ಯಾವವು (ಸ್ವರ್ಗಾದಿ ಲೋಕಗಳು ಇರುವವೋ ಅವು), ನೋ—ಇರಲಿಲ್ಲ; ಆವರೀವಃ—ಆವರಿಸಿಕೊಳ್ಳುವಂತಹುದು, ಕಿಂ—ಯಾವುದಾದರೂ ಇದ್ದಿತೇ ? (ಇಲ್ಲ); ಕುಹ—ಕಸ್ಯ—ಯಾವ ಭೋಕ್ತೃವಿನ ಅನುಭವಕ್ಕಾಗಿ, ಶರ್ಮನ್[3]—ಭೋಗ್ಯ ವಸ್ತುಗಳು ಇದ್ದಾವು ? (ಇಲ್ಲ) ; ಗಹನಂ—ಪ್ರವೇಶಿಸಲಾಗದ, ಗಭೀರಂ—ಅಗಾಧವಾದ, ಅಂಭಃ—ನೀರು, ಕಿಂ ಆಸೀತ್—ಇದ್ದಿತೇ ? (ಇಲ್ಲ).

---

ಸಾಯಣ ಭಾಷ್ಯಾಧಾರ—[1]ರಜ ಇತ್ಯಾದಿ—ಲೋಕಾ ರಜಾಂಸ್ಯುಚ್ಯಂತೇ ನಿ 4-19- ಇತಿಯಾಸ್ಕಃ; ಪರೋವ್ಯೋಮ್ನಃ—ಪರಸ್ತಾದುಪರಿದೇಶೇ ದ್ಯುಲೋಕಪ್ರಭೃತಿ ಸತ್ಯಲೋಕಾಂತಂ : ಕಸ್ಯಶರ್ಮನ್—ಕಸ್ಯವಾ ಭೋಕ್ತುರ್ಜೀವಸ್ಯ ಶರ್ಮಣಿಸುಖದುಃಖ ಸಾಕ್ಷಾತ್ಕಾರ ಲಕ್ಷಣೇವಾ ನಿಮಿತ್ತಭೂತೇ ಸತಿತದಾವರಕಂ ತತ್ತ್ವಮಾದೃಣುಯಾತ್—ಏತೇನ ಭೋಗ್ಯ ಪ್ರಪಂಚವತ್ ಭೋಕ್ತೃ ಪ್ರಪಂಚೋಪಿ ತದಾನೀಂ ನಾಸೀದಿತ್ಯುಕ್ತಂ ಭವತಿ.

ಪದ್ಯಾನುವಾದ—ಇರದಂದು ಸತ್ತೆನಿಪಸತ್ತೆನಿಪುದಾವುದುಂ |
ಇರದಂದು ಲೋಕಗಳ್ ಮೇಲಿನಾವ್ಯೋಮವುಂ
ಇರದಂದು ಅದರಾಚೆ ಪರಲೋಕವಾವುದುಂ |
ಇರಲುಂಟೆ ಆವರಿಪುದೇನಾದರಾದೊಡಂ |
ಇರಲುಂಟೆ ಯಾರಿಗಲ್ಲುಂಟು ಸುಖಸಾಧನಂ |
ಇರಲುಂಟೆ ಗಹನಂ ಗಭೀರಮೆನಿಪಂಬುವುಂ ||1||

ಸರಳಾನುವಾದ—ಸದಸತ್ತುಗಳಾಗಲೀ, ಇಹಪರಲೋಕಗಳಾಗಲೀ ಭೂವ್ಯೋಮ್ಯಾಕಾಶಗಳಾಗಲೀ, ಭೋಕ್ತೃಭೋಗ್ಯವರ್ಗವಾಗಲೀ ಆವರಣಾತ್ಮಕವಾದ, ಮತ್ತು ನೀರಕ್ಷೀರ ನ್ಯಾಯದಂತೆ ಅಭೇದವೂ ಗಹನವೂ ಗಭೀರವೂ ಆದ ಮಾಯೆಯೇ ಆಗಲೀ ಹೊರಹೊಮ್ಮದಿರುವ ಸ್ಥಿತಿಯೇ ಸೃಷ್ಟಿಪೂರ್ವ ಸ್ಥಿತಿಯು ಎಂದು ಭಾವ.

ವಿವೇಚನೆ.—'ಸತ್' ಮತ್ತು 'ಅಸತ್' ಪದಗಳು ಉಪನಿಷತ್ತುಗಳಲ್ಲಿ ಪಾರಿಭಾಷಿಕ ಪದಗಳಾಗಿವೆ. ಆದರೆ ಬೇರೆ ಬೇರೆಯ ಉಪನಿಷತ್ತುಗಳಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಈ ಪದಗಳನ್ನು ಉಪಯೋಗಿಸಿರುವುದು ಕಂಡುಬರುತ್ತದೆ. ಸತ್—ಎಂದರೆ ಎಂದೂ ನಾಶವಾಗದೆ ಇರುವುದು ಎಂಬ ಅರ್ಥದಲ್ಲಿ ಅದನ್ನು ಜಗತ್ಕಾರಣವಾದ ಪರಬ್ರಹ್ಮಕ್ಕೆ ಉಪಯೋಗಿಸಲಾಗಿದೆ —'ಸದೇವ ಸೋಮ್ಯೇದಮಗ್ರ ಆಸೀತ್', ಎಂದು ಹೇಳಿರುವುದರೊಡನೆಯೇ 'ಏಕಮೇವಾದ್ವಿತೀಯಂ' ಎಂದೇ ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿರುವುದರಲ್ಲಿ ಜಗತ್ತಿನ ಮೂಲ ಕಾರಣಕ್ಕೆ 'ಸತ್' ಎಂಬ ಪದವನ್ನು ಪಾರಿಭಾಷಿಕವಾಗಿ ಉಪಯೋಗಿಸಿದೆ. ಆದರೆ ತೈತ್ತಿರೀಯ ಉಪನಿಷತ್ತಿನಲ್ಲಿ "ಅಸದ್ವಾ ಇದಮಗ್ರ ಆಸೀತ್" ಎಂದರೆ ಮೊದಲೇ 'ಅಸತ್' ತಾನೇ ಇದ್ದುದು ಎಂದು ಹೇಳಿರುವುದರೊಡನೆ 'ತತೋ ವೈಸದಜಾಯತ' ಎಂದರೆ ಅದರಿಂದಲೇ "ಸತ್" ಹುಟ್ಟಿತು ಎಂದು ಹೇಳಿದೆ. ಈ ಉಪನಿಷತ್ತಿನಲ್ಲಿ ಜಗತ್ತಿನ ಮೂಲ ಕಾರಣಕ್ಕೆ "ಅಸತ್" ಎಂದು ಹೇಳಿ,

ಅದರಿಂದ ಸತ್ ಎಂದರೆ ದೃಶ್ಯ ಜಗತ್ತು ಆಯಿತು ಎಂಬ ಅಭಿಪ್ರಾಯದಲ್ಲಿ "ಸತ್" ಮತ್ತು "ಅಸತ್" ಪದಗಳು ಉಪಯೋಗಿಸಲ್ಪಟ್ಟಿವೆ. ದೃಶ್ಯವಾದುದೆಲ್ಲವೂ ನಾಶವಂತವಾದುದು; ಆದರೂ "ಸತ್" ಎಂಬ ಪದವನ್ನು ಜಗತ್ಕಾರಣವಾದ ಪರಬ್ರಹ್ಮಕ್ಕೆ ಛಾಂದೋಗ್ಯದಲ್ಲಿ ಉಪಯೋಗಿಸಿದೆ. ಅಲ್ಲದೆ "ಅಸತ್" ಎಂಬ ಪದದಲ್ಲಿ ಅಭಾವವೆಂಬುದೂ ಅರ್ಥವಿರುತ್ತಾಗಿ ಛಾಂದೋಗ್ಯ ಉಪನಿಷತ್ತು "ಕಥಮಸತಃ ಸಜ್ಜಾಯೇತ" ಎಂದರೆ ಏನೂ ಇಲ್ಲದುದರಿಂದ ಇರುವುದೆಂಬುದು ಹೇಗೆ ಹುಟ್ಟೀತು ?–ಎಂಬ ಸಂದೇಹವನ್ನು ಎತ್ತಿದೆ. ಭಗವದ್ಗೀತೆಯಲ್ಲಿ "ನಾಸತೋ ವಿದ್ಯತೇಭಾವೋ ನಾಭಾವೋ ವಿದ್ಯತೇ ಸತಃ" ಎಂದು ಹೇಳಿರುವುದರಿಂದಲೂ ಇದೇ ಭಾವನೆ ಬರುವುದು. ಈ ತೊಡಕನ್ನು ನಿವಾರಿಸಲೋ ಎಂಬಂತೆ ನಾಸದೀಯಸೂಕ್ತದಲ್ಲಿ ಜಗತ್ಕಾರಣವಾದ ಪರಬ್ರಹ್ಮವು "ಸತ್" "ಅಸತ್" ಎಂಬ ದ್ವಂದ ಕಲ್ಪನೆಗಿಂತಲೂ ಆಚಿನದು ಎಂದು ಹೇಳಿರುವುದು ಕಂಡುಬರುತ್ತದೆ. "ಸತ್" ಎಂಬುದರಲ್ಲಿ ಇರುವಿಕೆಯ ಕಲ್ಪನೆಯಿದೆ; 'ಅಸತ್' ಎಂಬುದರಲ್ಲಿ ಇಲ್ಲದಿರುವುದು ಎಂಬ ಕಲ್ಪನೆಯಿದೆ. ಇದೆ–ಇಲ್ಲ ಎಂಬ ಪದಗಳು ಸೃಷ್ಟಿಯಾದವುಗಳ ವಿಷಯದಲ್ಲಿ ಹೇಳುವ ಪದಗಳಾಗಿವೆ. ಆದುದರಿಂದ 'ಸತ್'- "ಅಸತ್" ಪದಗಳನ್ನು ಸೃಷ್ಟಿಪೂರ್ವ ಸ್ಥಿತಿಯನ್ನು ಹೇಳುವಾಗ ಉಪಯೋಗಿಸಲಾಗುವುದಿಲ್ಲವೆನ್ನಬಹುದು. 'ಶೂನ್ಯಾಶೂನ್ಯವಿಲ್ಲದಂದು' ಎಂದು ವಚನಕಾರರು ಸೃಷ್ಟಿಪೂರ್ವ ಸ್ಥಿತಿಯನ್ನುಹೇಳುವಾಗ ಈ ಭಾವನೆಯಿದೆ. "ಗಗನ ಕಮಲ ಕುಸುಮ ಪರಿಮಳದಿಂದತ್ತಲು" ಎಂದು ಈ ಸ್ಥಿತಿಯನ್ನು ಅಲ್ಲಮಪ್ರಭು ವಚನವೊಂದರಲ್ಲಿ ವಿವರಿಸಿರುವುದರಲ್ಲಿ ವಚನಾತೀತವಾದುದನ್ನು ವಚನದೊಳಗಾಗಿಸಿರುವ ಪ್ರತಿಭೆಯಿದೆ. "ಗಗನ ಕಮಲ ಕುಸುಮ" ವೆಂಬುದು ಕಲ್ಪನಾತೀತವಾದುದು ಎನ್ನಬಹುದೆಂದ ಮೇಲೆ, ಅದರ ಪರಿಮಳವೆಂದರೆ, ಅದು ಕಲ್ಪನೆಗೆ ನಿಲುಕುವುದೆಲ್ಲಿ ಬಂದೀತು? ಇನ್ನು ಅದರಿಂದಲೂ ಆಚೆಗೆ ಎಂದು ಹೇಳಿರುವುದು ವಚನಾತೀತವಾದ ಪರಬ್ರಹ್ಮದ ಸ್ಥಿತಿಯನ್ನು ಮನಸ್ಸಿಗೆ ತರುತ್ತದೆ. ಟೆನಿಸನ್ ಕವಿಯು ಐಹಿಕ ವಿಷಯ ವಿವರಣೆಯಲ್ಲಿ, ವಿರುದ್ಧಾರ್ಥವುಳ್ಳ ಪದಗಳ ಜೋಡಣೆಯಿಂದ ಸಂದಿಗ್ಧ ಭಾವನೆಯನ್ನು ಹೊರಹೊಮ್ಮಿಸುವ ಕೌಶಲ್ಯ

ವನ್ನು, "ಇದ್ದೆಯಲ್ಲಾ ಇಲ್ಲದಂತೆ" ಎಂದು ವಿರುದ್ಧಾರ್ಥ ಪದಗಳ ಜೋಡಣೆಯಿಂದ ಸೃಷ್ಟಿಪೂರ್ವ ಪರಮಾತ್ಮ ಸ್ಥಿತಿಯನ್ನು ವಿವರಿಸಿ, ಅಲ್ಲಮ ಪ್ರಭುಗಳು ಮೀರಿಸಿದ್ದಾರೆ.

ನಾಸದೀಯ ಸೂಕ್ತವನ್ನೇ ಬಹುಮಟ್ಟಿಗೆ ಅನುಸರಿಸಿರುವ ಶ್ವೇತಾಶ್ವತರ ಉಪನಿಷತ್ತಿನಲ್ಲಿ "ವ್ಯಕ್ತಾವ್ಯಕ್ತಮೀಶತೇ ದೇವ ಏಕಃ" ಎಂದರೆ ಪರಂಜ್ಯೋತಿಯಾದ ಪರಬ್ರಹ್ಮವು ವ್ಯಕ್ತ ಜಗತ್ತನ್ನೂ ಅವ್ಯಕ್ತ ಜಗತ್ತನ್ನೂ ಆಳುವುದೆಂದು ಹೇಳಿದೆ. ಕೇನೋಪನಿಷತ್ತಿನಲ್ಲಿ

ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ
ಇತಿ ಶುಶ್ರುಮ ಪೂರ್ವೇಷಾಂ ಯೇ ನಸ್ತದ್ ವ್ಯಾಚಚಕ್ಷಿರೇ ||೪||

ಎಂದು ಹೇಳಿದೆ. ಇದರ ಕನ್ನಡ ಅನುವಾದವಿದು :

ವಿದಿತಕಿಂ ಬೇರೆಯದವಿದಿತಕಿಂ ಮೇಲಿನದು
ಇದನರಿದ ಹಿರಿಯರಿಂ ನಕೆದುರಿದೆವಿಂತಿದನು ||೪||

ವಿದಿತವಾದುದು ಎಂದರೆ ವ್ಯಕ್ತ ಜಗತ್ತು; ಅವಿದಿತವೆಂದರೆ ಅವ್ಯಕ್ತ ಜಗತ್ತಾದ ಅವ್ಯಾಕೃತ; "ಅವ್ಯಾಕೃತಾತ್ ಅವಿದ್ಯಾ ಲಕ್ಷಣಾತ್ ವ್ಯಾಕೃತ ಬೀಜಾತ್" ಎಂಬುದು ಈ ಮಂತ್ರದ ಶಾಂಕರಭಾಷ್ಯ. ಅವ್ಯಕ್ತ ಜಗತ್ತಾದ ಮಾಯೆ ಅಥವಾ ಅವ್ಯಾಕೃತ ಪ್ರಕೃತಿಯು ವ್ಯಕ್ತಜಗತ್ತಿಗೆ ಬೀಜ ಎಂದರೆ ಮೂಲ. ಅವ್ಯಾಕೃತಕ್ಕಿಂತಲೂ ಶ್ರೇಷ್ಠವಾದುದು ಪರಂಜ್ಯೋತಿಯಾದ ವ್ಯಕ್ತಾವ್ಯಕ್ತವನ್ನಾಳುವ ಪರಬ್ರಹ್ಮ. ಇದನ್ನು ಹಿರಿಯರಿಂದ ತಿಳಿದೆವು ಎಂದು ಹೇಳಿರುವ ಕೇನದ ಋಷಿಗೂ ಪೂರ್ವದವನಾದ ನಾಸದೀಯ ಸೂಕ್ತದ ಕರ್ತೃ ಪರಮೇಷ್ಠೀ ಎಂಬ ಹೆಸರಿನ ಪ್ರಜಾಪತಿ ಋಷಿಯಿಂದ ಇದನ್ನು ತಿಳಿದೆವೆಂಬ ಭಾವವಿಲ್ಲಿರಬೇಕು. ಅಂತೂ, ಸತ್ ಮತ್ತು ಅಸತ್ ಇಲ್ಲದ ಕಾಲವೆಂದು ನಾಸದೀಯ ಸೂಕ್ತದಲ್ಲಿ ಹೇಳಿರುವುದರಲ್ಲಿ ವ್ಯಕ್ತವಾದ ಜಗತ್ತೂ, ಅದನ್ನು ಹೊರಹೊಮ್ಮಿಸಿದ ಅವ್ಯಾಕೃತ ಅಥವಾ ಮಾಯಾಶಕ್ತಿಯೂ ಹೊರ ಹೊಮ್ಮದೆ ಇದ್ದ ಕಾಲವು, ಸೃಷ್ಟಿಪೂರ್ವಕಾಲವೆಂಬ ಅಭಿಪ್ರಾಯವು ಈ ಮಂತ್ರಕ್ಕೆ ಇರುತ್ತದೆ.

ಈ ಮಂತ್ರದಲ್ಲಿ ಸದಸತ್ತುಗಳೂ, ಇಹಪರ ಲೋಕಗಳೂ ಭೋಕ್ತೃ ಭೋಗ್ಯ ವರ್ಗಗಳೂ ಕ್ರಮವಾಗಿ ಸೃಷ್ಟಿಯಾಗುವುವು ಎಂಬುದನ್ನು ಸೂಚಿಸುವ ಸಲುವಾಗಿಯೇ ಎಂಬಂತೆ ಅವು ಆ ಕ್ರಮದಲ್ಲಿಯೇ ಹೇಳಲ್ಪಟ್ಟಿವೆ. ಈ ಮಂತ್ರದಲ್ಲಿನ "ಕಸ್ಯ ಶರ್ಮನ್" ಪದಗಳಿಗೆ, ಸಾಯಣಭಾಷ್ಯದಂತೆ ಯಾವ ಭೋಕ್ತೃವಿನ ಸುಖಸಾಧನೆಗಾಗಿ ಭೋಗ್ಯ ವಸ್ತುಗಳು ಇದ್ದಾವು ?—ಎಂದು ಅರ್ಥವಾಗುವುದು. "ಸತ್" ನಿಂದ "ಅಸತ್" ಅದರಿಂದ ಇಹ ಪರಲೋಕಗಳೂ, ತದನಂತರ ಭೋಕ್ತೃ ಭೋಗ್ಯ ಪ್ರಪಂಚವೂ ಹೊರಹೊಮ್ಮುವುದೆಂದಾಯಿತು. ಇನ್ನು ಅಸತ್ ಎಂಬ ಅವ್ಯಕ್ತಕ್ಕೂ ಮೂಲವಾದುದು, ಆವರಣಾರ್ಥವುಳ್ಳ "ಆವರೀವಃ" ಎಂಬ ಪದದಿಂದ ನಿರ್ದೇಶಿಸಲ್ಪಟ್ಟಿದೆ. ಹಾಗೆ ಆವರಿಸುವುದು ಮಾಯೆ. "ಆವರೀವಃ" ಪದದ ವಿವರಣೆಯನ್ನು ನಾಸದೀಯ ಸೂಕ್ತದ ಮೂರನೆಯ ಋಚೆಯ ಸಾಯಣ ಭಾಷ್ಯದಲ್ಲಿ "ಆತ್ಮ ತತ್ತ್ವಸ್ಯ ಆವರಕತ್ವಾತ್, ಮಾಯಾ ಪರ ಸಂಜ್ಞಂ" ಎಂದು ಹೇಳಿದೆ. ಆತ್ಮ ತತ್ತ್ವಕ್ಕೆ ಆವರಣ ರೂಪವಾಗಿರುವ ಮಾಯಾ ಶಕ್ತಿಯನ್ನು ಆವರಣಾರ್ಥವುಳ್ಳ ಈ ಪದವು ನಿರ್ದೇಶಿಸುವುದೆಂದಾಯಿತು. ಗಹನಂ ಗಭೀರಂ ಅಂಭಃ ಕಿಂ ಆಸೀತ್ ಎಂಬ ಪದಗಳ ಅರ್ಥವನ್ನು ಹೇಳುವಾಗ ಅಂಭಃ ಎಂಬ ಪದಕ್ಕೆ ನೀರು ಎಂಬ ಅರ್ಥವು ಹೊಂದುವುದಿಲ್ಲ. ಏಕೆಂದರೆ ನೀರು ಗಹನವೂ ಗಭೀರವೂ ಆದುದೆನ್ನಲಾಗುವುದಿಲ್ಲ. ಮುಂದೆ ಮೂರನೆಯ ಮಂತ್ರದಲ್ಲಿ ಇದ್ದಿತೆಂದು ಹೇಳುವ ಜಲವು ಮೊದಲನೆಯ ಮಂತ್ರದಲ್ಲಿ ಇರಲಿಲ್ಲವೆಂದು ಹೇಳಿದೆ ಯೆಂಬುದು ಗಮನಾರ್ಹವಾದುದು. 'ಸಲಿಲಮಿತಿ ಲುಪ್ತೋಪಮಂ ಸಲಿಲಮಿವ ಯಥಾ ಕ್ಷೀರೇಣಾವಿಭಾಗಾಪನ್ನಂ ನೀರಂ ದುರ್ವಿಜ್ಞಾನಂ' ಎಂದು ಮೊದಲಾಗಿ ಮೂರನೆಯ ಋಚೆಯ ಸಾಯಣ ಭಾಷ್ಯದಲ್ಲಿ ಹೇಳಿದಂತೆ ಇಲ್ಲಿ ನೀರು ಎಂದರೆ ಹಾಲಿನಲ್ಲಿನ ನೀರಿನಂತೆ ನಿಬಿಡವಾಗಿ ಇದು ನೀರು ಇದು ಹಾಲು ಎಂದು ತಿಳಿಯದಂತೆ ವ್ಯಾಪಿಸಿರುವಂತಹದ್ದೆಂದು ಲುಪ್ತೋಪಮಾರ್ಥವನ್ನು ಮಾಡಬೇಕು. ಮೇಲೆ ಹೇಳಿದ ಮಾಯೆಯು ಗಹನವೂ ಗಭೀರವೂ ಆಗಿ ನೀರಿನಂತೆ ವ್ಯಾಪಿಸುವುದು. ಹೀಗೆ 'ಗೂಳ್ಹಂ ಅಪ್ರಕೇತಂ' ಎನಿಸಿ ನೀರಿನಂತೆ ಎಲ್ಲವನ್ನೂ ವ್ಯಾಪಿಸಿರುವ ದುರ್ವಿಜ್ಞಾನತರ ತಮಸ್ಸು

ನಂತಿರುವ ಮಾಯೆಯು ಹೊರಹೊಮ್ಮಿರುವುದನ್ನು ಮೂರನೆಯ ಋಚೆಯು ಹೇಳುತ್ತದೆ. ಮೊದಲನೆಯ ಈ ಋಚೆಯಲ್ಲಿ ಅಂತಹ ಆವರಣಾತ್ಮಕವೂ ಗಹನವೂ ಗಭೀರವೂ ಆದ ಮಾಯಾ ಶಕ್ತಿಯು ಇನ್ನೂ ಹೊರಹೊಮ್ಮದಿರುವುದನ್ನು ಹೇಳುತ್ತದೆ. ಒಂದನೆಯ ಋಚೆಯಲ್ಲಿ ಇಲ್ಲವೆಂದು ಹೇಳಿದುದನ್ನೇ ಮೂರನೆಯ ಋಚೆಯಲ್ಲಿ ಇದೆಯೆಂದು ಹೇಳಿರುವುದನ್ನು ಗಮನಿಸದೆ ಮಾಡುವ ಅರ್ಥಗಳು ಗ್ರಾಹ್ಯವಾದುವಲ್ಲ.

"ಆಪೋವಾ ಇದಮಗ್ರೇ ಸಲಿಲಮಾಸೀತ್" ಎಂದರೆ ಎಲ್ಲಕ್ಕೂ ಮೊದಲು ನೀರೇ ಎಲ್ಲೆಲ್ಲಿಯೂ ವ್ಯಾಪಿಸಿದ್ದಿತು ಎಂಬ ಅರ್ಥವುಳ್ಳ ಶ್ರುತಿಯೊಂದಿದೆ. "ಆಪೋವಾ ಇದಗ್ಂ ಸರ್ವಂ" ಎಲ್ಲವೂ ನೀರೇ ಎಂಬ ಅರ್ಥವುಳ್ಳ ಶ್ರುತಿಯೂ ಇದೆ. ಇಲ್ಲಿಯೂ ಆಪಃ:ಶಬ್ದಕ್ಕೆ ನೀರು ಎಂದು ಅರ್ಥ ಮಾಡಬಾರದು; ಏಕೆಂದರೆ, ಹಾಗೆ ಹೇಳಿದರೆ ನೀರೇ ಬ್ರಹ್ಮವು ಎನ್ನಬೇಕಾದೀತು. ಎಲ್ಲವೂ ಆಕಾಶದಿಂದಲೇ ಉತ್ಪತ್ತಿಯಾಗಿ ಕೊನೆಗೆ ಅದರಲ್ಲಿಯೇ ಲಯ ಹೊಂದುವುದು ಎಂಬುದೊಂದು ಶ್ರುತಿಯೂ[1] ಇದೆ. ಇದರಲ್ಲಿ ಆಕಾಶವೆಂದರೆ ಪಂಚ ಭೂತಗಳಲ್ಲಿ ಒಂದಾದ ಆಕಾಶವೆಂದು ಅರ್ಥ ಮಾಡಿದರೆ ಅದೇ ಬ್ರಹ್ಮವೆನ್ನಬೇಕಾದೀತು. "ಆಕಾಶಸ್ತಲ್ಲಿಂಗಾತ್" ಎಂಬ ಬ್ರಹ್ಮಸೂತ್ರದಲ್ಲಿ ಮೇಲಿನ ಶ್ರುತಿವಾಕ್ಯದ ಆಕಾಶ-ಎಂದರೆ ಪರಬ್ರಹ್ಮವೆಂದೇ ಅರ್ಥ ಮಾಡಬೇಕೇ ಹೊರತು ಪಂಚಭೂತಗಳಲ್ಲಿ ಒಂದಾದ ಆಕಾಶವೆಂದು ಅರ್ಥ ಮಾಡಬಾರದೆಂದು ಹೇಳಿದೆ. ಏಕೆಂದರೆ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದುದು ಪರಬ್ರಹ್ಮವೇ ಹೊರತು ಆಕಾಶವಲ್ಲ. ಆಪಃ ಎಂಬ ಪದವು ಆಪ್ಲೃ-ವ್ಯಾಪ್ತೌ, ಎಂದರೆ ವ್ಯಾಪಿಸು। ಎಂಬ ಅರ್ಥವುಳ್ಳ ಧಾತುವಿನಿಂದ ಆಗಿದೆ. ಪರಬ್ರಹ್ಮದ ಶಕ್ತಿಯು ಹೊರಹೊಮ್ಮಿ ವ್ಯಕ್ತಾವ್ಯಕ್ತ ರೂಪ ಜಗತ್ತಾಗಿ ಪರಿಣಮಿಸಿ, ಅಂತಹ ಜಗತ್ತನ್ನು 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಆಧಾರದಂತೆ ಅನುಪ್ರವೇಶ

[1]ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ। ಆಕಾಶಂ ಪ್ರತ್ಯಸ್ತಂಯನ್ತಿ। ಆಕಾಶೋ ಹಿ ಏವ ಏಭ್ಯೋಜ್ಯಾಯನ್ ಆಕಾಶಃ ಪರಾಯಣಂ--ಛಾಂದೋಗ್ಯ ೧-೯-೧.

ಮಾಡಿದ ಪರಬ್ರಹ್ಮವನ್ನು ಮರೆಮಾಡುವುದು. 'ಆವರೀವಃ' ಎಂಬ್ದು ಆವರಿಸುವಂತಹದು ನಾಸದೀಯಸೂಕ್ತದ ಮೊದಲನೆಯ ಋಚೆಯಲ್ಲಿ ಸೂಚಿತವಾಗಿದೆ. ವ್ಯಕ್ತಾವ್ಯಕ್ತ ಜಗತ್ತಾಗಿ ನೀರಿನಂತೆ ನಿಬಿಡವಾಗಿ ವ್ಯಾಪಿಸುವಂತಹದೂ ಸೂಚಿಸಲ್ಪಟ್ಟಿದೆ. ಅದು ಗಹನವೂ ಗಭೀರವೂ ಆದುದೆಂದೂ ಹೇಳಿದೆ. ಹೀಗೆ ವ್ಯಕ್ತಾವ್ಯಕ್ತ ಜಗತ್ತಾಗಿ ವ್ಯಾಪಿಸಿ, ಪರ ಬ್ರಹ್ಮವನ್ನು ಜಗತ್ತಿನ ಕಣ್ಣಿನಿಂದ ಮರೆಮಾಡಬಲ್ಲುದೂ ಗಹನವೂ ಗಭೀ ರವೂ ಆಗಿರುವುದೂ ಪರಮಾತ್ಮನ ಮಾಯೆ ಎಂದರೆ ಶಕ್ತಿಯೆ. ಇಂತಹ ಶಕ್ತಿಯು ಜಗತ್ ಸೃಷ್ಟಿಗೆ ಮೊದಲು ಹೊರಹೊಮ್ಮಿ ಇರಲಿಲ್ಲವೆಂಬುದು ಒಂದನೆಯ ಋಚೆಯ ಅಭಿಪ್ರಾಯ. ಜಗತ್ ಸೃಷ್ಟಿಯಾಗಲು ಅದು ಹೊರಹೊಮ್ಮಿ 'ಆಭು' ಎಂದರೆ ಬಯಲೆನಿಸುವ ಪರಬ್ರಹ್ಮವು 'ಅಪಿಹಿತಂ' ಎಂದರೆ ಆಚ್ಛಾದಿಸಲ್ಪಟ್ಟಿರುವುದು, 'ತುಚ್ಛ' ಎಂಬ ಮಾಯಾ ಶಕ್ತಿಯಿಂದಲೆಂಬುದನ್ನು ಮೂರನೆಯ ಋಚೆಯಲ್ಲಿ ಹೇಳಿರು ವುದನ್ನು ಮುಂದೆ ವಿವರಿಸಲಾಗುವುದು. 'ಆಪೋವಾ ಇದಮಗ್ರೇ ಸಲಿಲ ಮಾಸೀತ್' ಎಂಬ ಶ್ರುತಿಗಳಲ್ಲಿಯೂ ನಾಸದೀಯ ಸೂಕ್ತದಲ್ಲಿ ಉಕ್ತವಾದ ನೀರೆಂಬ ಅರ್ಥವುಳ್ಳ ಪದಗಳಿಗೂ ನೀರಿನಂತೆ ನಿಬಿಡವಾಗಿ ವ್ಯಾಪಿಸುವ ಪರಮಾತ್ಮನ ಮಾಯಾ ಶಕ್ತಿಯೆಂದೇ ಅರ್ಥಮಾಡಬೇಕು.

ಪರಮಾತ್ಮ ಶಕ್ತಿಯಿಂದಲೇ ವ್ಯಕ್ತಾವ್ಯಕ್ತ ಜಗತ್ತಾಗುವುದೆಂಬುದರಲ್ಲಿ ಸಂದೇಹವಿಲ್ಲ. ಅದರಿಂದಲೇ ಲಲಿತಾ ಸಹಸ್ರನಾಮದಲ್ಲಿ ದೇವಿಯು 'ವ್ಯಕ್ತಾವ್ಯಕ್ತರೂಪಿಣೀ' ಎಂದೂ, ಜಗತ್ತನ್ನು ಪ್ರಸವಿಸುವುದರಿಂದ 'ಪ್ರಸವಿತ್ರೀ' ಎಂದೂ, ಎಲ್ಲಕ್ಕೂ ಆಧಾರಭೂತಳಾಗಿರುವುದರಿಂದ 'ಪ್ರತಿಷ್ಠಾ' ಎಂದೂ, ಕರೆಯಲ್ಪಟ್ಟಿರುವಳು. ಸೂತ ಸಂಹಿತೆಯಲ್ಲಿನ ಬ್ರಹ್ಮಗೀತೆಯಲ್ಲಿ 'ಪ್ರತಿಷ್ಠಾ ಸರ್ವ ವಸ್ತೂನಾಂ ಪ್ರಜ್ಞೈಷಾ ಪರಮೇಶ್ವರೀ' ಎಂದು ಹೇಳಿದೆ. ಶ್ರೀ ಶಂಕರಾಚಾರ್ಯರ ಆನಂದ ಲಹರಿಯಲ್ಲಿನ 'ಮನಸ್ತ್ವಂ ವ್ಯೋಮ ತ್ವಂ' ಎಂದು ಮೊದಲಾಗುವ ಶ್ಲೋಕದಲ್ಲಿನ "ತ್ವಯಿಪರಿಣತಾಯಾಂ" ಎಂಬುದರಿಂದ 'ಪ್ರಕೃತಿಗೆ, ಜಗತ್ಕಾರಣ ನೀನಲ್ಲದೆ ಒಂದು ವಸ್ತುವಲ್ಲ ಎಂದು ಹೇಳಲ್ಪಟ್ಟಿತು' ಎಂದು

ಜಕಣಾಚಾರ್ಯರು ಅವರ ಟೀಕೆಯಲ್ಲಿ ಹೇಳಿದ್ದಾರೆ. ಇದಕ್ಕೆ ಚತುಶ್ಶತಿಯಲ್ಲಿಯ ಆಧಾರವುಂಟು.

"'ತ್ರಿಪುರಾ ಪರಮಾ ಶಕ್ತಿರಾದ್ಯಾ ಭೂತಾ ಮಹೇಶ್ವರೀ
ಸ್ಥೂಲಸೂಕ್ಷ್ಮ ವಿಭಾಗೇನ ತ್ರೈಲೋಕ್ಯೋತ್ಪತ್ತಿಮಾತೃಕಾ ||

ಪ್ರತ್ಯಭಿಜ್ಞಾ ಹೃದಯದ ಮೊದಲನೆಯ ಸೂತ್ರವಾದ 'ಚಿತಿಃ ಸ್ವತಂತ್ರಾ ವಿಶ್ವಸಿದ್ಧಿಹೇತುಃ'. ಎಂಬ ಸೂತ್ರದಲ್ಲಿ ವಿಶ್ವಸಿದ್ಧಿಗೆ ಚಿತಿಯೆ ಕಾರಣವೆಂದು ಹೇಳಿದೆ. ಇದರ ಕ್ಷೇಮರಾಜನ ವ್ಯಾಖ್ಯಾನದಂತೆ ಚಿತಿಯೆಂದರೆ 'ಶಿವಭಟ್ಟಾರಕಾಭಿನ್ನಾ' ಪರಾಶಕ್ತಿಯು. ಮಥಿತಾರ್ಥವೇನೆಂದರೆ ನಾಸದೀಯ ಸೂಕ್ತದ ಮೊದಲನೆಯ ಋಚೆಯಲ್ಲಿ ಸದಸತ್ತುಗಳೂ ಇಹಪರಲೋಕಗಳೂ ಭೋಕ್ತೃ ಭೋಗ್ಯವರ್ಗವೂ ಇವುಗಳೆಲ್ಲಕ್ಕೂ ಕಾರಣವಾದ ಶಿವಾಭಿನ್ನ ಶಕ್ತಿಯೂ ಹೊರಹೊಮ್ಮದಿರುವ ನಿರ್ವಿಶೇಷ ಪರಶಿವ ಬ್ರಹ್ಮದ ಸ್ಥಿತಿಯನ್ನು ಹೇಳಿದೆ.

ನಾಸದೀಯ ಸೂಕ್ತದ ೨ನೇಯ ಮಂತ್ರ

ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ ಪ್ರಕೇತಃ | ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ ||೨||

---

ಸಾಯಣ ಭಾಷ್ಯಾಧಾರ—ನರಾತ್ರ್ಯಾ ಅಹ್ನಶ್ಚ ಪ್ರಕೇತಃ ಪ್ರಜ್ಞಾನಮಾಸೀತ್, ತದ್ ಹೇತುಭೂತಯೋಃ ಸೂರ್ಯಚಂದ್ರಮಸೋರಭಾವಾತ್ ತತ್-ಸಕಲವೇದಾಂತಪ್ರಸಿದ್ಧಂ ಬ್ರಹ್ಮತತ್ತ್ವಂ ಸ್ವಧಯೇತಿ-ಸ್ವಸ್ಮಿನ್ ಧೀಯತೇ ಧ್ರಿಯತ ಆಶ್ರಿತ್ಯ ವರ್ತತ ಇತಿ ಸ್ವಧಾ ಮಾಯಾಃ ತಯಾ ತದ್ಬ್ರಹ್ಮೈಕಮವಿಭಾಗಾಪನ್ನಮಾಸೀತ್ ತಸ್ಮಾದ್ಧ—ತಸ್ಮಾತ್ ಖಲು ಪೂರ್ವೋಕ್ತಾನ್ಮಾಯಾ ಸಹಿತಾದ್ ಬ್ರಹ್ಮಣೋಽನ್ಯತ್ಕಿಂಚನ ಕಿಮಪಿ ವಸ್ತುಭೂತ ಭೌತಿಕಾತ್ಮಕಂ ಜಗನ್ನಾಸ, ಪರಃ-ಪರಸ್ತಾತ್ ಸೃಷ್ಟೇರೂರ್ಧ್ವಂ ವರ್ತಮಾನ ಮಿದಂ ಜಗತ್ ತದಾನೀಂ ನ ಬಭೂವ.

ಪ್ರತಿಪದಾರ್ಥ—ಮೃತ್ಯುಃ=ಮರಣವು, ನ ಆಸೀತ್ = ಇರಲಿಲ್ಲ; ತರ್ಹಿ= ಹಾಗಾದರೂ, ಅಮೃತಂ=ಅಮರತ್ವವು,ನ=ಇರಲಿಲ್ಲ. ರಾತ್ರ್ಯಾ=ರಾತ್ರಿಯ, ಅಹ್ನಃ =ಹಗಲಿನ, ಪ್ರಕೇತಃ= ಪರಿಜ್ಞಾನವನ್ನುಂಟುಮಾಡುವ ಸಾಧನವು (ಎಂದರೆ ಸೂರ್ಯಚಂದ್ರರು) ನ ಅಸೀತ್= ಇರಲಿಲ್ಲ. ಅವಾತಂ= ಗಾಳಿ ಯೂ ಇರಲಿಲ್ಲವಾದರೂ, ಏಕಂ= ಅದ್ವಯವಾದ, ತತ್= ಅಪರತತ್ತ್ವವು, ಸ್ವಧಯಾ=ತನ್ನೊಳಗೇ ಇರುವ ಶಕ್ತಿ ವಿಶೇಷದಿಂದ, ಆನೀತ್= ಚೈತನ್ಯ ದಿಂದ ಸ್ಫುರಣೆಗೊಂಡಿದ್ದಿತು. ತಸ್ಮಾತ್= ಅದು ಹೊರತು,ಅನ್ಯತ್ ಕಿಂಚನ = ಬೇರೆಯಾವುದೂ,ನ ಆಸ= ಇರಲಿಲ್ಲ. ಪರಃ= ಮುಂದೆ ಸೃಷ್ಟಿಯಾಗು ವುದೇನೂ ನ, (ಆಸ) =ಇರಲಿಲ್ಲ.

ಪದ್ಯಾನುವಾದ—ಇರಲಿಲ್ಲ ಮರಣಮುಂ ಮತ್ತಮಮರತ್ವಮುಂ |
ಇರಲಿಲ್ಲ ಪಗಲೆಂಬ ನಿಶಿಯೆಂಬುದಾವುದುಂ |
ಇರಲಿಲ್ಲಿವಂ ತೋರ್ಪಿನಶಶಿಪ್ರಕೇತಮುಂ |
ಇರಲಿಲ್ಲವದನುಳಿದುದೇನುಮುಂ ವಾಯುವುಂ |
ಇರದೊಡಂ ಸ್ವಸ್ವರೂಪೈಕ ಚಿಚ್ಛಕ್ತಿಯಿಂ |
ಸ್ಫುರಿಸುತಿರ್ದುದದ್ವೈತಪರಮಾತ್ಮ ತತ್ತ್ವಂ ||೨||

ಸರಳಾನುವಾದ—ಸೃಷ್ಟಿಪೂರ್ವದಲ್ಲಿ ಮರಣವೆಂಬುದಾಗಲೀ ಮರಣ ವಿಲ್ಲದಿರುವ ಅಮರತ್ವವಾಗಲೀ, ಹಗಲು ರಾತ್ರಿಗಳಾಗಲೀ, ಅವನ್ನು ತೋರಿ ಸುವ ಸೂರ್ಯಚಂದ್ರರಾಗಲೀ ಇರಲಿಲ್ಲ. ಪ್ರಾಣಿಗಳ ಚೈತನ್ಯ ಸ್ಫುರಣೆಗೆ ಅವಶ್ಯವಾದ ವಾಯುವು ಸಹಾ ಆಗ ಇರಲಿಲ್ಲ. ಆದರೂ ಆಗ ಇದ್ದುದೊಂದೆ ಯಾದ ಪರಶಿವತತ್ತ್ವವು ಸ್ವಶಕ್ತಿ ವಿಶೇಷದಿಂದ ಚೈತನ್ಯಸ್ಫುರಣೆಯುಳ್ಳು ದಾಗಿದ್ದಿತು. ಶಕ್ತಿಯು ಪರಶಿವನಿಗೆ ಸ್ವಸ್ವರೂಪವೇ ಆದುದರಿಂದ ಆ ಪರ ಶಿವ ತತ್ತ್ವವು ಅದ್ವೈತವಾಗಿದ್ದಿತು. ಮತ್ತೇನು ಅದರೊಡನೆ ಇರಲಿಲ್ಲ.

ವಿವೇಚನೆ—ಸೃಷ್ಟಿ ಪೂರ್ವವಿಷಯವು ಈ ಋಕ್ಕಿನಲ್ಲಿಯೂ ಮುಂದುವರೆದಿದೆ. ಹಿಂದಿನ ಮಂತ್ರದಲ್ಲಿ ಭೋಕ್ತೃಭೋಗ್ಯ ವರ್ಗವೇ ಇರಲಿಲ್ಲವೆಂದ ಮೇಲೆ, ಸಾಯುವುದೂ, ಸಾಯದೆ ಅಮರರಾಗಿ ಇರುವುದೂ

ಎಂಬ ಪ್ರಶ್ನೆಯು ಯಾರೂ ಏನೂ ಇಲ್ಲದ ಆ ಕಾಲದಲ್ಲಿ ಏಳುವುದೇ ಇಲ್ಲ. ಚಂದ್ರ ಸೂರ್ಯರೂ ಆಗ ಸೃಷ್ಟಿಸಲ್ಪಟ್ಟಿರಲಿಲ್ಲವಾಗಿ ರಾತ್ರಿಹಗಲುಗಳೆಂಬ ಕಲ್ಪನೆ ಸಹಾ ಆಗ ಇರಲಿಲ್ಲ. ಏನೇನೂ ಇರಲಿಲ್ಲವೇ ಎಂದರೆ ಇದ್ದಿತೊಂದು ಪರಶಿವ ಪರಮತತ್ತ್ವ.

ಹಿಂದಿನ ಋಚೆಯಲ್ಲಿ ಪರಶಿವನ ಶಕ್ತಿಯು ಹೊರಹೊಮ್ಮಿರಲಿಲ್ಲವೆಂದು ಹೇಳಿದೆ. ಪ್ರಾಣಚಲನೆಗೆ ಅವಶ್ಯವಾದ ವಾಯುವೂ ಆಗ ಇರಲಿಲ್ಲ. ಹಾಗೆಂದಮೇಲೆ ಪರಶಿವಬ್ರಹ್ಮತತ್ತ್ವವು ಜಡವಾಗಿದ್ದಿತೆನ್ನಬಹುದೆ? ಈಸಂದೇಹ ನಿವಾರಣೆಗಾಗಿಯೇ ಈ ಋಚೆಯಲ್ಲಿ ಅದು ಚೈತನ್ಯದಿಂದ ಸ್ಫುರಿಸುತ್ತಿದ್ದಿತು ಎಂದು ಹೇಳಿದೆ. ಚೈತನ್ಯವು ಅದಕ್ಕೆ ಅನ್ಯವಾದುದಲ್ಲವೆಂಬುದನ್ನು ತಿಳಿಸಲು ಅದು ಇದ್ದುದು ಒಂದೇ ಎಂದು ಹೇಳಿರುವುದಲ್ಲದೆ ಅದರ ಹೊರತು ಮತ್ತೇನು ಇರಲಿಲ್ಲವೆಂಬುದನ್ನು ಒತ್ತಿ ಹೇಳಿದೆ. ಏಕೆಂದರೆ ಸೃಷ್ಟಿಪೂರ್ವಸ್ಥಿತಿಯಲ್ಲಿ ಪರಶಿವಬ್ರಹ್ಮವು ಸತ್ ಚಿತ್ ಆನಂದ ಸ್ವರೂಪವಾಗಿರುವುದು; ಚಿತ್ ಅದರ ಸ್ವರೂಪವೇ ಆಗಿರುವುದರಿಂದ ಅದು ಅದರಿಂದ ಬೇರೆಯಲ್ಲ. ಸೃಷ್ಟಿಗೆ ಮೊದಲು ಪರಬ್ರಹ್ಮವು ನಿಷ್ಕಲವಾಗಿರುವುದು; ಆ ಸ್ಥಿತಿಯು ಎರಡನೆಯ ಋಚೆಯಲ್ಲಿ ಹೇಳಲ್ಪಟ್ಟಿದೆ. ಮುಂದೆ ಸೃಷ್ಟ್ಯುನ್ಮುಖವಾದಾಗ ಅದು ಶಕ್ತಿಯಿಂದ ವಿಶಿಷ್ಟ ವಾಗಿ ಸಕಲವಾಗುವುದು.

ಅಂದು ಆದಿಬಿಂದು ಉದಯಿಸದಂದು, ಮಾಯಾಶಕ್ತಿ ಹುಟ್ಟದಂದು ಪರಶಿವ ತತ್ತ್ವದಲ್ಲಿ ಚಿತ್ತು ತಲೆದೋರದಂದ:, ಚಿತ್ತಿನಿಂದ ನಾದಬಿಂದುಕಳೆ ಗಳುದಯವಾಗದಂದು, ನಾದಬಿಂದು ಕಳೆಯೊಂದಾಗಿ ಚಿತ್ಪಿಂಡ ರೂಹಿಸ ದಂದು, ಶೂನ್ಯ ಮಹಾಶೂನ್ಯ ವಿಲ್ಲದಂದು ನಿಃಕಲ ನಿರಾಳತತ್ತ್ವನೆಂಬ ಹೆಸರಿಲ್ಲ ದಂದು, ನಿತ್ಯನಿರಂಜನ ನೀನೊಬ್ಬನೇ ಇದ್ದೆಯಲ್ಲ ನಿನ್ನ ನೀನರಿಯದೆ, ಮಹಾ ಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ತಂದೆಯಿಲ್ಲದ, ತಾಯಿಯಿಲ್ಲದ ಹೆಸರಿಲ್ಲದ, ಕುಲವಿಲ್ಲದ ಹುಟ್ಟಿಲ್ಲದ, ಹೊಂದಿಲ್ಲದ, ಅಯೋನಿಸಂಭವ ನೀನಾದ ಕಾರಣ ನಿನ್ನ ಸಕಲಲಿಂಗ ವೆಂದೆನಯ್ಯ ನಾನು ಮಹಾಲಿಂಗಗುರುಶಿವ ಸಿದ್ಧೇಶ್ವರಪ್ರಭುವೇ.

ಮೊದಲೆರಡು ಋಚೆಗಳಲ್ಲಿ ಹೇಳಿರುವ ಮಾಯಾಶಕ್ತಿ ಹುಟ್ಟದ ನಾದ ಬಿಂದು ಕಲೆಗಳುದಯವಾಗದ, ಉಲುಹಿಲ್ಲದ ನಿಷ್ಕಲಬ್ರಹ್ಮ ಸ್ಥಿತಿಯಿದು.

ಮಾಯೆಯೂ ಹುಟ್ಟಿ ಸೃಷ್ಟ್ಯುನ್ಮುಖವಾಗುವ ಸ್ಥಿತಿಯನ್ನು ಮೂರನೆಯ ಋಚೆಯಲ್ಲಿ ಹೇಳಿದೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿದಂತೆ 'ಸದೇವಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ.... ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ' ಎಂದರೆ ಮೊದಲಿದ್ದುದು ಒಂದೇ ಎಂದು ಹೇಳಿರುವುದು ಸಾಲದೇನೋ ಎಂಬಂತೆ ಎರಡನೆಯದಿಲ್ಲದುದನ್ನೂ ಹೇಳಿದೆ. ನಾಸದೀಯ ಸೂಕ್ತದ ಈ ಮಂತ್ರದಲ್ಲಿಯೂ 'ತದೇಕಂ' ಎಂದು ಹೇಳಿರುವುದು ಸಾಲದೇನೋ ಎಂಬಂತೆ ತಸ್ಮಾದ್ಧಾನ್ಯನ್ನ ಪರಃ ಎಂದು ಹೇಳಿದೆ. "ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸುಮಂಗಳೊಳು ಕಂಪು ಬೆರೆದಂತೆ ಪರಮನೊಳು ಬೆರೆದಿಹ ಅಗಜಾತೆ" ಶಿವನೊಡನೆ ಏಕರಸವಾಗಿರುವಳು. ಆದುದರಿಂದಲೇ ಅನೀತ್ ಸ್ವಧಯಾ ಎಂದು ಹೇಳಿರುವುದರಲ್ಲಿ 'ಸ್ವಧಯಾ' ಎಂಬ ಪದದ ಸಾಯಣಭಾಷ್ಯದಲ್ಲಿ 'ಸ್ವಧಾ ಸ್ವಸ್ಮಿನ್ ಧೀಯತೇ ಧ್ರಿಯತ ಆಶ್ರಿತ್ಯ ವರ್ತತ ಇತಿ ಸ್ವಧಾ ಮಾಯಾ ತಯಾ' ಎಂದರೆ ತನ್ನೊಳಗೆ ಇರುವ ಮಾಯಾಶಕ್ತಿಯ ಬಲದಿಂದ ಆನೀತ್–ಎಂದರೆ ಸ್ಫುರಣೆಗೊಂಡಿದೆ–ಎಂದು ಹೇಳಿದೆ. 'ಆನೀತ್' ಪದವು ಅನು–ಪ್ರಾಣನೇ ಎಂಬ ಧಾತುವಿನಿಂದ ಹುಟ್ಟಿದುದು 'ಅನ್' ಪದಕ್ಕೆ 'ಪ್ರ' ಸೇರಿದರೆ ಪ್ರಾಣ್ ಎಂದಾಗುತ್ತದೆ. ಹೊರಗಿನ ಯಾವ ಶಕ್ತಿಯನ್ನು ಅಪೇಕ್ಷಿಸದೆ ತನ್ನೊಳಗಿನ ಎಂದರೆ ತನ್ನಸ್ವರೂಪವೇ ಆದ ಚೈತನ್ಯದಿಂದ ಪರಮ ತತ್ತ್ವವು ಸ್ಫುರಿಸುತ್ತಿದ್ದಿತು ಎಂದಾಯಿತು. ಶಿವಸೂತ್ರದ ಮೊದಲನೆಯ ಸೂತ್ರವೇ "ಚೈತನ್ಯಮಾತ್ಮಾ" ಎಂಬುದು ; ಚೈತನ್ಯವೇ ಆತ್ಮವು ಎಂಬುದು ಇದರ ಅರ್ಥ— "ಪ್ರಣಮ್ಯ ಪ್ರಕೃತಿಂ ನಿತ್ಯಂ ಪರಮಾತ್ಮ ಸ್ವರೂಪಿಣೀಂ" ಎಂಬ ಆಧಾರವಿದೆ. 'ಈಶ್ವರಪ್ರತ್ಯಭಿಜ್ಞಾಹೃದಯ' (೧-೩-೨) ದಲ್ಲಿ ಮಹೇಶ್ವರನನ್ನು 'ಚಿದ್‌ವಪುಃ' ಎಂದು ಕರೆಯಲಾಗಿದೆ- ಆದುದರಿಂದ ಶಿವಶಕ್ತಿಯರಲ್ಲಿ ಅವಿನಾಭಾವ ಸಂಬಂಧವಿದೆ.

ಲೋಕಾದಿಲೋಕಗಳೇನೂ ಇಲ್ಲದಂದು ನೆನಹು ನಿಷ್ಪತ್ತಿ
ಯಾಗಿತ್ತು ನೋಡಾ: ನೆನಹಿಲ್ಲದ ಘನವನ್ನು ನೆನೆದ
ನೆನಹೇ ಸಾವಯುವವಾಗಿ ಚಿತ್ರನಿಸಿಕೊಂಡಿತ್ತು. ಆ
ಚಿತ್ರೇ ಸಚ್ಚಿದಾನಂದ ನಿತ್ಯಪರಿಪೂರ್ಣವೆಂದು
ಐದಂಗವನಂಗೀಕರಿಸಿ ಶಿವತತ್ತ್ವವೆನಿಸಿತ್ತು ..
ಮಾಯಾ ಶಕ್ತಿಯಿಂದ ಸಮಸ್ತ ಜಗತ್ತಿನ ಉತ್ಪತ್ತಿ.

ದೀರ್ಘವಾದ ಸೃಷ್ಟಿವಚನವೊಂದರ ಭಾಗವಿದರಲ್ಲಿ ಮೊದಲು, ಸೃಷ್ಟಿಸ ಬೇಕೆಂಬ ನೆನಹಿಲ್ಲದ ನಿಷ್ಕಲ ಪರಶಿವ ಬ್ರಹ್ಮದ ಸೃಷ್ಟಿಪೂರ್ವ ಸ್ಥಿತಿಯನ್ನು ಹೇಳಿದೆ. ನಾಸದೀಯ ಸೂಕ್ತದ ಮೊದಲನೆಯ ಋಚೆಯಲ್ಲಿ ಹೇಳಿರುವ ಸ್ಥಿತಿಯಿದು; ಹಿಂದಿನ ವಚನದಲ್ಲಿ ಹೇಳಿರುವ ನಿಷ್ಕಲ ಲಿಂಗದ ಸ್ಥಿತಿಯೂ ಇದೇ. ಈ ಸ್ಥಿತಿಯನ್ನು ಸಿದ್ಧಾಂತ ಶಿಖಾಮಣಿಯಲ್ಲಿ ನಿರ್ವಿಕಲ್ಪೋ ನಿರಾ ಕಾರೋ ನಿರ್ಗುಣೋ ನಿಷ್ಪ್ರಪಂಚಕಃ ಎಂದು ವರ್ಣಿಸಿದೆ. 'ನೆನಹಿಲ್ಲದ ಘನವನ್ನು ನೆನೆದ ನೆನಹು' ನೆನಹನ್ನು ನೆನೆವ ಮೊದಲು ಅದು ಜಡವಾಗಿ ದ್ದರೆ, ನೆನಹನ್ನು ಅದು ನೆನೆಯಲು ಸಾಧ್ಯವಾಗುತ್ತಿರಲಿಲ್ಲ. ಅದು ತನ್ನೊ ಳಗೆ ನಿತ್ಯವೂ ಸ್ವಾಭಾವಿಕವೂ ಆದ ಚೈತನ್ಯದಿಂದ ಸ್ಫುರಿಸುತ್ತಿದ್ದುದರಿಂದಲೇ ಸೃಷ್ಟಿಸಬೇಕೆಂಬ ನೆನಹನ್ನು ನೆನೆಯಲು ಸಾಧ್ಯವಾಯಿತು. ಈ ಸ್ಥಿತಿಯೇ ನಾಸದೀಯ ಸೂಕ್ತದ ಎರಡನೆಯ ಋಚೆಯುಲ್ಲಿ ಹೇಳಲ್ಪಟ್ಟಿರುವುದು. ಪರಶಿವ ಬ್ರಹ್ಮದ ಶಕ್ತಿಯು ಹೊರಹೊಮ್ಮಿ ಪರಶಿವ ಬ್ರಹ್ಮವು ಸೃಷ್ಟಿಗೆ ಉನ್ಮುಖವಾದುದನ್ನು ಮೂರನೆಯ ಋಚೆಯು ಹೇಳುತ್ತದೆ. ಸೃಷ್ಟಿಯನ್ನು ಮಾಡಬೇಕೆಂದು ನೆನೆದ ನೆನಹೇ ನಾಲ್ಕನೆಯ ಮಂತ್ರದ ವಿಷಯ.

ನಾಸದೀಯಸೂಕ್ತದ ೩ನೇಯ ಮಂತ್ರ---

ತಮ ಆಸೀತ್ ತಮಸಾಗೂಳ್ಹಮಗ್ರೇsಪ್ರಕೇತಂ ಸಲಿಲಂ ಸರ್ವಮಾ ಇದಂ। ತುಚ್ಛ್ಯೇನಾಭ್ವಪಿಹಿತಂ ಯದಾಸೀತ್ ತಪಸಸ್ತನ್ಮಹಿನಾಜಾಯ- ತೈಕಂ ॥೩॥

ಸಾಯಣ ಭಾಷ್ಯಾಧಾರ—೧. ತಮ ಆಸೀತ್ ತಮಸಾಗೂಳ್ಹಮಗ್ರೇ-ಅಗ್ರೇ ಸೃಷ್ಟೇಃಪ್ರಾಕ್, ಭೂತಭೌತಿಕಂ ಸರ್ವಂ ಜಗತ್ ತಮಸಾ ಗೂಳ್ಹಂ ಯಥಾ

ಪ್ರತಿಪದಾರ್ಥ-ಅಗ್ರೇ= ಸೃಷ್ಟಿ ಪೂರ್ವದಲ್ಲಿ, ತಮಃ= ಅಂಧಕಾರವು, ಆಸೀತ್= ಇದ್ದಿತು, ತಮಸಾ= ತಮಸ್ಸಿನಿಂದ, ಗೂಳ್ಹಂ= ದಟ್ಟವಾಗಿ ಕವಿದಿರುವ, ಅಪ್ರಕೇತಂ= ಆವರಿಸಲ್ಪಟ್ಟಿರುವುದೇನೂ ತಿಳಿಯದಂತೆ ಆವ ಸಿರುವ, ಸಲಿಲಂ= ಹಾಲಿನಲ್ಲಿರುವ ಜಲದಂತೆ ಅಭೇದ್ಯವಾದ, ಇದಂ ಸರ್ವಂ = ಜಗತ್ತಿದೆಲ್ಲವೂ, ಆಃ= ಇದ್ದಿತು, ಯತ್= ಯಾವ, ಏಕಂ= ಅದ್ವಿ ತೀಯವಾದ, ಆಭುಃ= ಬಯಲು ಅಥವಾ ಶೂನ್ಯ (void) ಎನಿಸುವ ಪರ ಬ್ರಹ್ಮವು, ತುಚ್ಛೇನ =ಮಾಯಾ ಶಕ್ತಿಯಿಂದ, ಅಪಿಹಿತಂ= ಆಚ್ಛಾದಿತವಾ ಯಿತೋ, ತತ್= ಆ ಪರಬ್ರಹ್ಮವು, ತಪಸಃ= ಸೃಷ್ಟಿಮಾಡಬೇಕೆಂಬ ಜ್ಞಾನ ರೂಪ ತಪಸ್ಸಿನ, ಮಹಿಮಾ =ಮಹಿಮೆಯಿಂದ, ಅಜಾಯತ =ಜಗ ತ್ತಾಗಿ ಹೊರಹೊಮ್ಮಿತು.

ಪದ್ಯಾನುವಾದ:

ಕವಿದಿತ್ತು ಗಾಢತಮಮಾರಂಭದಾದಿಯೊಳ್ |
ಕವಿದಿತ್ತು ಗಾಢತಮಮೇನುಮಂ ತಿಳಿಯದೊಲ್ |
ಕವಿದಿತ್ತು ಸಲಿಲಮಿದನೆಡಬಿಡದೆ ಸರ್ವಮಂ |
ಕವಿದಿತ್ತು ಮಾಯೆಯದು ಬಯಲೆನಿಪ ತತ್ತ್ವಮಂ |
ತವೆಪರಮನೆಸಗಿದಾ ತಪದ ಮಹಿಮೆಯಿಂ ಸಂ |
ಭವಿಸಿತು (ದ್ವೈತ) ಜಗಮದ್ವೈತ ತತ್ತ್ವದಿಂ || ೩ ||

---

ನೈಶಂ ತಮಃ ಸರ್ವಪದಾರ್ಥಜಾತಂ ಆವೃಣೋತಿ ತದ್ವತ್ ಆತ್ಮ ತತ್ತ್ವಸ್ಯ ಆವರಕತ್ವಾತ್ ಮಾಯಾಪರಸಂಜ್ಞಂ ಭಾವರೂಪಾಜ್ಞಾನಂ ಅತ್ರ ತಮ ಇತ್ಯುಚ್ಯತೇ

೨. ಅಪ್ರಕೇತಂ - ಅಪ್ರಜ್ಞಾಯಮಾನಂ

೩. ಸಲಿಲಂ - ಸಲಿಲಮಿತಿ ಲುಪ್ತೋಪಮಂ. ಸಲಿಲಮಿವ, ಯಥಾಕ್ಷೀರೇಣ ಅವಿಭಾಗಾಪನ್ನಂ ನೀರಂ ದುರ್ವಿಜ್ಞಾನಂ ತಥಾ ತಮಸಾ ಅವಿಭಾಗಾ ಪನ್ನಂ ಜಗತ್ ನಶಕ್ಯವಿಜ್ಞಾನಂ ಇತ್ಯರ್ಥಃ

೪. ತುಚ್ಛೇನ ತುಚ್ಛ ಕಲ್ಪನೇನ ಸದಸತ್ ವಿಲಕ್ಷಣೇನ

೫. ಅಪಿಹಿತಂ - ಛಾದಿತಂ

೬. ತಪಸಃ ತನ್ಮಹಿನಾ ಅಜಾಯತ - ತಪಸಃ-ಸ್ರಷ್ಟವ್ಯ ಪರ್ಯಾಲೋಚನ ರೂಪಸ್ಯ, ಮಹಿನಾ ಮಹಾತ್ಮ್ಯೇನ, ಅಜಾಯತ ಉತ್ಪನ್ನಂ

ಸರಳಾನುವಾದ— ನಾಮ ರೂಪಗಳಿಂದ ವಿವಿಧವಾಗಿ ಕಾಣುವ ಜಗತ್ತು, ಸೃಷ್ಟಿಗೆ ಮೊದಲು ಅಭೇದ ರೂಪವಾಗಿದ್ದು ನಾಮರೂಪ ರಹಿತವಾಗಿ ಚೇತನಾಚೇತನ ಸದಸದ್ ವ್ಯವಸ್ಥೆಯಿಲ್ಲದೆ, ಏನನ್ನೂ ತೋರಗೊಡದ, ಜಲದಂತೆ ನಿಬಿಡವಾದ ತಮೋರೂಪ ಮಾಯಾ ಶಕ್ತಿಯಿಂದ ಆವೃತವಾಗಿದ್ದಿತು. ಮಾಯಾ ಶಕ್ತಿಯು ಪರಮತತ್ತ್ವವೆನಿಸಿದ ಪರಮಾತ್ಮನನ್ನು ಮರೆಮಾಡಿದ್ದಿತು. ತಪೋ ರೂಪವಾದ ಜ್ಞಾನಶಕ್ತಿಯು ಹೊರ ಹೊಮ್ಮಿ, ನಾಮರೂಪ ಜಗತ್ತು ಹೊರ ಹೊಮ್ಮಲು ಕಾರಣವಾಯಿತು.

ವಿವೇಚನೆ— ಸೃಷ್ಟಿಗೆ ಮೊದಲು ವ್ಯಕ್ತವಾದ ಜಗತ್ತಾಗಲೀ, ಅದಕ್ಕೆ ಮೂಲವಾದ ಅವ್ಯಾಕೃತವೆನಿಸುವ ಅವ್ಯಕ್ತವಾಗಲೀ, ಇಲ್ಲದಂದು ಇದ್ದುದೊಂದು ಪರತತ್ತ್ವ ಇಲ್ಲವೆಂಬಂತೆ—ಎಂದು 'ಮೊದಲನೆಯ ಋಚೆಯು ಹೇಳುತ್ತದೆ. ಆ ಪರಮಶಿವ ತತ್ತ್ವದಿಂದ ಮಾಯೆಯೆನಿಪ ಪರಶಕ್ತಿ ಹೊರ ಹೊಮ್ಮದೆ ಅದ್ವೈತವಾಗಿದ್ದಿತದು—ಎಂಬುದು ಎರಡನೆಯ ಋಚೆಯಿಂದ ತಿಳಿದುಬರುತ್ತದೆ. ಹಾಗೆಂದಮೇಲೆ, ಆಗ ಚೈತನ್ಯ ರೂಪಿಣಿಯಾದ ಶಕ್ತಿಯು ಪರಮಶಿವನಿಂದ ಹೊರ ಹೊಮ್ಮಿರಲಿಲ್ಲವೆಂದಾಯಿತು. ಶಕ್ತಿಯು ಹೊರ ಹೊಮ್ಮಿ ಪರಶಿವ ತತ್ತ್ವವು ಶಕ್ತಿವಿಶಿಷ್ಟವಾಗುವ ಮೊದಲು, ಅದರ ಸ್ವರೂಪವೇ ಆದ ಮತ್ತು ಆದರಿಂದ ಅಭಿನ್ನವಾದ ಚೈತನ್ಯದಿಂದ ಅದು ಸ್ಫುರಿಸುತ್ತಿದ್ದಿತು–ಎಂದು ಎರಡನೆಯ ಋಚೆಯು ಹೇಳುತ್ತದಷ್ಟೆ. ಪರಶಿವಬ್ರಹ್ಮದಿಂದ ಹೊರಹೊಮ್ಮಿದ ಮಾಯಾ ಶಕ್ತಿಯು ಪರಶಿವ ಬ್ರಹ್ಮವನ್ನು ಆವರಿಸಿ ಅದನ್ನು ಮರೆ ಮಾಡುತ್ತದೆ. ಆದರೆ ಮಾಯಾ ಶಕ್ತಿಯು ಹೊರಹೊಮ್ಮುವ ಮೊದಲು ಆವರಿಸುವಂತಹುದು ಏನೂ ಆಗ ಇರಲಿಲ್ಲವೆಂಬುದು 'ಕಿಮಾವರೀವಃ' ಎಂದು ಮೊದಲನೆಯ ಋಚೆಯಲ್ಲಿ ಹೇಳಿರುವುದರ ಅರ್ಥವೆಂದು ಹಿಂದೆ ಸ್ಪಷ್ಟ ಮಾಡಲಾಯಿತು. ಗಹನವೂ ಗಭೀರವೂ ಆದ ನೀರು ಅಗ ಇರಲಿಲ್ಲವೆಂದು ಮೊದಲನೆಯ ಋಚೆಯಲ್ಲಿ ಹೇಳಿ, ಮೂರನೆಯ ಋಚೆಯಲ್ಲಿ ಅಂತಹ ನೀರು ಇದ್ದಿತು ಎಂದು ಹೇಳಿರುವುದರಲ್ಲಿ ಒಂದಕ್ಕೊಂದು ವ್ಯತ್ಯಾಸವಿರುವುದಲ್ಲವೇ ಎಂಬ ಪ್ರಶ್ನೆಯು ಏಳುವುದು. ಆವರಿಸುವಂತಹದೂ, ಗಹನವೂ ಗಭೀರವೂ ಆದ ಜಲವು ಇಲ್ಲದುದು, ಮೊದಲನೆಯ ಋಚೆಯು

ಹೇಳುವ ಸೃಷ್ಟಿ ಪೂರ್ವ ಸ್ಥಿತಿಯಲ್ಲಿ ಎಂಬುದನ್ನು ಗಮನಿಸಬೇಕು. ಹಾಗೆಯೇ ಅಪ್ರಜ್ಞಾಯಮಾನವಾಗಿ ಆವರಿಸುವ ಜಲವು ಇದ್ದಿತೆಂದು ಹೇಳುವುದು ಸೃಷ್ಟಿಯು ಹೊರಹೊಮ್ಮುವ ಸ್ಥಿತಿಯನ್ನು ಹೇಳುವ ಮೂರನೆಯ ಋಚೆ ಯಲ್ಲಿ ಎಂಬುದನ್ನೂ ಗಮನಿಸಿದರೆ ಸೃಷ್ಟಿಗೆ ಮೊದಲು ಇಲ್ಲದುದು ಸೃಷ್ಟಿಯು ಹೊರ ಹೊಮ್ಮುವಾಗ ಇದ್ದಿತೆನ್ನುವುದರಲ್ಲಿ ವ್ಯತ್ಯಾಸವೇನೂ ಇಲ್ಲವೆನ್ನು ವುದು ಸ್ಪಷ್ಟವಾಗುವುದು. ಸಲಿಲದಂತೆ ಎಲ್ಲವನ್ನೂ ನಿಬಿಡವಾಗಿ ವ್ಯಾಪಿಸಿ ತಮಸ್ಸಿನಂತೆ ಅಪ್ರಕೇತವಾಗಿ ಎಂದರೆ ಯಾವುದನ್ನು ಆವರಿಸಿ ಮರೆ ಮಾಡು ವುದೋ ಅಂತಹ ಪರಮಾತ್ಮನ ಜ್ಞಾನವಾಗದಂತೆ ಆವರಿಸಿಕೊಂಡಿರುವುದು ಏನು ಎಂದರೆ ಅದು ಮಾಯೆಯೇ ಎನ್ನಬೇಕು. ಆತ್ಮತತ್ತ್ವಸ್ಯಾವರ ಕತ್ವಾತ್, ಮಾಯಾಪರ ಸಂಜ್ಞಂ' ಎಂದು ಸಾಯಣ ಭಾಷ್ಯದಲ್ಲಿ ಹೇಳಿದೆ; ಶಾಂಕರ ಸಿದ್ಧಾಂತವನ್ನು ಅನುಸರಿಸಿ ಅದಕ್ಕೆ ಭಾವರೂಪಾಜ್ಞಾನಂ ಎಂಬ ವಿವರಣೆಯಿದೆ. ಮಾಯೆಯು ಅಜ್ಞಾನವಲ್ಲ. ಅದು ಅಜ್ಞಾನ ವನ್ನು ಉಂಟುಮಾಡತಕ್ಕುದು. ಕತ್ತಲೆಯು ದೀಪವನ್ನು ಆವರಿಸಲಾರದು ಹೇಗೋ ಹಾಗೆ ಜ್ಞಾನ ಜ್ಯೋತಿಯಾದ ಆತ್ಮ ತತ್ತ್ವವನ್ನು ಅಜ್ಞಾನಾಂಧ ಕಾರವು ಆವರಿಸಲಾರದು. ಮೋಡವು ಸೂರ್ಯನನ್ನು ಮರೆಮಾಡುವಂತೆ ಆತ್ಮ ಪ್ರಭಾಕರನನ್ನು ಮಾಯೆಯು ಜೀವರುಗಳಿಗೆ ಕಾಣದಂತೆ ಮರೆ ಮಾಡುವುದು. ಶ್ವೇತಾಶ್ವತರ ಉಪನಿಷತ್ತು ಬಹು ಮಟ್ಟಿಗೆ ನಾಸದೀಯ ಸೂಕ್ತವೇ ಹಿನ್ನೆಲೆಯಾಗಿರುವ ಉಪನಿಷತ್ತು. 'ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ' ಎಂದು ಅದರಲ್ಲಿ ಹೇಳಿದೆ. ಮಾಯೆಯೆಂದರೆ ಪ್ರಕೃತಿಯೆಂದೂ, ಮಾಯಿ ಎಂದರೆ ಪರಮೇಶ್ವರನೆಂದೂ ಅದರ ಅರ್ಥ. ಮಾಯೆ ಎಂದರೆ ಅಜ್ಞಾನವೆಂದಾದರೆ ಮಾಯಿಯಾದ ಪರಮೇಶ್ವರನನ್ನು ಅಜ್ಞಾನಿ ಎನ್ನಬೇಕಾದೀತು. ಆದುದರಿಂದ ಮಾಯೆ ಎಂದರೆ ಪ್ರಕೃತಿಯೇ ಹೊರತು ಅಜ್ಞಾನವಲ್ಲ. ಪರಶಿವಾಭಿನ್ನವಾದ ಮಾಯಾ ಶಕ್ತಿಯು ಹೊರ ಹೊಮ್ಮಿ ಅವ್ಯಾಕೃತ ಎಂದರೆ ಅವ್ಯಕ್ತ ಪ್ರಕೃತಿ ಯಾಗಿರುವುದು. ಈ ಸ್ಥಿತಿಯಲ್ಲಿ ಪ್ರಕೃತಿಯು ನಾಮರೂಪರಹಿತವಾಗಿದ್ದು ಮುಂದೆ ನಾಮರೂಪಾತ್ಮಕವಾಗುವುದು.

ಪ್ರಕೃತಿಯು ನಾಮರೂಪರಹಿತವಾಗಿ ಅವಿಭಾಗಾಪನ್ನವಾಗಿ, ದುರ್ವಿ

ಜ್ಞಾನವಾಗಿ ಇರುವ ಸ್ಥಿತಿಯನ್ನು ಈ ಮಂತ್ರದಲ್ಲಿರುವ 'ಅಪ್ರಕೇತಂ ಸಲಿಲಂ' ಎಂಬ ಪದಗಳು ಸೂಚಿಸುತ್ತವೆ. ಸಲಿಲಂ ಎಂಬ ಪದಕ್ಕೆ ಸಾಯಣ ಭಾಷ್ಯದಲ್ಲಿ ಹೇಳಿದಂತೆ 'ಸಲಿಲಮಿವ' ಎಂದರೆ 'ಜಲದಂತೆ ಇರುವ' ಎಂದು ಅರ್ಥಮಾಡಬೇಕು. 'ಸಲಿಲಮಿತಿ ಲುಪ್ತೋಪಮಂ; ಸಲಿಲಮಿವ; ಯಥಾಕ್ಷೀರೇಣ ಅವಿಭಾಗಾಪನ್ನಂ ನೀರಂ ದುರ್ವಿಜ್ಞಾನಂ ತಥಾ ತಮಸಾವಿಭಾಗಾಪನ್ನಂ ಜಗನ್ನಶಕ್ಯವಿಜ್ಞಾನಮಿತ್ಯರ್ಥಃ' ಎಂದು ಸಾಯಣ ಭಾಷ್ಯದಲ್ಲಿದೆ. ನೀರು ಮಿಶ್ರವಾದ ಹಾಲಿನಲ್ಲಿ ನೀರು ಯಾವುದು ಹಾಲು ಯಾವುದು ಎಂದು ಪ್ರತ್ಯೇಕಮಾಡಿ ಹೇಗೆ ಹೇಳಲಾಗದೋ ಹಾಗೆ ತಮಸ್ಸಿನಲ್ಲಿ ಜಗತ್ತು ಎಂದರೆ ಅವ್ಯಕ್ತವಾಗಿರುವ ಪ್ರಕೃತಿಯಲ್ಲಿ ಬೀಜರೂಪವಾಗಿರುವ ಜಗತ್ತು ಯಾವುದು ಎಂದು ನಿರ್ದೇಶಿಸಲಾಗದೆಂಬುದನ್ನು ಸಲಿಲ ಪದವು ಸೂಚಿಸುತ್ತದೆ

ಆಸೀದಿದಂ ತಮೋಭೂತಮಪ್ರಾಜ್ಞಾನಮಲಕ್ಷಣಂ |
ಅಪ್ರತರ್ಕ್ಯಮನಿರ್ದೇಶ್ಯಂ ಪ್ರಸುಪ್ತಮಿವ ಸರ್ವತಃ ||

ತಮಸ್ಸಿನಂತೆ ಎಲ್ಲೆಲ್ಲಿಯೂ ವ್ಯಾಪಿಸಿರುವ ಈ ಅವ್ಯಕ್ತ ಸ್ಥಿತಿಯನ್ನು ತಿಳಿಯುವುದಾಗಲೀ, ವಿಮರ್ಶಿಸುವುದಾಗಲೀ ವರ್ಣಿಸುವುದಾಗಲೀ ಅಸಾಧ್ಯವೆಂದೂ, ನಿದ್ರಿಸುವವನ ಸ್ಥಿತಿಯಂತೆ ಇರುವುದೆಂದೂ ಮೇಲಿನ ಶ್ಲೋಕದಲ್ಲಿ ಮನುವು ವರ್ಣಿಸಿದ್ದಾನೆ. ಮಯೂರಾಂಡರಸನ್ಯಾಯವು ಈ ಸ್ಥಿತಿಗೆ ಅನ್ವಯಿಸುತ್ತದೆ. ನವಿಲಿನ ವಿವಿಧ ಅಂಗಗಳನ್ನೂ ಅವುಗಳ ವಿವಿಧ ವರ್ಣಗಳನ್ನೂ ನವಿಲಿನ ತತ್ತಿಯ ರಸದಲ್ಲಿ ಗುರುತಿಸಲಾಗುವುದಿಲ್ಲ. ಹಾಗೆಯೇ ವ್ಯಕ್ತ ಜಗತ್ತಿನ ವಿವಿಧ ವರ್ಣದ ವಿವಿಧ ರೂಪಗಳು ಅವ್ಯಕ್ತ ಅವ್ಯಾಕೃತವೆಂಬ ತಮಸ್ಸಿನಲ್ಲಿ ಅವ್ಯಕ್ತವಾಗಿದ್ದು ಮುಂದೆ ವ್ಯಕ್ತ ಜಗತ್ತಾದಾಗ ಸ್ಪಷ್ಟವಾದ ರೂಪು ವರ್ಣಗಳನ್ನು ಪಡೆಯುವುವು.

ಶ್ವೇತಾಶ್ವತರ ಉಪನಿಷತ್ತಿನ ಮಂತ್ರವಿದರಿಂದ ಈ ವಿಷಯವನ್ನು ಸ್ಪಷ್ಟಮಾಡಬಹುದು;

ಯ ಏಕೋಽವರ್ಣೋ ಬಹುಧಾಶಕ್ತಿಯೋಗಾದ್
ವರ್ಣಾನನೇಕಾನ್ನಿಹಿತಾರ್ಥೋದಧಾತಿ |

ವಿಚೈತಿ ಚಾಂತ್ಯೇ ವಿಶ್ವಮಾದೌ ಚ ದೇವಃ
ಸನೋ ಬುದ್ಧ್ಯಾ ಶುಭಯಾ ಸಂ ಯುನಕ್ತು ||

ಈ ಮಂತ್ರದ ಕನ್ನಡ ಪದ್ಯಾನುವಾದವಿದು:

ಕಂದ| ಏಕನವರ್ಣಂ ವರ್ಣಾ |
ನೇಕವುನುರೆ ಸೃಜಿಸೆ ಶಕ್ತಿಯೋಗದೆ ಮೊದಲಾ |
ಲೋಕಿ ಪೊಡದು ನಿಹಿತಾರ್ಥಂ |
ಲೋಕಲಯಮುವನಿನವಂ ಕುಡುಗೆ ಶುಭ ಮತಿಯಂ ||

ಪರಶಿವ ಬ್ರಹ್ಮವು ವರ್ಣರಹಿತವಾದುದಾದರೂ ಶಕ್ತಿವಿಶಿಷ್ಟವಾಗುವು ದರಿಂದ ಬಹು ವರ್ಣಾತ್ಮಕ ಜಗತ್ತನ್ನು ಸೃಷ್ಟ್ಯಾದಿಯಲ್ಲಿ ಸೃಷ್ಟಿಸಿ ಕೊನೆಗೆ ಲಯಗೊಳಿಸುವುದೆಂಬುದು ಈ ಮಂತ್ರದ ಅಭಿಪ್ರಾಯ. 'ಯ ಏಕೋ ಅದ್ವಿತೀಯಃ ಪರಮಾತ್ಮಾ, ಅವರ್ಣಾ ಜಾತ್ಯಾದಿರಹಿತೋ ನಿರ್ವಿ ಶೇಷ ಇತ್ಯರ್ಥಃ' ಎಂಬ ಈ ಮಂತ್ರದ ಶಾಂಕರ ಭಾಷ್ಯದಂತೆ, ಪರಮಾತ್ಮ ತತ್ತ್ವವು 'ಅವರ್ಣ' ಎಂದರೆ ನಿರ್ವಿಶೇಷವಾದುದೂ, 'ಏಕಃ' ಎಂದರೆ ಅದ್ವಿ ತೀಯವಾದುದೂ ಆಗಿದೆ. ಅವರ್ಣವಾಗಿರುವ ಪರಶಿವ ಬ್ರಹ್ಮವು ಬಹು ವರ್ಣಾತ್ಮಕ ಜಗತ್ತನ್ನು ಸೃಷ್ಟಿಸಲು ಹೇಗೆ ಆಗುತ್ತದೆ? ಎಂಬ ಪ್ರಶ್ನೆಯು ಏಳುತ್ತದೆ. ಶಾಂಕರ ಭಾಷ್ಯದಲ್ಲಿ 'ಶಕ್ತಿಯೋಗಾತ್ ವರ್ಣಾನ್ ಅನೇ ಕಾನ್....ದಧಾತಿ ವಿದಧಾತಿ' ಎಂಬ ಉತ್ತರವಿದೆ. ಅವರ್ಣವಾದ ಎಂದರೆ ನಿರ್ವಿಶೇಷವಾದ ಪರಬ್ರಹ್ಮವು ಶಕ್ತಿವಿಶಿಷ್ಟವಾಗುವುದರಿಂದ ಬಹು ವರ್ಣಾತ್ಮಕ ಜಗತ್ತನ್ನು ಸೃಷ್ಟಿಸಲು ಸಾಧ್ಯವಾಗುತ್ತದೆ. ಪರಶಿವ ಬ್ರಹ್ಮ ದಿಂದ ಹೊರ ಹೊಮ್ಮುವ ಅವ್ಯಕ್ತ ಅವ್ಯಾಕೃತ ಎನಿಸುವ ಪ್ರಕೃತಿಯಾದರೂ ನೀರಕ್ಷೀರ ನ್ಯಾಯದಂತೆ ಅಭೇದವಾಗಿ ಎಂದರೆ ತನ್ನೊಳಗೆ ಅಡಗಿರುವ ಬಹು ರೂಪಾತ್ಮಕ ವ್ಯಕ್ತ ಚರಾಚರ ಪ್ರಪಂಚವನ್ನು ತೋರಗೊಡದೆ ನಾಸ ದೀಯ ಸೂಕ್ತದ ಮೂರನೆಯ ಋಚೆಯಿದರಲ್ಲಿ ಹೇಳಿದಂತೆ 'ತಮಸಾಗೂಢ ಮಗ್ರೇಽಪ್ರಕೇತಂ ಸಲಿಲಂ' ಎನ್ನುವಂತೆ ಇದ್ದಿತೆಂಬುದು ನಿರ್ಧಾರವಾಗು ವುದು. ಮೊದಲನೆಯ ಋಚೆಯಲ್ಲಿ ಹೇಳಿದ ಸದಸತ್ತುಗಳಿಗೆ ಮೀರಿದ ನಿಷ್ಕಲ ಪರಶಿವ ಬ್ರಹ್ಮದ ಸೃಷ್ಟಿ ಪೂರ್ವ ಸ್ಥಿತಿಯಲ್ಲಿ ಅಂಭಃ ಕಿಮಾಸೀದ್ ಗಹನಂ ಗಂಭೀರಃ ಎಂದರೆ ಗಹನವೂ ಗಬೀರವೂ ಆದ ಜಲದಂತೆ ಅಭೇದ

ರೂಪವಾದ ಶಿವಶಕ್ತಿರೂಪ ಪ್ರಕೃತಿಯು ಹೊರಹೊಮ್ಮಿದ್ದಿತೇ-ಎಂದರೆ ಇಲ್ಲ ವೆಂಬುದೇ ಸರಿಯಾದ ಉತ್ತರ ಕಿಂ ಆವರೀವಃ ? –ಎಂದರೆ ತಮದಂತೆ ಆವರಿಸುವ ಶಿವಶಕ್ತಿರೂಪ ಮಾಯೆಯು ಇದ್ದಿತೇ ಎಂದರೂ ಇಲ್ಲವೆಂಬುದೇ ಸರಿಯಾದ ಉತ್ತರ. ಆದರೆ ಹಿಂದೆ ಇಲ್ಲದ ಆವರಣಾತ್ಮಕ ತಮೋ ರೂಪವು 'ತಮಸಾಗೂಳ್ಹಂ ಅಪ್ರಕೇತಂ ಸಲಿಲಂ' ಎಂದರೆ ಅಂಧಕಾರದಿಂದ ದಟ್ಟ ವಾಗಿ ಕವಿದು ಏನನ್ನೂ ತೋರಗೊಡದ ಜಲದಂತೆ ಆವರಿಸಿದ್ದ ಶಿವಶಕ್ತಿರೂಪ ಮಾಯೆಯು ಪರಶಿವ ಬ್ರಹ್ಮವು ಸೃಷ್ಟ್ಯುನ್ಮುಖವಾದಾಗ ಹೊರಹೊಮ್ಮಿದ್ದಿ ತೆಂಬುದು ಮೂರನೆಯ ಋಚೆಯ ಆದಿಯಲ್ಲಿ ಹೇಳಿದೆ. ಅಂಭಃ, ಸಲಿಲಂ ಮೊದಲಾದ ಸೃಷ್ಟಿ ವಿಷಯವಾಗಿ ಹೇಳುವ ಪದಗಳಿಗೆ ಸಾಯಣ ಭಾಷ್ಯದಲ್ಲಿ ಹೇಳಿದಂತೆ 'ಸಲಿಲಮಿವ'ಯೆಂದರೆ ಜಲದಂತೆ ಅಭೇದವಾದ ಪರಶಿವ ಶಕ್ತಿ ರೂಪದ ಮಾಯೆ ಅಥವಾ ಪ್ರಕೃತಿಯೆಂದು ಅರ್ಥಮಾಡಬೇಕು. ಇಲ್ಲಿಗೆ ಮೂರನೆಯ ಋಚೆಯ ಪೂರ್ವಾರ್ಧದ ವಿವೇಚನೆಯು ಮುಗಿಯಿತು.

ನಾಸದೀಯ ಸೂಕ್ತದ ಮೂರನೆಯ ಋಚೆಯ ಉತ್ತರಾರ್ಧವು 'ತುಚ್ಛೇನ ಆಭು ಅಪಿಹಿತಂ' ಯೆಂಬ ಪದಗಳಿಂದ ಪ್ರಾರಂಭವಾಗುತ್ತದೆ. ಈಶಾವಾಸ್ಯೋಪನಿಷತ್ತಿನಲ್ಲಿ ಹೇಳಿರುವ ಹಿರಣ್ಮಯೇನ ಪಾತ್ರೇಣ ಸತ್ಯಸ್ಯ ಅಪಿಹಿತಂ ಮುಖಂ' ಯೆಂಬ ವಾಕ್ಯವು 'ತುಚ್ಛೇನ ಅಭು ಅಪಿಹಿತಂ' ಯೆಂಬುದರ ವ್ಯಾಖ್ಯಾನದಂತಿದೆ. ಛಾಂದೋಗ್ಯ ಉಪನಿಷತ್ತಿ ನಲ್ಲಿ (8–3–4) ಹೇಳಿದಂತೆ 'ಬ್ರಹ್ಮಣೋ ನಾಮ ಸತ್ಯಂ' ಯೆಂದರೆ ಸತ್ಯ ವೆಂಬುದು ಬ್ರಹ್ಮದ ಹೆಸರು ಇದರ ಶಾಂಕರ ಭಾಷ್ಯದಲ್ಲಿಯೂ 'ಸತ್ಯಂ ಹಿ ಅವಿತಥಂ ಬ್ರಹ್ಮ' ಯೆಂದು ಹೇಳಿದೆ. ಸತ್ಯಾಖ್ಯ ಪರಬ್ರಹ್ಮವು 'ಅಪಿಹಿತಂ' ಯೆಂದರೆ ಮುಚ್ಚಲ್ಪಟ್ಟಿರುವುದು, ಹಿರಣ್ಮಯೇನ ಪಾತ್ರೇಣ ಯೆಂದರೆ ಹೇಮಮಯ ಪಾತ್ರೆಯಿಂದ. ಚಿನ್ನದಂತೆ ಮೋಹಕಾರಕವು ಈ ಜಗತ್ತು. ಪರಶಿವಬ್ರಹ್ಮದ ಶಕ್ತಿಯಾದ ಹೈಮವತಿಯು ಕೇನದಲ್ಲಿ ಉಕ್ತ ಳಾಗಿದ್ದಾಳೆ. ಮೋಹಕಾರಿಯಾದ ಪ್ರಕೃತಿಯು ಪರಬ್ರಹ್ಮ ದರ್ಶನಕ್ಕೆ ಅಡ್ಡಿಯಾದ ಮುಸುಕನ್ನು ಹಾಕುತ್ತದೆ. ಈಶದ ರಂಗರಾಮಾನುಜ ಭಾಷ್ಯದಲ್ಲಿ 'ಹಿರಣ್ಮಯೇನ ಭೋಗ್ಯ ವರ್ಗೇಣ'ಯೆಂಬ ವಿವರಣೆಯಿದೆ.

ಭೋಗ್ಯ ವರ್ಗದಿಂದ ತುಂಬಿದೆ ಈ ಜಗತ್ತು. ಛಾಂದೋಗ್ಯ ಉಪನಿಷತ್ತಿನಲ್ಲಿ (8-3-1) 'ಸತ್ಯಾಃ ಕಾಮಾಃ ಅನೃತಾಪಿಧಾನಾಃ' ಎಂದಿದೆ ಸತ್ಯಕಾಮಿಗಳಿಗೆ ಅಡ್ಡ ಬರುವುದು ಅನೃತವಾದ ಈ ಜಗತ್ತಿನ ಮೋಹ. ಇಲ್ಲಿ ಸತ್ಯವೆಂಬ ಪದವನ್ನು ಬ್ರಹ್ಮಕ್ಕೂ ಅನೃತವೆಂಬ ಪದವನ್ನು ಸತ್ಯವಲ್ಲದ ಜಗತ್ತಿಗೂ ಉಪಯೋಗಿಸಿದೆ. ಆದರೆ ಪ್ರಳಯ ಕಾಲದವರೆಗೂ ಸತ್ಯವೇ ಆಗಿರುವುದರಿಂದ ಜಗತ್ತನ್ನು ಬೃಹದಾರಣ್ಯಕದಲ್ಲಿ ಸತ್ಯವೆಂದೂ ಪ್ರಳಯ ಕಾಲದಲ್ಲಿ ಜಗತ್ತು ನಾಶವಾಗುವುದಾದರೂ ಎಂದೆಂದಿಗೂ ಅಳಿಯದ ಪರಬ್ರಹ್ಮವನ್ನು ಅಮೃತವೆಂದೂ ಕರೆದಿದೆ. 'ಬ್ರಹ್ಮಾಮೃತಂ ಜಗತ್ ಸತ್ಯಂ'ಯೆಂಬ ನಿಲುವು ಬೃಹದಾರಣ್ಯಕದ್ದು. 'ಅಮೃತಂ ಸತ್ಯೇನಚ್ಛನ್ನಂ'ಯೆಂದು ಬೃಹದಾರಣ್ಯಕದಲ್ಲಿ (1-6-3) ಹೇಳಿರುವ ಅಭಿಪ್ರಾಯವಾದರೂ ಅಮೃತವಾದ ಬ್ರಹ್ಮವು ಸತ್ಯವೆನ್ನುವ ಜಗತ್ತಿನಿಂದ ಮರೆಯಾಗಿರುತ್ತದೆಯೆಂಬುದೇ. 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಶ್ರುತಿಯಂತೆ ತಾನು ಸೃಷ್ಟಿಸಿದ ಜಗತ್ತಿನೊಳಗೇ ಪರಬ್ರಹ್ಮವು ಅನುಪ್ರವೇಶಮಾಡಿ ಚೇತನಾಚೇತನಾತ್ಮಕ ಜಗತ್ತಿನಲ್ಲಿ ಅಂತರಾತ್ಮವಾಗಿ ಪ್ರಾಣಿಗಳ ಅಂಗಗಳಿಗೆಲ್ಲ ಚೈತನ್ಯದಾಯಕವಾಗಿರುವುದು. ಕೇನೋಪನಿಷತ್ತಿನಲ್ಲಿ ಹೇಳಿದಂತೆ—

> ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋಯದ್
> ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ

ಎಂದರೆ—

> ಅದು ಕಿವಿಯ ಒಳ ಕಿವಿಯು, ಅದು ಮನದ ಒಳಮನವು।
> ಅದು ವಾಕ್ಕಿನೊಳವಾಕ್ಕು, ಆದು ಜೀವದೊಳಜೀವ ॥

ವಚನ ವಾಙ್ಮಯದಲ್ಲಿ—

> ತನುವೊಳಗೆ ತನುವಾಗಿ ಮನದೊಳಗೆ ಮನವಾಗಿ
> ಪ್ರಾಣದೊಳಗೆ ಪ್ರಾಣವಾಗಿಪ್ಪುದೆಂದರ . . ಅರಿಯಬಹುದೆ?

ಎಂಬ ವಚನವುಂಟು. ತನುಮನ ಪ್ರಾಣಾದಿಗಳಲ್ಲಿ ಪರಮಾತ್ಮನಿದ್ದರೂ ಅವುಗಳಿಗೆ ಪರಮಾತ್ಮನು ಗೋಚರವಲ್ಲವೆಂದೇ ಕೇನೋಪನಿಷತ್ತು ಹೇಳುವುದು. 'ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿನೋಮನಃ' ಎಂದರೆ ಅದರ ಬಳಿ ಸಾರವವು ಮನ ಕಣ್ಣುವಾಕ್ಕುಗಳು—ಎಂದು ಅರ್ಥ.

ಪರಮಾತ್ಮತತ್ತ್ವವು ತನ್ನನ್ನು ಮರೆಮಾಡಿರುವ ಜಗತ್ತಿನೊಳಗೆ ಹುದುಗಿ ಅದಕ್ಕೆ ಚೈತನ್ಯದಾಯಕವಾಗಿದೆ. ಈಶೋಪನಿಷತ್ತಿನಲ್ಲಿಯೇ 'ಹಿರಣ್ಮಯೇನ ಪಾತ್ರೇಣ ಸತ್ಯಸ್ಯ ಮುಖಂ ಅಪಿಹಿತಂ'—ಎಂದು ಹೇಳಿರುವುದು ನಾಸದೀಯ ಸೂಕ್ತದಲ್ಲಿ 'ತುಚ್ಛೇನ ಆಭು ಅಪಿಹಿತಂ'—ಎಂಬುದರ ವಿವರಣೆಯಂತೆಯೇ ಇದೆ. ತಿಲಕರ ಗೀತಾರಹಸ್ಯದಲ್ಲಿರುವ ವಿವರಣೆಯಂತೆ "ಪಂಚದಶಿಯೊಳಗೆ (ಚಿತ್ರ ೧೯-೧೩೦) 'ತುಚ್ಛ'ವೆಂಬ ಶಬ್ದವನ್ನು ಮಾಯೆಗೆ ಹಚ್ಚಿದ್ದಾರೆ. (ನೃಸಿ. ಉತ್ತ ೯ ನೋಡು). ಅರ್ಥಾತ್ 'ಆಭು' ಎಂದರೆ ಪೊಳ್ಳು ಎಂಬ ಅರ್ಥವಲ್ಲದೆ ಪರಬ್ರಹ್ಮವೆಂಬಾಗುತ್ತದೆ." ಹೀಗೆ ಸೃಷ್ಟಿಗಾಗಿ ಪರಶಿವಬ್ರಹ್ಮವು ಶಕ್ತಿವಿಶಿಷ್ಟವಾಗಲು, ಅವ್ಯಕ್ತ ಅವ್ಯಾಕೃತ ಪ್ರಕೃತಿಯು ಆವರಣಾತ್ಮಕವಾದ ತಮದಂತೆ, ವ್ಯಾಪಕಾತ್ಮಕವಾದ ಜಲದಂತೆ ಹರಡುವುದು ಆ ಪ್ರಕೃತಿಯಲ್ಲಿ ಪರಮಾತ್ಮನು ಅಡಗಲು, ಮಾಯೆಯೊಳಗೆ ಪರಮಾತ್ಮನೆನ್ನುವಂತಾಯಿತು. ಪ್ರಕೃತಿಯಿಂದ ವ್ಯಕ್ತವಾದ ಜಗತ್ತಾಗಲು, ಅದರಲ್ಲಿ ಅಡಗಿ ಅಂತರ್ಯಾಮಿಯಾದ ಪರತತ್ತ್ವವು 'ಮಣಿಗಳ ಸೂತ್ರದಂತೆ, ತ್ರಿನಯನ ನೀನಿಪ್ಪೆಯಯ್ಯಾ, ಎಣಿಸುವಡೆ ತನು ಭಿನ್ನ ಆತ್ಮನೊಬ್ಬನೇ' ಎನ್ನುವಂತಾಯಿತು. ತೋಂಟದ ಸಿದ್ಧಲಿಂಗ ಶಿವಯೋಗಿಗಳ ಉದ್ಗಾರವಿದು ಉದ್ಬೋಧವಾದುದಾಗಿದೆ:

ದೇಹ ಮರೆಗೊಂಡಿಪ್ಪ ಆತ್ಮನಂತೆ ಶಕ್ತಿಯು ಮರೆಗೊಂಡಿಪ್ಪ ಶಿವನಂತೆ ಕ್ಷೀರವು ಮರೆಗೊಂಡಿಪ್ಪ ತುಪ್ಪದಂತೆ, ವಾಚ್ಯವು ಮರೆಗೊಂಡಿಪ್ಪ ಅನಿರ್ವಾಚ್ಯದಂತೆ ಲೋಕಾರ್ಥದೊಳಡಗಿರ್ಪ ಪರಮಾರ್ಥದಂತೆ ಎನ್ನ ಆತ್ಮದೊಳಡಗಿರ್ಪ ಪರಮತತ್ತ್ವವು ಬೀಜದೊಳಡಗಿರ್ಪ ವೃಕ್ಷದಂತೆ ಇದ್ದಿತಯ್ಯಾ ನಾನರಿಯದ ಮುನ್ನ ಎನ್ನೊಳಡಗಿರ್ದಿತಯ್ಯಾ ಶರಣಲಿಂಗಸಂಬಂಧ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ

ಮಹರ್ಷಿ ಅರವಿಂದರು ಹೇಳುವುದಾದರೂ ಇದೇ:

The truth is already within us and calls for its release from the covering that conceals it in manifested nature.

ಸೃಷ್ಟಿಪೂರ್ವದಲ್ಲಿ ಶಕ್ತಿ ತತ್ತ್ವವು ಶಿವನಲ್ಲಿ ನನೆಯೊಳಗಣ ಪರಿಮಳ ದಂತೆ ಇದ್ದಿತು, ಕನ್ನೆಯಸ್ನೇಹದಂತೆ ಇದ್ದಿತು, ಎಂದು ಹೇಳುವುದು ಶಿವಾದ್ವೈತಸ್ಥಿತಿಯು ಚೆನ್ನಾಗಿ ವಿವರಿಸಲ್ಪಟ್ಟಿದೆ. ಕ್ಷೀರದಲ್ಲಿ ಮರೆಗೊಂಡಿಪ್ಪ ತುಪ್ಪವನ್ನು ಬೇರ್ಪಡಿಸಬಹುದು. ಏಕೆಂದರೆ ಘೃತವಿಶಿಷ್ಟವಾದುದು ಕ್ಷೀರ. "ತಿಲೇಷು ತೈಲಂ ದಧಿನೀವ ಸರ್ಪಿಃ" ಎಂಬ ಮೊದಲಾಗುವ ಶ್ವೇತಾಶ್ವತರ ಶ್ರುತಿಯಲ್ಲಿ ಶಕ್ತಿಯು ಹೊರಹೊಮ್ಮಿ ಶಕ್ತಿಯಿಂದ ವಿಶಿಷ್ಟನಾದ ಶಿವನ ಸ್ಥಿತಿಯನ್ನು ಎಂದರೆ ನಾಸದೀಯ ಸೂಕ್ತದ ಮೂರನೆಯ ಋಚೆಯಲ್ಲಿ ಹೇಳಿದ ವಿಶಿಷ್ಟಾದ್ವೈತ ಸ್ಥಿತಿಯನ್ನು ಹೇಳಿದೆ. ಎಳ್ಳಿನಲ್ಲಿ ಎಣ್ಣೆಯನ್ನು ತೆಗೆದಂತೆ ನನೆಯಲ್ಲಿ ಪರಿಮಳವನ್ನು ಬೇರ್ಪಡಿಸ ಲಾಗುವುದಿಲ್ಲ. ಕನ್ನೆಯಲ್ಲಿ ಎಷ್ಟು ಸ್ನೇಹ ತೋರಿದರೂ ಕಾಮವಿಕಾರ ವಾಗದು. ಹಾಗೆಯೇ ಸೃಷ್ಟಿಗೆ ಮೊದಲು ಎಂದರೆ ನಾಸದೀಯ ಸೂಕ್ತದ ಒಂದೆರಡನೆಯ ಮಂತ್ರಗಳು ಹೇಳುವ ಸ್ಥಿತಿಯಲ್ಲಿ ಶಿವನಿಂದ ಶಕ್ತಿಯು ಹೊರಹೊಮ್ಮಿ ಇರುವುದಿಲ್ಲವಾಗಿ ಶಿವಾದ್ವೈತಸ್ಥಿತಿಯೇ ಇರುವುದು.

ನಾಸದೀಯ ಸೂಕ್ತದಲ್ಲಿ 'ಆಭು' ಎಂಬ ಪದವು ಪರಬ್ರಹ್ಮ—ಎಂಬ ಅರ್ಥದಲ್ಲಿ ಉಪಯೋಗಿಸಿರುವ ಪಾರಿಭಾಷಿಕಪದವು. ಬೃಹತ್ವಾತ್‌ಬ್ರಹ್ಮ ಎಂಬ ಅರ್ಥದಲ್ಲಿ ಬ್ರಹ್ಮ ಎಂಬ ಪದವು ಪರಮಾತ್ಮನನ್ನು ನಿರ್ದೇಶಿಸಲು ಉಪಯೋಗಿಸಿದ ಪಾರಿಭಾಷಿಕ ಪದವಾದರೂ, ಇದನ್ನು ಆ ಅರ್ಥದಲ್ಲಿ ಋಗ್ವೇದದಲ್ಲಿ ಉಪಯೋಗಿಸಿರುವುದು ಕಂಡುಬಂದಿಲ್ಲ. ಋಗ್ವೇದದ ಋಷಿ ಗಳು ಪರತತ್ತ್ವವನ್ನು ನಿರ್ದೇಶಿಸಲು ಯೋಜಿಸಿಕೊಂಡಿರುವ ಮೊದಲನೆಯ ಪದವು, "ಆಭು" ಎಂಬ ಪದವೇ ಆಗಿದೆ. ಆಭು-ಎಂಬ ಪದಕ್ಕೆ ಟೊಳ್ಳು ಎಂಬ ಸಾಮಾನ್ಯ ಅರ್ಥವೂ, ಪರಮಾತ್ಮ-ಎಂಬ ಪಾರಿಭಾಷಿಕ ಅರ್ಥವೂ ಇರುವುದನ್ನು ಮೇಲೆ ಹೇಳಿದೆ. ಮ್ಯಾಕ್ಸ್‌ಮುಲರು ನಾಸದೀಯ ಸೂಕ್ತ ವನ್ನು ಭಾಷಾಂತರಿಸುವುದರಲ್ಲಿ "ಆಭು" ಪದಕ್ಕೆ "void" ಎಂದು ಭಾಷಾಂತರಿಸಿರುವರು. ಸೃಷ್ಟಿಯಾದುದೆಲ್ಲವನ್ನೂ "ಸತ್" ಎಂದರೆ ಇರು ವುದು ಎಂದು ಹೇಳುವರಷ್ಟೆ. ಸೃಷ್ಟಿಗೆ ಮೊದಲ ಸ್ಥಿತಿಯು ಸದಸತ್ತುಗಳಿಗೆ ಮೀರಿ ಇಲ್ಲದಂತೆ ಇರುವುದಕ್ಕೆ ವಚನಕಾರರ "ಶೂನ್ಯ, ಬಯಲು" ಎಂಬ ಪಾರಿಭಾಷಿಕ ಪದಗಳಂತೆ ಇರುವ "ಆಭು" ಎಂಬ ಪಾರಿಭಾಷಿಕ ಪದವನ್ನು

ಕ ಸೂಕ್ತದ ಋಷಿಯು ನಿಯೋಜಿಸಿಕೊಂಡುದು ಕಂಡುಬರುತ್ತದೆ. ಶಿಷ್ಟೇಕೆ ?—ಶೂನ್ಯ, ಬಯಲು—ಎಂಬ ಪದಗಳಿಗೆ ನಾಸದೀಯ ಸೂಕ್ತದ "ಅಭು" ಪದವೇ ಹಿನ್ನೆಲೆಯಾಗಿದೆಯೆನ್ನಬಹುದು.

> ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ |
> ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ||

ಎಂಬ ಸೃಷ್ಟಿ ವಿಷಯದ ಮಂತ್ರದ ಅಭಿಪ್ರಾಯವೇ ಕೆಳಗಿನ ವಚನದಲ್ಲಿದೆ:

> ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆದು
> ಬಯಲು ಬಯಲಾಯಿತಯ್ಯಾ ಗುಹೇಶ್ವರಾ

ಬಯಲು ನಿರ್ವಯಲು, ಶೂನ್ಯ, ನಿಶ್ಶೂನ್ಯ ಮೊದಲಾದ ಪದಗಳಂತೆ 'ಅಭು' ಎಂಬ ಪದವು ಪರಬ್ರಹ್ಮವನ್ನು ನಿರ್ದೇಶಿಸುತ್ತದೆ. 'ತುಚ್ಛೇನ ಆಭು ಅಪಿಹಿತಂ' ಎಂದರೆ ಪರಶಿವಬ್ರಹ್ಮವು ಶಕ್ತಿವಿಶಿಷ್ಟವಾಯಿತೆಂದರ್ಥ. 'ತಪಸಸ್ತನ್ಮಹಿನಾಜಾಯತೈಕಂ' ಎಂಬ ಪದಗಳು ಪರಶಿವನು ಶಕ್ತಿ ವಿಶಿಷ್ಟನಾದುದು ಸೃಷ್ಟಿಗೆ ಉನ್ಮುಖನಾದುದರಿಂದ- ಎಂಬುದನು ಸೂಚಿಸುತ್ತದೆ.

ಇನ್ನು ಅದ್ವೈತವಾದ ಪರಶಿವತತ್ತ್ವವು ಸೃಷ್ಟ್ಯುನ್ಮುಖವಾದಾಗ್ನ ಶಕ್ತಿ ವಿಶಿಷ್ಟವಾಗಿ ಹೇಗೆ ವಿಶಿಷ್ಟಾದ್ವೈತ ರೂಪವಾಗುವುದೆಂಬುದನ್ನೂ, ತದನಂತರ ಹೇಗೆ ದ್ವೈತ ಜಗತ್ತಾಗಿ ಪರಿಣಮಿಸುವುದೆಂಬ ವಿಷಯವನ್ನೂ ಶ್ವೇತಾಶ್ವತರಶ್ರುತಿಯ ಆಧಾರದಿಂದಲೂ ಅದರ ಭಾಷ್ಯಗಳಿಂದಲೂ ವಿವರಿಸಲಾಗುವುದು.

> ಯದಾ ತಮಸ್ತನ್ನದಿವಾ ನರಾತ್ರಿರ್ನಸನ್ನಚಾಸಚ್ಛಿವ ಏವ ಕೇವಲಃ |
> ತದಕ್ಷರಂ ತತ್ ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್
> ಪ್ರಸೃತಾ ಪುರಾಣೀ ||

ಶ್ವೇತಾಶ್ವರೋಪನಿಷತ್ತಿನ ಮಂತ್ರವಿದರ ಪದಗಳು ನಾಸದೀಯ ಸೂಕ್ತದಲ್ಲಿನ ಮುಖ್ಯಪದಗಳೇ. ಆದುದರಿಂದಲೇ ಈ ಮಂತ್ರದ ವಿಜ್ಞಾನ ಭಗವದ್‌ಕೃತ ವಿವರಣದಲ್ಲಿ "ನಾಸದಾಸೀನ್ನೋಸದಾಸೀತ್ ತಮ

ಆಸೀದಿತಿ ಶ್ರುತ್ಯಂತರೋಕ್ತಂ" ಎಂದು ಹೇಳಿ ಮೇಲಿನ ಮಂತ್ರಕ್ಕೆ ನಾಸದೀಯ ಸೂಕ್ತವೇ ಆಧಾರವೆಂಬುದನ್ನು ಸ್ಪಷ್ಟಮಾಡಿದೆ. ನಾಸದೀಯ ಸೂಕ್ತೋಕ್ತ ಪರಬ್ರಹ್ಮವನ್ನು ಉಪನಿಷತ್ತು 'ಶಿವ' ಎಂಬ ಮಂಗಳಾರ್ಥವುಳ್ಳ ಪದದಿಂದ ಕರೆದಿದೆ. ಸೂಕ್ತದ ಒಂದೆರಡನೆಯ ಮಂತ್ರದಂತೆ ರವಿಶಶಿದಿನನಿಶಿ ಸದಸತ್‌ಗಳೂ ತಮವೂ ಇಲ್ಲದ ಕಾಲದಲ್ಲಿ ಪರಬ್ರಹ್ಮವು 'ಸ್ವಧಾ' ಎಂಬ ತನ್ನೊಳಗಿನ ಶಕ್ತಿಯಿಂದ ಅವಿಭಾಗವಾಗಿ ಅದ್ವೈತವಾಗಿದ್ದಿತೆನ್ನು ವುದನ್ನು ಶ್ವೇತಾಶ್ವತರಶ್ರುತಿಯೂ ಹೇಳುತ್ತದೆ. ಇದರ ಶ್ರೀಕಂಠಭಾಷ್ಯದಲ್ಲಿ ಹೇಳಿದಂತೆ–ಸ್ಥೂಲ ಸೂಕ್ಷ್ಮ ಚೇತನಾ ಚೇತನ ಸದಸದ್‌ವ್ಯಕ್ತಿ ವ್ಯವಸ್ಥಾ ರಹಿತಂ ಸರ್ವಮಿದಂ ತಮೋಭೂತಮಾವರ್ತತ, ತದಾ ಶಿವ ಏವಾ ದ್ವಿತೀಯಃ ಕೇವಲಃ' ಎಂದರೆ ಸ್ಥೂಲಸೂಕ್ಷ್ಮ ಚೇತನಾಚೇತನ ಸದಸದ್ ಶಕ್ತಿ ವ್ಯವಸ್ಥೆಯಿಲ್ಲದೆ ಇದೆಲ್ಲವನ್ನು ತಮಸ್ಸು ಆವರಿಸಿ ಶಿವನು ಕೇವಲ ಅದ್ವಿತೀಯನಾಗಿದ್ದನು. ಮೂರನೆಯ ಋಕ್ಕಿನಲ್ಲಿ ಹೇಳಿದ ಶಕ್ತಿ ವಿಶಿಷ್ಟಾದ್ವೈತ ಸ್ಥಿತಿಯಿದು. ಸದಸದ್‌ವ್ಯಕ್ತಿವ್ಯವಸ್ಥೆಯನ್ನು ತೋರದ ತಮದಂತೆ ವ್ಯಾಪಿಸಿರುವ ಮಾಯೆಯಿಂದ ವಿಶಿಷ್ಟನಾದ ಮಾಯಿಪರಶಿವ ನಿವನು. 'ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ' ಎಂಬ ಶ್ವೇತಾಶ್ವತರ ಶ್ರುತಿಯ ಕೊನೆಯ ಭಾಗದ ವಿವರಣೆಯು ಶ್ರೀಕಂಠಭಾಷ್ಯದಲ್ಲಿ ಹೀಗಿದೆ– 'ತಸ್ಮಾತ್–ತಾದೃಶಾತ್ ಸ್ವವಿಲೀನ ಸ್ವೇತರ ನಿಖಿಲ ಚಿದಚಿತ್ ಪ್ರಪಂಚಾತ್, ಅದ್ವಿತೀಯಾ, ಪುರಾಣೀ, ನಿತ್ಯಸಿದ್ಧಾ, ತತ್ಕಾಲ ತಮೋಽಪನೋದಿನೀ, ಮಹಾಸ್ಫುರಣರೂಪಾ, ಪರಮಾ, ಪ್ರಜ್ಞಾ, ಜ್ಞಾನಶಕ್ತಿಃ, ಪ್ರಸೃತಾ ಪ್ರಾವರ್ತತ'. ಮಾಯಿಯಾದ ಪರಶಿವನೊಳಗೆ ವಿಲೀನವಾದ, ಚಿದಚಿತ್ ಪ್ರಪಂಚದಿಂದ ತಮಸ್ಸನ್ನು ಪರಿಹರಿಸುವ ಮಹಾ ಸ್ಫುರಣರೂಪಳಾದ ಜ್ಞಾನಶಕ್ತಿಯು ಆವಿರ್ಭವಿಸುವಳು ಎಂದು ಶ್ರೀಕಂಠ ಭಾಷ್ಯದಲ್ಲಿ ವಿವರಣೆಯಿದೆ. ಇದೇ 'ತಪಸಸ್ತನ್ಮಹಿನಾಜಾಯತೈಕಂ' ಎಂಬ ನಾಸದೀಯ ಸೂಕ್ತದ ಮೂರನೆ ಋಕ್ಕಿನ ಕೊನೆಯ ಭಾಗದ ವಿವರಣೆ.

## ನಾಸದೀಯ ಸೂಕ್ತದ ನಾಲ್ಕನೆಯ ಮಂತ್ರ

ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮಂ

ಯದಾಸೀತ್ । ಸತೋಬಂಧು[1]ಮಸತಿ[2] ನಿರವಿಂದನ್[3] ಹೃದಿ ಪ್ರತೀಷ್ಯಾ[4] ಕವಯೋ[5] ಮನೀಷಾ[6] ॥ ೪ ॥

ಪ್ರತಿಪದಾರ್ಥ—ಮನಸೋರೇತಃ = ಮನಸ್ಸಿನ ಬೀಜರೂಪವಾಗಿ, ಯತ್ = ಯಾವುದು, ಆಸೀತ್ = ಇದ್ದಿತೋ, ತತ್ = ಅದೇ, ಕಾಮಃ = ಸೃಷ್ಟಿಯನ್ನು ನಿರ್ಮಿಸುವ ಇಚ್ಛಾಶಕ್ತಿಯಾಗಿ, ಸಂ ಅಧಿಅವರ್ತತ = ಹೊರ ಹೊಮ್ಮಿತು. ಅಸತಿ = ಅಸತ್ತಿನಲ್ಲಿ, ಸತಃ = ಸತ್ತಿಗೆ, ಪ್ರಥಮ ಬಂಧುಂ = ಮೊದಲನೆಯ ಸಂಬಂಧವೆಂದು, ಕವಯಃ = ಕ್ರಾಂತದರ್ಶಿಗಳಾದ ಋಷಿಗಳು, ಮನೀಷಾ = ಬುದ್ಧಿಯಿಂದ, ಪ್ರತೀಷ್ಯ = ವಿಚಾರ ಮಾಡಿ, ಹೃದಿ = ತಮ್ಮ ಹೃದಯದಲ್ಲಿ, ನಿರವಿಂದನ್ = ನಿಶ್ಚಯಿಸಿಕೊಂಡರು.

ಪದ್ಯಾನುವಾದ—

ಉದಿಸಿತಗ್ರದೊಳ್ ಮನದ ಬೀಜದ ರೂಪದೀ |
ಆದೆ ವರ್ಧಿಸಿದುದು ಸೃಜಿಸಲೆಳಸುವ ಕಾಮಂ |
ಮೊದಲ ಸಂಬಂಧಮಿಂತು ಸತ್ತಿಗಸತ್ತಿನೊಳ್ |
ಹೃದಯುದೊಳ್ ಯೋಗಿಗಳ್ ಚಿಂತಿಸಿ ತಿಳಿದರಿದಂ ||

ಸರಳಾನುವಾದ—ಪರಶಿವಬ್ರಹ್ಮಕ್ಕೆ ಜಗತ್ತನ್ನು ಸೃಷ್ಟಿಸಬೇಕೆಂಬ ಲೀಲೆಯುಂಟಾಯಿತು. ಬೀಜರೂಪವಾಗಿದ್ದ ಸೃಜಿಸಬೇಕೆಂಬ ಇಚ್ಛೆಯೇ ಇಚ್ಛಾಶಕ್ತಿಯಾಗಿ ಹೊರಹೊಮ್ಮಿತು. ಅಸತ್ತಿನಿಂದ ಸತ್ತೆನಿಸುವ ವ್ಯಕ್ತ ಜಗತ್ತು ಸೃಷ್ಟಿಯಾಗುವ ಸಂಬಂಧವು ಹೀಗೆ ಮೊದಲು ಆಯಿತು. ಕ್ರಾಂತದರ್ಶಿಗಳಾದ ಋಷಿಗಳು ವಿಚಾರಮಾಡಿ ಹೇಗೆ ಅಸತ್ ಸತ್ತಾಗಲು

---

ಸಾಯಣ ಭಾಷ್ಯಾಧಾರ :

1. ಸತೋಬಂಧುಂ-ಸತಃ-ಸತ್ತ್ವೇನ ಇದಾನೀಂ ಅನುಭೂಯಮಾನಸ್ಯ ಸರ್ವಸ್ಯ ಜಗತಃ, ಬಂಧುಂ-ಬಂಧಕಂ ಹೇತುಭೂತಂ. 2. ಅಸತಿ-ಸದ್ ವಿಲಕ್ಷಣೇ ಅವ್ಯಾಕೃತೇ ಕಾರಣೇ. 3. ನಿರವಿಂದನ್-ನಿಷ್ಕೃಷ್ಯಾಲಭಂತ ವಿವೇಚಾಲಿ ಜಾನನ್. 4. ಪ್ರತೀಷ್ಯ-ವಿಚಾರ್ಯ. 5. ಕವಯಃ-ಅತೀತಾನಾಗತ ವರ್ತಮಾನಾಭಿಜ್ಞಾ ಯೋಗಿನಃ. 6. ಮನೀಷಾ-ಮನೀಷಯಾ ಬುದ್ಧ್ಯಾ.

ಕಾರಣವಾಗಿದೆಯೆಂದು ವಿಮರ್ಶೆಯಿಂದ ತಿಳಿದುಕೊಂಡರು ಎಂಬುದು ತಾತ್ಪರ್ಯ.

ವಿವೇಚನೆ—ಯಾವ ಕೆಲಸವನ್ನಾದರೂ ಮಾಡುವ ಮೊದಲು ಅದನ್ನು ಹೇಗೆ ಮಾಡಬೇಕೆಂಬುದನ್ನು ಆಲೋಚಿಸಿ ಆ ಆಲೋಚನೆಗೆ, ಅನುಸಾರವಾಗಿ ಆ ಕೆಲಸವನ್ನು ಮಾಡುತ್ತೇವೆ. ಆದರೆ ಇವೆಲ್ಲಕ್ಕೂ ಮೊದಲು ಆ ಕಾರ್ಯವನ್ನು ಮಾಡಬೇಕೆಂಬ ಇಚ್ಛೆಯು ಇಲ್ಲದಿದ್ದರೆ, ಆ ಕಾರ್ಯವನ್ನು ಮಾಡುವುದು ಇರಲಿ, ಆ ವಿಷಯವಾಗಿ ಆಲೋಚನೆಯನ್ನು ಸಹಾ ಮಾಡುವುದಿಲ್ಲ. ಹಾಗೆಯೇ ಜಗತ್ತು ಸೃಷ್ಟಿಯಾಗಬೇಕಾದರೆ, ಪರಶಿವಬ್ರಹ್ಮಕ್ಕೆ ಹಾಗೆ ಮಾಡಬೇಕೆಂಬ ಇಚ್ಛೆಯುಂಟಾಗಿರಬೇಕು. ಆ ಇಚ್ಛೆಗೆ ಅನುಸಾರವಾಗಿ ಹೇಗೆ ಮಾಡಬೇಕೆಂಬ ಜ್ಞಾನಮಯ ತಪಸ್ಸೆಂಬ ವಿಚಾರವನ್ನು ಮಾಡಿರಬೇಕು. ಅರ್ಥಾತ್ ಪರಶಿವಬ್ರಹ್ಮದಲ್ಲಿ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳು ಕ್ರಮವಾಗಿ ಆವಿರ್ಭಾವವಾದವು.

> ಅನಾದಿ ನಿಧನಾತ್ ಶಾಂತಾತ್ ಶಿವಾತ್ ಪರಮಕಾರಣಾತ್ |
> ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ |
> ತತ್ರೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ||

ನಾಸದೀಯಸೂಕ್ತದ ಮೂರನೆಯ ಮಂತ್ರದಲ್ಲಿ ಹೇಳಿರುವ "ತಪಸಾ ತನ್ಮಹಿನಾಜಾಯತೈಕಂ" ಎಂಬ ಭಾಗದ ಸಾಯಣ ಭಾಷ್ಯದಲ್ಲಿ "ತಪಸಃ ಸ್ರಷ್ಟವ್ಯ ಪರ್ಯಾಲೋಚನ ರೂಪಸ್ಯ ಮಹಿನಾ ಮಹಾತ್ಮ್ಯೇನ ಅಜಾಯತ ಉತ್ಪನ್ನಂ" - ಎಂದು ಹೇಳಿದೆ. ತಪಸ್ಸೆಂದರೆ ಸೃಷ್ಟಿಸುವ ಪರ್ಯಾಲೋಚನೆಯ ರೂಪವಾದ ತಪಸ್ಸು ಎಂದು ಈ ಸಾಯಣಭಾಷ್ಯದಲ್ಲಿ ಹೇಳಿರುವುದಲ್ಲದೆ, 'ಜ್ಞಾನಮಯಂ ತಪಃ'-ಎಂಬ ಮುಂಡಕೋಪನಿಷತ್ತಿನ ಆಧಾರವನ್ನು ಕೊಟ್ಟಿದೆ. ತಪಸ್ಸು ಜ್ಞಾನಮಯವಾದುದು ಎಂದು ಇದರ ಅರ್ಥ. ಈ ಆಧಾರವುಳ್ಳ ಮುಂಡಕೋಪನಿಷತ್ತಿನ ಮಂತ್ರದ ಹಿಂದಿನ ಮಂತ್ರವು 'ತಪಸಾ ಚೀಯತೇ ಬ್ರಹ್ಮ'—ಎಂದರೆ ಬ್ರಹ್ಮವು ತಪಸ್ಸಿನಿಂದ ಉಬ್ಬುತ್ತದೆ ಎಂಬ ಅರ್ಥವುಳ್ಳ ವಾಕ್ಯದಿಂದ ಪ್ರಾರಂಭವಾಗುತ್ತದೆ. ಈ ಮಂತ್ರದ ಶಾಂಕರಭಾಷ್ಯದಲ್ಲಿ 'ತಪಸಾ ಜ್ಞಾನೋತ್ಪತ್ತಿ ವಿಧಿಜ್ಞ

ತಯಾ' ಎಂಬ ವಿವರಣೆಯಿದೆ. ಪರಬ್ರಹ್ಮಕ್ಕೆ ಸೃಷ್ಟಿಸಬೇಕೆಂಬ ಇಚ್ಛೆ ಯುಂಟಾದರೆ ಜಗತ್ತನ್ನು ಹೇಗೆ ಉತ್ಪತ್ತಿ ಮಾಡುವುದು ಎಂಬುದನ್ನು ಅರಿತುಕೊಂಡು ಸೃಷ್ಟಿಕ್ರಿಯೆಯನ್ನು ಮಾಡುವುದೆಂದು ಅಭಿಪ್ರಾಯ. ಶ್ರೀಶಂಕರಾಚಾರ್ಯರು ಬ್ರಹ್ಮವು ಸೃಷ್ಟಿ ಮಾಡಲು "ಜ್ಞಾನಕ್ರಿಯಾ ಶಕ್ತ್ಯಧಿಷ್ಠಿತ"ವಾಗುವುದೆಂದು ಅವರ ಮುಂಡಕಶ್ರುತಿಯಿದರ ಭಾಷ್ಯದಲ್ಲಿ ಹೇಳಿದ್ದಾರೆ. ಶಾಂಕರಭಾಷ್ಯದ ಈ ಪದಗಳ ಆನಂದಗಿರಿಯ ಟೀಕೆಯಲ್ಲಿ "ಜ್ಞಾನಶಕ್ತಿಭಿಃ, ಕ್ರಿಯಾಶಕ್ತಿಭಿಃ ಚ ಅಧಿಷ್ಠಿತಂ-ವಿಶಿಷ್ಟಂ"— ಎಂದು ಹೇಳಿದೆ. ಅರ್ಥಾತ್ ಪರಶಿವಬ್ರಹ್ಮಕ್ಕೆ ಸೃಷ್ಟಿಸಲು ಇಚ್ಛಾಶಕ್ತಿ ಯುಂಟಾಗಲು, ಅದು ಜ್ಞಾನಶಕ್ತಿಯಿಂದಲೂ ಕ್ರಿಯಾಶಕ್ತಿಯಿಂದಲೂ ವಿಶಿಷ್ಟವಾಗಬೇಕೆಂದು ಹೇಳಿದಂತಾಯಿತು. "ಏಕೋಽ ವರ್ಣಾ ಬಹುಧಾ ಶಕ್ತಿಯೋಗಾತ್" ಎಂದು ಪ್ರಾರಂಭವಾಗುವ ಶ್ವೇತಾಶ್ವತರ ಶ್ರುತಿಯ ಶಂಕರಭಾಷ್ಯದಲ್ಲಿ "ನಾನಾಶಕ್ತಿ ಯೋಗಾತ್" ಎಂಬ ಪದಗಳಿಗೆ "ಬಹುಧಾ ಶಕ್ತಿಯೋಗಾತ್" ಎಂಬ ವಿವರಣೆಯಿದೆ. ಆದುದರಿಂದ ಪರಶಿವಬ್ರಹ್ಮವು ಇಚ್ಛಾಜ್ಞಾನಕ್ರಿಯಾಶಕ್ತಿವಿಶಿಷ್ಟವಾಗಿ, ಕಾರ್ಯವನ್ನು ಮಾಡುವುದೆಂಬ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಬೇಕಾದಷ್ಟು ಆಧಾರ ವಿದೆಯೆಂದಾಯಿತು.

ನಾಸದೀಯ ಸೂಕ್ತದ ನಾಲ್ಕನೆಯ ಮಂತ್ರದ "ಸತೋಬಂಧು ಮಸತಿ" ಎಂಬುದರ ಸಾಯಣಭಾಷ್ಯದಲ್ಲಿ "ಸರ್ವಸ್ಯ ಜಗತೋಬಂಧುಂ ಬಂಧಕಂ ಹೇತುಭೂತಂ" ಎಂಬ ವಿವರಣೆಯಿದೆ. ಪರಶಿವಬ್ರಹ್ಮವು ಸೃಷ್ಟ್ಯುನ್ಮುಖವಾಗಿ ಶಕ್ತಿ ವಿಶಿಷ್ಟವಾಗಲು, ಅವ್ಯಕ್ತವಾದ "ಅಸತ್" ಎಂದರೆ ಅವ್ಯಾಕೃತವು ಹೊರಹೊಮ್ಮಿ ವ್ಯಕ್ತರೂಪವಾದ ಜಗತ್ತೆಲ್ಲವೂ ಹೊರ ಹೊಮ್ಮಲು ಹೇತುಭೂತ ಎಂದರೆ ಕಾರಣವು ಆಯಿತೆಂದು ಭಾವ. ಈ ವಿಚಾರವೆಲ್ಲವೂ ಏನೋ ಹೇಗೋ ಹೇಳಿದ ಮಾತಲ್ಲ. ಕ್ರಾಂತದರ್ಶಿಗಳಾದ ಋಷಿಪುಂಗವರು ಬುದ್ಧಿಯನ್ನು ಉಪಯೋಗಿಸಿ ವಿಚಾರಮಾಡಿ, ಹಾಗೆ ವಿಚಾರಕ್ಕೆ ಒಳಗಾದುದು ಅವರ ಹೃದಯಕ್ಕೆ ಆಪ್ಯಾಯಮಾನವಾಗಿದ್ದಿತು. ಎಂದರೆ ಅನುಭವವೇದ್ಯವಾಯಿತು ಎಂಬುದು "ನಿರವಿಂದನ್ ಹೃದಿ

ಪ್ರತೀಷ್ಯಾ ಕವಯೋ ಮನೀಷಾ” ಎಂಬ ಈ ಮಂತ್ರದ ಅಂತ್ಯಭಾಗದ ಅಭಿಪ್ರಾಯ.

## ನಾಸದೀಯ ಸೂಕ್ತದ ಐದನೆಯ ಮಂತ್ರ

ತಿರಶ್ಚೀನೋ ವಿತತೋ ರಶ್ಮಿರೇಷಾಮಧಃ ಸ್ವಿದಾಸೀದುಪರಿ ಸ್ವಿದಾಸೀತ್ ।[1] ರೇತೋಧಾ ಆಸನ್[2] ಮಹಿಮಾನ ಆಸನ್[3] ಸ್ವಧಾ ಅವಸ್ತಾತ್[4] ಪ್ರಯತಿಃ ಪರಸ್ತಾತ್[5] ॥

ಪ್ರತಿಪದಾರ್ಥ—ಏಷಾಂ = ಈ, ರಶ್ಮಿಃ = (ಸೃಷ್ಟಿಕ್ರಿಯಾ) ರಶ್ಮಿಯು, ತಿರಶ್ಚೀನಃ = ಅಡ್ಡಲಾಗಿಯೂ, ಅಧಃಸ್ವಿತ್ = ಕೆಳಗಡೆಯಲ್ಲಿಯೂ, ಉಪರಿಸ್ವಿತ್ = ಮೇಲುಗಡೆಯಲ್ಲಿಯೂ, ವಿತತಃ ಆಸೀತ್= ವಿಸ್ತಾರವಾಗಿ ಹರಡಿತು, ರೇತೋಧಾ = ಬೀಜಪ್ರದವಾದವು (ಎಂದರೆ ಭೋಕ್ತೃವರ್ಗ ಜೀವರುಗಳು, ಆಸನ್ = ಉತ್ಪನ್ನವಾದವು, ಮಹಿಮಾನಃ = ದೊಡ್ಡವಾದವು (ಎಂದರೆ ವಿಯದಾದಿ ಭೋಗ್ಯವಸ್ತುಗಳು),

---

ಸಾಯಣ ಭಾಷ್ಯಾಧಾರ

1. ವಿಯದಾದಿ ಭೂತಜಾತಾನಿ ಸೃಜತಾಂ ರಶ್ಮೀ ರಶ್ಮೀ ಸದೃಶೋ ಯಥಾ ಸೂರ್ಯರಶ್ಮಿರುದಯಾನಂತರಂ ನಿಮೇಷ ಮಾತ್ರೇಣ ಯುಗಪತ್ ಸರ್ವಂ ಜಗದ್ವ್ಯಾಪ್ನೋತಿ ತಥಾ ಶೀಘ್ರಂ ಸರ್ವತ್ರ ವ್ಯಾಪ್ನುವನ್ ಯಃ ಕಾರ್ಯವರ್ಗೋ ವಿತತೋ ವಿಸ್ತೃತ ಆಸೀತ್. 2. ರೇತೋಧಾ ರೇತಸೋ ಬೀಜಭೂತಸ್ಯ ಕರ್ಮಣೋ ವಿಧಾತಾರಃ ಕರ್ತಾರೋ ಭೋಕ್ತಾರಶ್ಚ ಜೀವಾ ಅಸನ್. 3. ಮಹಿಮಾನಃ ಮಹಾಂತೋ ವಿಯದಾದಯೋ ಭೋಗ್ಯಾ ಆಸನ್; ಏವಂ ಮಾಯಯಾ ಸಹಿತಃ ಪರಮೇಶ್ವರಃ ಸರ್ವಂ ಜಗತ್ ಸೃಷ್ಟ್ವಾ ಸ್ವಯಂ ಚಾನುಪ್ರವಿಶ್ಯ ಭೋಕ್ತೃ ಭೋಗ್ಯಾದಿ ರೂಪೇಣ ವಿಭಾಗಂ ಕೃತವಾನಿತ್ಯರ್ಥಃ. 4. ಸ್ವಧಾ ಅನ್ನನಾಮೈತತ್ ಭೋಗ್ಯ ಪ್ರಪಂಚೋಽವಸ್ತಾತ್ ಅಪರೋ ನಿಕೃಷ್ಟ ಆಸೀತ್. 5. ಪ್ರಯತಿಃ ಪ್ರಯತಿತಾ ಭೋಕ್ತಾ ಪರಸ್ತಾತ್‌ಪರ-ಉತ್ಕೃಷ್ಟ ಆಸೀತ್.

ಆಸನ್ = ಉತ್ಪನ್ನವಾದವು, ಸ್ವಧಾ = ಅನ್ನರೂಪವಾದ ಭೋಗ್ಯವರ್ಗವು, ಅವಸ್ತಾತ್ = ಕನಿಷ್ಟವು, ಪ್ರಯತಿಃ = ಭೋಕ್ತೃವರ್ಗವು, ಪರಸ್ತಾತ್ = ಶ್ರೇಷ್ಠವು.

ಸರಳಾನುವಾದ—ಸೂರ್ಯೋದಯವಾದ ಕೂಡಲೇ ಸೂರ್ಯ ರಶ್ಮಿಗಳು ಒಂದೇ ಬಾರಿಗೆ ಎಲ್ಲೆಲ್ಲಿಯೂ ಹರಡುವಂತೆ ಸೃಷ್ಟಿಕ್ರಿಯೆಯು ಆರಂಭವಾದ ಕೂಡಲೇ ಸೃಷ್ಟಿಯು ಎಲ್ಲೆಲ್ಲಿಯೂ ಹರಡಿತು. ವಿಸ್ತಾರವಾದ ಆಕಾಶಾದಿ ಭೋಗ್ಯವರ್ಗವೂ ಅದಕ್ಕಿಂತಲೂ ಶ್ರೇಷ್ಠವಾದ ಭೋಕ್ತೃ ವರ್ಗವೂ ಹೊರ ಹೊಮ್ಮಿ, ಜಗತ್ ಸೃಷ್ಟಿಯಾಯಿತೆಂದು ಭಾವ.

ಪದ್ಯಾನುವಾದ—

ಹರಡಿದುದು ಸೃಷ್ಟಿಕ್ರಿಯೂ ರಶ್ಮಿಯೆತ್ತಲುಂ।
ಹರಡಿದುದು ಮೇಲೆಡೆಗೆ ಕೆಳಗಡೆಗೆ ವಿಸ್ತೃತಂ।
ಹರಡಿದುದು ಬಿತದೊಡನೆ ಮಿಗಿಲಡ್ಡವಾಗಿಯುಂ।
ಉರೆ ಶ್ರೇಷ್ಠ ಭೋಕ್ತೃವೆನೆ ಭೋಗ್ಯ ವರ್ಗಕಿಂ।
ಹೊರಹೊಮ್ಮಿದವು ಮಹಾಂತ ಭೋಗ್ಯವರ್ಗಗಳ್।
ನೆರೆಬೀಜ ಭೂತ ಕರ್ಮದ ಕರ್ತೃ ಭೋಕ್ತೃಗಳ್ ‖ ೫ ‖

ವಿವೇಚನೆ -ಸೃಷ್ಟಿಕ್ರಿಯೆಯು ಪ್ರಾರಂಭವಾದ ಕೂಡಲೇ ಎಲ್ಲೆಲ್ಲಿಯೂ ಅದು ಹರಡಿತೆಂದು ಈ ಋಕ್ಕಿಯಲ್ಲಿ ಹೇಳಿರುವುದರಿಂದ ಮನುಷ್ಯನೂ ಮೃಗಗಳೂ, ತರುಗಳೂ, ಗಿರಿಗಳೂ ಎಲ್ಲವೂ ಒಂದೇ ಕಾಲದಲ್ಲಿ ಸೃಷ್ಟಿಯಾದ ವೆಂಬ ಭಾವನೆಯು ಬರಬಹುದು. ಆದರೆ ಈ ಮಂತ್ರದ ಅಭಿಪ್ರಾಯವು ಹಾಗಲ್ಲ ಏಕೆಂದರೆ ಮುಂದಿನ ಮಂತ್ರದಲ್ಲಿಯೇ "ಅರ್ವಾಗ್ ದೇವಾ ಅಸ್ಯ ವಿಸರ್ಜನೇನ" ಎಂದು ಮೊದಲಾಗಿ ಹೇಳಿರುವುದರಿಂದ ದೇವತೆಗಳ ಉತ್ಪತ್ತಿಯು ಸೃಷ್ಟಿಯ ಸ್ವಲ್ಪ ಭಾಗವು ಆದನಂತರ ಆಯಿತೆಂದು ಹೇಳಿದೆ. ಋಗ್ವೇದದ ದಶಮಮಂಡಲದಲ್ಲಿಯೇ ಸೃಷ್ಟಿಯಲ್ಲಿ ಮೊದಲು ಅಸತ್‌ನಿಂದ ಸತ್ ಆಯಿತೆಂದೂ, ಅನಂತರ ದಿಕ್ಕು ಮೊದಲಾದವುಗಳೂ ಅನಂತರ ವೃಕ್ಷಾದಿಗಳೂ ಆದುವೆಂದೂ ಹೇಳಿದೆ.

ದೇವಾನಾಂ ಯುಗೇऽ ಪ್ರಥಮೇऽ ಸತಃದಸಜಾಯತ |
ತದಾಶಾ ಅನ್ವಜಾಯಂತ ತದುತ್ತಾನ ಪದಸ್ಪರಿ || (ಋ೧೦-೭೨.೩)

ತೈತ್ತಿರೀಯ ಉಪನಿಷತ್ತಿನಲ್ಲಿ ಆತ್ಮನಿಂದ ಆಕಾಶವೂ ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಜಲವೂ, ಜಲದಿಂದ ಪೃಥ್ವಿಯೂ, ಪೃಥ್ವಿಯಿಂದ ವನಸ್ಪತಿಗಳೂ ಅವುಗಳಿಂದ ಅನ್ನವೂ, ಅನ್ನದಿಂದ ಪುರುಷನೂ ಉತ್ಪತ್ತಿಯಾದುದನ್ನು ಹೇಳಿದೆ:

ಆತ್ಮನ ಆಕಾಶಃ ಸಂಭೂತಃ ಆಕಾಶಾತ್ ವಾಯುಃ ವಾಯೋರಗ್ನಿಃ, ಅಗ್ನೇರಾಪಃ ಅದ್ಭ್ಯಃ ಪೃಥವೀ, ಪೃಥಿವ್ಯಾ ಓಷಧಯಃ ಓಷಧೀಭ್ಯೋऽನ್ನಂ, ಅನ್ನಾತ್ ಪುರುಷಃ.

ಡಾರ್ವಿನ್ನನ ನಿಯಮದಂತೆ ಸೂಕ್ಷ್ಮ ಚೇತನವಾದವುಗಳಿಂದ ಸೃಷ್ಟಿಯು ಪ್ರಾರಂಭಿಸಿ ಅತ್ಯಂತ ಚೈತನ್ಯವುಳ್ಳವುಗಳನ್ನು ಕ್ರಮವಾಗಿ ಉದ್ಭವಿಸಿಸುವುದೆಂಬ ಕಲ್ಪನೆಯು ಉಪನಿಷತ್ತಿನಲ್ಲಿಯೂ ಹಾಗೆಯೇ ವಚನ ವಾಙ್ಮಯದಲ್ಲಿಯೂ ಕಂಡು ಬರುತ್ತದೆ :

ಏನೇನೂ ಇಲ್ಲದ ಮಹಾಘನವು ತನ್ನ ಲೀಲೆಯಿಂದ ತಾನೇ ಸ್ವಯಂಭು ಲಿಂಗವಾಯಿತು, ಲಿಂಗದಿಂದಾಯಿತು ಶಿವಶಕ್ತ್ಯಾತ್ಮಕ, ಆ ಶಿವಶಕ್ತ್ಯಾತ್ಮಕ ನಿಂದ ಆಯಿತು ಆತ್ಮ, ಆತ್ಮನಿಂದಾದುದು ಆಕಾಶ, ಆಕಾಶದಿಂದಾದುದು ವಾಯು, ವಾಯುವಿನಿಂದಾದುದು ಅಗ್ನಿ, ಅಗ್ನಿಯಿಂದಾದುದು ಅಪ್ಪು, ಅಪ್ಪು ವಿನಿಂದಾದುದು ಪೃಥ್ವಿ, ಪೃಥ್ವಿಯಿಂದಾದುದು ಸಕಲ ಜೀವವೆಲ್ಲ. ಇವೆಲ್ಲ ನಿಮ್ಮ ನೆನಹಿನಿಂದಾದುವು ಚೆಮ್ಮಲಿಗೆಯ ಚೆನ್ನಿಗರಾಮಾ.

ಇಹಲೋಕದ ಸೃಷ್ಟಿಯು ಆಕಾಶದಿಂದ ಪ್ರಾರಂಭಿಸಿ ಸಕಲ ಜೀವಾವಳಿಯವರೆಗ ಕ್ರಮವಾಗಿ ಉದ್ಭವಿಸುವುದನ್ನು ಗಮನಿಸಬಹುದು.

ಈ ಮಂತ್ರದ ಸಾಯಣಭಾಷ್ಯದಲ್ಲಿ "ಮಾಯಯಾ ಸಹಿತಃ ಪರಮೇಶ್ವರಃ ಸರ್ವಂ ಜಗತ್ ಸೃಷ್ಟ್ವಾ ಸ್ವಯಂ ಚಾನುಪ್ರವಿಶ್ಯ ಭೋಕ್ತೃ ಭೋಗ್ಯಾದಿ ರೂಪೇಣ ವಿಭಾಗಂ ಕೃತವಾನಿತ್ಯರ್ಥಃ'' ಎಂದು ಈ

ಮಂತ್ರದ ವಿವರಣೆಯಲ್ಲಿ ಹೇಳಿದೆ. ಇದರಲ್ಲಿ ಸೃಷ್ಟಿಕರ್ತನು "ಮಾಯಾ ಸಹಿತಃ ಪರಮೇಶ್ವರಃ' ಎಂದರೆ ಶಕ್ತಿವಿಶಿಷ್ಟನಾದ ಪರಮೇಶ್ವರನು; ಸೃಷ್ಟಿ ಮಾಡುದರಲ್ಲಿ ಭೋಕ್ತೃ ಭೋಗ್ಯ ಎಂಬ ವಿಭಾಗವನ್ನು ಮಾಡಿರುವುದು ಕಂಡುಬರುತ್ತದೆ. ಈ ವಿಭಾಗವು ಶ್ವೇತಾಶ್ವತರ ಉಪನಿಷತ್ತಿನಲ್ಲಿಯೂ ಕಂಡುಬರುತ್ತದೆ. "ಭೋಕ್ತಾ ಭೋಗ್ಯಂ, ಪ್ರೇರಿತಾರಂಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್'' ಎಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿರುವುದರಲ್ಲಿ ಭೋಕ್ತಾ, ಭೋಗ್ಯ ಮತ್ತು ಪ್ರೇರಿತಾರಂ ಎಂದರೆ ಪ್ರೇರಕನಾದ ಈಶ್ವರನು ಎಂಬ ತ್ರಿವಿಧವಾಗಿರುವುದು ಬ್ರಹ್ಮವೆಂದು ಹೇಳಿದೆ. ಶಿವಮಹಾಪುರಾಣದಲ್ಲಿ ಶ್ವೇತಾಶ್ವತರ ಉಪನಿಷತ್ತಿನ ಇದೇ ಮೊದಲಾದ ಶ್ಲೋಕಗಳು ಉದ್ಧೃತವಾಗಿರುವುದರಿಂದ ಆ ಪುರಾಣಕ್ಕೆ ಈ ಉಪನಿಷತ್ತು ಹಿನ್ನೆಲೆಯೆಂಬುದು ಸ್ಪಷ್ಟ. ಈ ಪುರಾಣದ ಅನೇಕ ಶ್ಲೋಕಗಳು ಶ್ರೀಕಂಠಭಾಷ್ಯದಲ್ಲಿಯೂ ಶ್ರೀಕರಭಾಷ್ಯದಲ್ಲಿಯೂ ಆಧಾರವಾಗಿ ತೆಗೆದುಕೊಳ್ಳಲ್ಪಟ್ಟಿವೆ. ಸ್ವಲ್ಪಮಟ್ಟಿಗೆ ಸಿದ್ಧಾಂತ ಶಿಖಾಮಣಿ ಯಲ್ಲಿಯೂ ಇದು ಕಂಡುಬರುವುದು. "ಭೋಕ್ತಾ ಭೋಜ್ಯಂ ಪ್ರೇರ ಯಿತಾ ವಸ್ತುತ್ರಯಮಿದಂ ಸ್ಮೃತಂ'' ಎಂದು ಸಿದ್ಧಾಂತ ಶಿಖಾಮಣಿ ಯಲ್ಲಿಯೂ ಹೇಳಿದೆ. ವೀರಶೈವರ, ಇದೇ ಮೊದಲಾದ ನಿಲುವಿಗೆ ಶಿವಮಹಾಪುರಾಣವೂ ಶ್ವೇತಾಶ್ವತರೋಪನಿಷತ್ತೂ ಹಾಗೂ ನಾಸದೀಯ ಸೂಕ್ತವೂ ಹಿನ್ನೆಲೆಗಳೆಂಬುದು ಗಮನಾರ್ಹವಿಷಯವಾಗಿದೆ. ಶಕ್ತಿವಿಶಿಷ್ಟ ಶಿವನು ಜಗತ್ತಾಗಿ ಹೊರಹೊಮ್ಮಿ, ಅದರಲ್ಲಿ ಅಂತರ್ಯಾಮಿಯಾಗಿದ್ದು ಕಾಪಾಡಿ ಕೊನೆಗೆ ತನ್ನಲ್ಲಿ ಲಯಗೊಳಿಸಿಕೊಳ್ಳುವನೆಂಬ ವೀರಶೈವರ ಮುಖ್ಯ ಸಿದ್ಧಾಂತಕ್ಕೂ ಮೇಲ್ಕಂಡ ಆಧಾರಗಳೇ ಹಿನ್ನೆಲೆಯಾಗಿವೆ.

ಈ ಮಂತ್ರದಲ್ಲಿರುವ "ರೇತೋಧಾಃ" ಎಂಬ ಪದಕ್ಕೆ ಸಾಯಣ ಭಾಷ್ಯ ದಲ್ಲಿ "ರೇತಸೋ ಬೀಜಭೂತಸ್ಯ ಕರ್ಮಣೋ ವಿಧಾತಾರಃ" ಎಂದರೆ ಬೀಜಭೂತಕರ್ಮಗಳ ಕರ್ತೃಗಳಾದ ಜೀವರುಗಳು ಎಂದು ಅರ್ಥಮಾಡಿ ದ್ದಾರೆ. ಹಿಂದಿನ ಜನ್ಮನಲ್ಲಿ ಬಿತ್ತಿದ ಬೀಜದ ಕರ್ತೃಗಳು ಎಂಬ ಅರ್ಥವನ್ನು ಇಲ್ಲಿ ಎಳೆದು ಮಾಡಬೇಕಾಗಿಲ್ಲ. ಪೂರ್ವಜನ್ಮ ವಿಷಯವು ಇಲ್ಲಿ ಅಭಿಪ್ರೇತ

ವೆನ್ನುವುದಕ್ಕೆ ಕಾರಣವೇನಿಲ್ಲ. ಹಿಂದಿನ ಮಂತ್ರದಲ್ಲಿ "ಮನಸೋರೇತಃ" ಎಂದಿರುವುದರಿಂದ ಪರಮಾತ್ಮನ ಮನಸ್ಸಿನ ಸೃಷ್ಟಿಸಬೇಕೆಂಬ ಇಚ್ಛೆಯೇ ಸೃಷ್ಟಿಗೆ ಬೀಜಭೂತವಾಯಿತು. ಪರಮಾತ್ಮನಿಗೆ ಏಕೆ ಸೃಷ್ಟಿಸಬೇಕೆಂಬ ಇಚ್ಛೆಯಾಯಿತು ಎಂಬುದನ್ನು ನಾಸದೀಯ ಸೂಕ್ತದಲ್ಲಿ ಹೇಳಿಲ್ಲ. ಜೀವಿಗಳಂತೆ ಕಲ್ಲು ಮುಂತಾದವು ಮತ್ತೊಂದನ್ನು ಹುಟ್ಟಿಸಲಾರವು. ರೇತಸ್ಸಿಗೆ ವಿಧಾತರಾದ ಜೀವಿಗಳಿಗೂ ನಿರ್ಜೀವಿಗಳಿಗೂ ಇರುವವ್ಯತ್ಯಾಸವಿದೇ. ಜೀವಿಗಳು 'ರೇತಸೋ ವಿಧಾತಾರಃ' ಎನ್ನಬಹುದಾದವುಗಳು. ಈ ಅರ್ಥದಲ್ಲಿಯೇ 'ರೇತೋಧಾ' ಪದವು ಹೇಳಲ್ಪಟ್ಟಿದೆಯೆನ್ನಬಹುದು.

ಈ ಮಂತ್ರದ ಕೊನೆಯಭಾಗವು "ಸ್ವಧಾ ಅವಸ್ತಾತ್ ಪ್ರಯತಿಃ ಪರಸ್ತಾತ್" ಎಂಬುದು. ಸ್ವಧಾ ಎಂದರೆ ಅನ್ನರೂಪವಾದ ಭೋಗ್ಯ ವಸ್ತುಗಳು. "ಪ್ರಯತಿಃ" ಎಂದರೆ ಅನ್ನಾದಿ ಭೋಗ್ಯ ವಸ್ತುಗಳನ್ನು ಪಡೆಯಲು ಪ್ರಯತ್ನಿಸುವವನು ಎಂದರೆ ಭೋಕ್ತೃವು. ಭೋಗ್ಯ ವಸ್ತುಗಳನ್ನು ಪ್ರಯತ್ನದಿಂದ ಪಡೆದು ಭೋಗಿಸುವ ಭೋಕ್ತೃವರ್ಗವು ಸಂಖ್ಯೆಯಲ್ಲಿ ಕಡಮೆಯಾದರೂ, ತನ್ನ ಭೋಗಕ್ಕೆ ಒಳಪಟ್ಟ ಭೋಗ್ಯವಸ್ತುವಿಗಿಂತಲೂ ಶ್ರೇಷ್ಠವೆಂದು ಹೇಳಿರುವುದು ನ್ಯಾಯವಾಗಿಯೇ ಇದೆ.

## ನಾಸದೀಯ ಸೂಕ್ತದ ಆರನೆಯ ಮಂತ್ರ

ಕೋ ಅದ್ಧಾವೇದ[1] ಕ ಇಹ ಪ್ರವೋಚತ್[2] ಕುತ ಆಜಾತಾ ಕುತ ಇಯಂ ವಿಸೃಷ್ಟಿಃ|[3] ಅರ್ವಾಗ್ ದೇವಾ ಅಸ್ಯವಿಸರ್ಜನೇ[4] ನಾಥಾ ಕೋ ವೇದ ಯತ ಆಬಭೂವ || ೬ ||

---

ಸಾಯಣ ಭಾಷ್ಯಾಧಾರ

1. ಕಃಪುರುಷಃ, ಅದ್ಧಾ-ಪರಮಾರ್ಥ್ಯೇನ, ವೇದ-ಜಾನಾತಿ. 2. ಕಃ-ಇಹ, ಅಸ್ಮಿನ್ ಲೋಕೇ, ಪ್ರವೋಚತ್-ಪ್ರಬ್ರೂಯಾತ್. 3. ಇಯಂ-ದೃಶ್ಯಮಾನಾ, ವಿಸೃಷ್ಟಿಃ-ಬಹುಪ್ರಕಾರ ಸೃಷ್ಟಿಃ, ಕುತಃ-ಕಸ್ಮಾದುಪಾದಾನ ಕಾರಣಾತ್ ಕುತಃ-ಕಸ್ಮಾಚ್ಚ ನಿಮಿತ್ತ ಕಾರಣಾತ್, ಆಜಾತಾ-ಸಮಂತಾತ್ ಜಾತಾ. 4. ವಿಸರ್ಜನೇನ-ವಿಯದಾದಿ ಭೂತೋತ್ಪತ್ಯನಂತರಂ.

ಪ್ರತಿಪದಾರ್ಥ—ಕಃ = ಯಾರು, ಅದ್ಧಾ = ನಿಶ್ಚಯವಾಗಿ, ವೇದ = ಈ ಸೃಷ್ಟಿ ವಿಷಯವನ್ನು ಬಲ್ಲವನು? ಕಃ = ಯಾರು, ಇಹ = ಈ ಲೋಕದಲ್ಲಿ, ಪ್ರವೋಚತ್ = ಹೇಳಬಲ್ಲರು? ಇಯಂ = ಈ, ವಿಸೃಷ್ಟಿಃ = ವಿವಿಧ ಸೃಷ್ಟಿಯು, ಕುತಃ = ಯಾವುದರಿಂದ, ಕುತಃ = ಯಾರಿಂದ, ಆಜಾತಾ = ಉತ್ಪನ್ನವಾಯಿತು? ದೇವಾಃ = ದೇವತೆಗಳು, ಅಸ್ಯ = ಈ ಜಗತ್ತಿನ, ವಿಸರ್ಜನೇನ ಅರ್ವಾಕ್ = ಸೃಷ್ಟಿಯ ಅನಂತರ ಹುಟ್ಟಿದವರು, ಅಥ = ಆದುದರಿಂದ, ಯತಃ = ಯಾರಿಂದ, ಆಭಭೂವ = ಉತ್ಪನ್ನವಾಯಿತೆಂಬುದನ್ನು, ಕಃ = ಯಾರು, ವೇದ = ತಿಳಿಯಬಲ್ಲರು.

ಪದ್ಯಾನುವಾದ—

ಯಾವನವನೀ ವಿವಿಧ ಸೃಷ್ಟಿಯಂ ಸೃಜಿಸಿದಂ? |
ಯಾವುದರಿನೀ ವಿವಿಧ ಸೃಷ್ಟಿಯಂ ಸೃಜಿಸಿದಂ? |
ದೇವತೆಗಳುಂ ಜಗತ್ ವಿಸೃಷ್ಟಿಯನಂತರಂ |
ಆವಿರ್ಭವಿಸಿದರೆನೆ ತಿಳಿಯರದನೇನುವುಂ? |
ಯಾವನಿದನೆಲ್ಲಮಂ ನಿಜವಾಗಿ ತಿಳಿದವಂ? |
ಯಾವ ನೀ ಜಗದೊಳಿದನನಿತುಮಂ ಪೇಳುವಂ? || ೬ ||

ಸರಳಾನುವಾದ—ಸೃಷ್ಟಿಯನ್ನು ಯಾರು ಏತರಿಂದ ಮಾಡಿದರು ಎಂಬುದು ಯಾರಿಗೂ ತಿಳಿಯದು. ಸೃಷ್ಟಿಗೊಳಗಾದವರೇ ಆಥ ದೇವತೆಗಳಿಗೂ ಈ ವಿಷಯವು ತಿಳಿದಿಲ್ಲವೆಂದಾಯಿತು.

ವಿವೇಚನೆ—ಸೃಷ್ಟಿ ವಿಷಯವನ್ನು ಬುದ್ಧಿಯಿಂದ ಪರ್ಯಾಲೋಚಿಸಿ ಹೀಗೆ ಹೀಗೆ ಆಗಿರಬೇಕೆಂದು ವಿವೇಚಿಸಿ ಹೇಳಬಹುದೇ ಹೊರತು ಅದನ್ನು ಸ್ವತಃ ನೋಡಿ ತಿಳಿದವರು ಯಾರೂ ಇಲ್ಲ. ಆದುದರಿಂದಲೇ ನಾಲ್ಕನೆಯ ಮಂತ್ರದಲ್ಲಿ "ನಿರವಿಂದನ್ ಹೃದಿ ಪ್ರತೀಷ್ಯಾ ಕವಯೋ ಮನೀಷಾ" ಎಂದರೆ ಮಂತ್ರದ್ರಷ್ಟಾರರಾದ ಕವಿಗಳು ಬುದ್ಧಿಯಿಂದ ವಿವೇಚಿಸಿ, ಹೃದಯದಲ್ಲಿ ಅನುಭವ ಮಾಡಿಕೊಂಡರೆಂದು ಹೇಳಿದೆ-"ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರೀಯುಗಂ ಪುರಾ''. ದೇವತೆಗಳು ಹುಟ್ಟುವುದಕ್ಕಿಂತ

ಮೂರು ಯುಗಗಳು ಮೊದಲೇ ವನಸ್ಪತಿಗಳು ಸೃಷ್ಟಿಯಾದವೆಂದು ಹೇಳಿರುವುದರಿಂದ ಅವರಿಗೂ ಸೃಷ್ಟಿ ವಿಷಯವು ತಿಳಿಯದೆಂದಾಯಿತು. ನೂಲು, ಹುಳುವಿನ ಅಂಶವಾಗಿರುವಂತೆ ಜಗತ್ತು ಈಶ್ವರಾಂಶವೆಂದು ಕೆಲವರು ಹೇಳಿದರೆ, ಕೆಲವರು ಅದು ಅಂಶವಲ್ಲ, ಅಂಶದಂತೆ ತೋರುವುದೆಂಬರು. ಒಟ್ಟಿನಲ್ಲಿ ಜಗತ್ತನ್ನು ಯಾರು ಏತರಿಂದ ಸೃಷ್ಟಿಸಿದರು ಎಂದು ಯಾರೂ ನಿಶ್ಚಯವಾಗಿ ಹೇಳಲಾರರೆಂದು ಭಾವ.

## ನಾಸದೀಯ ಸೂಕ್ತದ ಏಳನೆಯ ಮಂತ್ರ

ಇಯಂ ವಿಸೃಷ್ಟಿರ್ಯತ ಆ ಬಭೂವ ಯದಿ ವಾ ದಧೇ[1] ಯದಿ ವಾ ನ || ಯೋ ಅಸ್ಯಾಧ್ಯಕ್ಷಃ[2] ಪರಮೇ ವ್ಯೋಮನ್[3] ಸೋ ಅಂಗ ವೇದ ಯದಿ ವಾ ನ ವೇದ || ೭ ||

ಪದ್ಯಾನುವಾದ

ಸೃಷ್ಟಿ ವೈವಿಧ್ಯಮಂ ಸೃಜಿಸಿತಾಂ ಪೊರೆಯುವಂ |
ಸೃಷ್ಟಿಸಿದ ಕರ್ತನಲ್ಲದೊಡೆ ಪೊರೆಯರಾರುಂ |
ಸೃಷ್ಟಿಯಧ್ಯಕ್ಷ ಪರಮವ್ಯೋಮನರಿದಿಹಂ |
ಸೃಷ್ಟಿ ವಿಷಯಮನಲ್ಲದೊಡೆ ತಿಳಿಯರಾರುಂ || ೭ ||

---

ಸಾಯಣ ಭಾಷ್ಯಾಧಾರ

1. ಇಯಂ ವಿಸೃಷ್ಟಿಃ-ವಿವಿಧಾ ಗಿರಿ ನದೀ ಸಮುದ್ರಾದಿ ರೂಪೇಣ ವಿಚಿತ್ರಾಸೃಷ್ಟಿಃ, ಆಬಭೂವ-ಆಜಾತಾ, ಯದಿ ವಾ ದಧೇ-ಧಾರಯತಿ. 2. ಯೋ ಅಸ್ಯಾಧ್ಯಕ್ಷಃ-ಅಸ್ಯ ಭೂತಭೌತಿಕಾತ್ಮಕಸ್ಯ ಜಗತೋ ಯೋ ಅಧ್ಯಕ್ಷ ಈಶ್ವರಃ. 3. ಪರಮೇ ವ್ಯೋಮನ್-ಪರಮ ಉತ್ಕೃಷ್ಟೇ ಸತ್ಯ ಭೂತೇ ವ್ಯೋಮನ್-ಆಕಾಶವತ್ ನಿರ್ಮಲೇ ಸ್ವಪ್ರಕಾಶೇ.

ಸರಳಾನುವಾದ—ಯಾರು ಈ ವಿವಿಧ ಸೃಷ್ಟಿಯನ್ನು ಸೃಷ್ಟಿಸಿದನೋ ಆ ಪರಮಾತ್ಮನೇ ಅದನ್ನು ಕಾಪಾಡುತ್ತಾನೆ ಹಾಗಿಲ್ಲವಾದರೆ ಅದನ್ನು ಮತ್ತಾರೂ ಕಾಪಾಡಲಾರರು. ಪರಮ ಚಿದಾಕಾಶದಲ್ಲಿ ಪ್ರಕಾಶಿಸುವ ಪರಮಾತ್ಮನಿಗೇ ಸೃಷ್ಟಿ ವಿಷಯವು ಗೊತ್ತು. ಅವನಿಗೂ ಅದು ಗೊತ್ತಿಲ್ಲ ವೇನೋ ಎಂದರೆ ಯಾರಿಗೂ ಅದು ತಿಳಿಯದೆಂದು ಭಾವ.

ವಿವೇಚನೆ—ಪರಮಾತ್ಮನನ್ನು ಈ ಮಂತ್ರದಲ್ಲಿ ಪರಮವ್ಯೋಮ ವೆಂದು ಕರೆಯಲಾಗಿದೆ. 'ಪರಮೇವ್ಯೋಮನ್' ಎಂದರೆ ಶ್ರೇಷ್ಠವಾದ ಆಕಾಶ ಅರ್ಥಾತ್ ಚಿದಾಕಾಶದಲ್ಲಿ ಪ್ರಕಾಶಿಸುವವನುಎಂದು ಅರ್ಥ. ವ್ಯೋಮಪದವು 'ಅವತಿ' ಧಾತುವಿನಿಂದ ನಿಷ್ಪನ್ನವಾಗುವುದು. ತೃಪ್ತಿಯನ್ನುಂಟುಮಾಡು ಎಂಬ ಅರ್ಥವು ಈ ಧಾತುವಿಗಿದೆಯಾಗಿ ಪರಮಾತ್ಮನು ಸಂತೃಪ್ತಿಯುಳ್ಳ ವನು ಎಂದರೆ ಪೂರ್ಣಕಾಮನು ಎಂದಾಗುವುದು. ಈ ಧಾತುವಿಗೆ ಗತ್ಯರ್ಥವೂ ಜ್ಞಾನಾರ್ಥವೂ ಇರುವುದರಿಂದ, 'ಸರ್ವವ್ಯಾಪೀಸರ್ವಜ್ಞ'— ಎಂದೂ ಅರ್ಥವಾಗುವುದು.

ಸೃಷ್ಟಿಪೂರ್ವ ಕಾಲವೆಂದರೆ, ಸದಸನ್ ರವಿ ಶಶಿ ದಿನ ನಿಶಿಗಳಿಲ್ಲ ಕಾಲವದು; ಇಹಪರ ಕಲ್ಪನೆಗಳಾಗಲೀ ಅಳಿವುಉಳಿವುಗಳ ಕಲ್ಪನೆಗಳಾಗಲೀ ಇಲ್ಲದ ಕಾಲವದು. ಆಗ ಪರಶಿವಬ್ರಹ್ಮದಿಂದ ಎಲ್ಲವನ್ನೂ ಆವರಿಸುವ ತಮದಂತೆ ನಿಬಿಡವಾಗಿ, ಜಲದಂತೆ ಎಲ್ಲವನ್ನೂ ವ್ಯಾಪಿಸುವ ಅವ್ಯಾಕೃತ ಪ್ರಕೃತಿಯ ರೂಪದಲ್ಲಿ ಶಕ್ತಿಯು ಹೊರಹೊಮ್ಮಿರಲಿಲ್ಲ. ಆದರೆ, ಪರಮಾತ್ಮ ನೊಳಗೆ ಅಭೇದವಾಗಿದ್ದ ಚೈತನ್ಯದಿಂದ ಪರಮಾತ್ಮ ತತ್ತ್ವವು ಸ್ಫುರಿಸುತ್ತಿದ್ದಿ ತೆಂಬುದು ಮೊದಲೆರಡು ಋಕ್ಕುಗಳ ಅಭಿಪ್ರಾಯ. ತಮದಂತೆ ಆವರಿಸು ವುದೂ ಸಲಿಲದಂತೆ ನಿಬಿಡವಾಗಿ ವ್ಯಾಪಿಸುವುದೂ ಆದ ಅವ್ಯಾಕೃತ ಪ್ರಕೃತಿ ರೂಪದಿಂದ ಶಕ್ತಿಯು ಪರಶಿವಬ್ರಹ್ಮದಿಂದ ಹೊರಹೊಮ್ಮಿ ಅದನ್ನು ಆಚ್ಛಾದಿ ಸುವುದರಿಂದ ಸೃಷ್ಟಿಯು ಪ್ರಾರಂಭವಾಗುವುದು. ಇಚ್ಛಾಜ್ಞಾನ ಕ್ರಿಯಾ ಶಕ್ತಿಗಳಿಂದ ಶಿವನು ವಿಶಿಷ್ಟನಾಗುವುದರಿಂದ ಜಗತ್ತು ಸೃಷ್ಟಿಯಾಗುವುದು. ಈ ಜಗತ್ತಿನೊಳಗೆ ಅನುಪ್ರವೇಶ ಮಾಡಿದ ಪರಮಾತ್ಮನು ಮಣಿಗಳ ಸೂತ್ರದಂತೆ ದೃಶ್ಯ ಜಗತ್ತನ್ನು ಪೋಣಿಸಿ ಹಿಡಿದು

ಪೋಷಿಸುವನೆಂಬ ಭಾವ ಇದರಲ್ಲಿದೆ. ಈ ವಿಷಯಗಳು ಮೂರು ನಾಲ್ಕನೆಯ ಋಕ್ಕುಗಳಲ್ಲಿವೆ. ಐದನೆಯ ಋಕ್ಕಿನಲ್ಲಿ ಭೋಕ್ತೃಭೋಗ್ಯ ರೂಪದಲ್ಲಿ ಜಗತ್ತು ವಿಸ್ತಾರವಾಗಿ ಹೊರಹೊಮ್ಮುವುದನ್ನು ಹೇಳಿದೆ. ಸೃಷ್ಟಿ ಪ್ರಾರಂಭವಾದಮೇಲೆ ಹುಟ್ಟಿದ ದೇವತೆಗಳಿಗೂ ಸೃಷ್ಟಿವಿಷಯವು ತಿಳಿಯದು. ಸೃಷ್ಟಿಕರ್ತನಿಗೆ ಗೊತ್ತಿರಬಹುದು ಅಥವಾ ಅವನಿಗೂ ತಿಳಿಯದೇನೋ ಎಂದು ಹೇಳುವ ಆರೇಳನೆಯ ಋಕ್ಕುಗಳು, ಸೃಷ್ಟಿ ವಿಷಯವು ಎಷ್ಟು ದುರ್ಗ್ರಾಹ್ಯವೆಂಬುದನ್ನು ಮನವರಿಕೆ ಮಾಡುತ್ತವೆ. ಇಂತಹ ದುರ್ಗ್ರಾಹ್ಯ ವಿಷಯವನ್ನು ಬುದ್ಧಿಯಿಂದ ವಿವೇಚಿಸಿ, ಅಂತರಾಳದಲ್ಲಿ ಅನುಭವಿಸಿ ಸುಗ್ರಾಹ್ಯವಾಗಿ ಮಾಡಲು ಪ್ರಯತ್ನಿಸಿದ ಮಹರ್ಷಿಗೆ ನತಿಸಿ ನುತಿಸುವುದೊಂದೆ ನಮಗೆ ಸಾಧ್ಯವಾಗಿರುವುದು. ತಿಲಕರ ಗೀತಾರಹಸ್ಯದ ಮಾತುಗಳಿಂದ ಈ ವಿಷಯವನ್ನು ಮುಕ್ತಾಯಗೊಳಿಸಬಹುದು :

"ನಮಗೆ ಕಾಣಿಸುವಂಥ ಮತ್ತು ಸಾಮಾನ್ಯವಾಗಿ ನಮ್ಮ ಇಂದ್ರಿಯಗಳಿಗೆಲ್ಲ ಗೋಚರಿಸುವಂಥ ವಿನಾಶಿಯೂ, ವಿಕಾರಿಯೂ ಆದ ನಾಮರೂಪಾತ್ಮಕ ವಿವಿಧ ನೋಟಗಳ ಜಾಲದಲ್ಲಿಯೇ ನಾವು ತೊಡಕಿಕೊಂಡಿರದೆ, ಅದರಾಚೆಗೆ ಒಂದೇ ಒಂದು ಮತ್ತು ಅಮೃತವಾದಂತ ಯಾವುದೊಂದು ತತ್ತ್ವವು ಇದೆ—ಎಂಬುದನ್ನು ಜ್ಞಾನದೃಷ್ಟಿಯಿಂದ ಗುರುತಿಸುವುದೇ ಎಲ್ಲ ವೇದಾಂತಶಾಸ್ತ್ರದ ಸಾರವು. ಮೇಲ್ಕಾಣಿಸಿದ ಸೂಕ್ತಿಯನ್ನು ರಚಿಸಿದ ಋಷಿಯ ಬುದ್ಧಿಯು ಈ ಸಾರವತ್ತಾದ ಬೆಣ್ಣೆಯ ಮುದ್ದೆಯನ್ನು ಒಂದೇ ಸಲಕ್ಕೆ ಜಪ್ಪನೆ ಹಾರಿ ಹಿಡಿದಿರುವುದನ್ನು ಲಕ್ಷಿಸಿದರೆ ಅವನ ಅಂತರ್ಜ್ಞಾನವು ಎಷ್ಟು ತೀವ್ರವಾಗಿತ್ತೆಂಬುದು ತಾನೇ ವ್ಯಕ್ತವಾಗುವುದು ಇದ್ದದ್ದೆಲ್ಲ ಈ ಸರ್ವ ಪದಾರ್ಥಗಳಿಂದ ವಿಲಕ್ಷಣವಿದ್ದು, ಅದೊಂದೇ ಒಂದು, ಆರಂಭಕ್ಕೆ ತನ್ನ ಅಪರಂಪಾರ ಶಕ್ತಿಯಿಂದ ಸ್ಫುರಿಸುತ್ತಿತ್ತು. ಇದರ ಜತೆಗೆ ಅಥವಾ ಅದನ್ನು ಆಚ್ಛಾದಿಸುವುದಕ್ಕೆ ಬೇರೆ ಏನೂ ಇದ್ದಿಲ್ಲವೆಂದು ಈ ಸೂಕ್ತದ ಋಷಿಯು ನಿರ್ಭಯವಾಗಿ ಹೇಳುತ್ತಾನೆ."

# ಈಶಾವಾಸ್ಯೋಪನಿಷತ್ತಿನಲ್ಲಿ ಅರಿವು ಆಚಾರಗಳ ಸಮನ್ವಯ

ಈಶಾವಾಸ್ಯೋಪನಿಷತ್ತು ಅತ್ಯಂತ ಹಳೆಯ ಉಪನಿಷತ್ತುಗಳಲ್ಲಿ ಒಂದು. ಛಾಂದೋಗ್ಯ ಮತ್ತು ಬೃಹದಾರಣ್ಯಕ ಉಪನಿಷತ್ತುಗಳನ್ನು ಬಿಟ್ಟರೆ ಈಶಾವಾಸ್ಯವೇ ಎಲ್ಲಕ್ಕೂ ಹಳೆಯ ಉಪನಿಷತ್ತು. ಈಶಾವಾಸ್ಯವನ್ನೇ ಎಲ್ಲಕ್ಕೂ ಮೊದಲನೆಯ ಉಪನಿಷತ್ತಾಗಿ ಎಣಿಸುವುದು ಅದರ ಪ್ರಾಮುಖ್ಯತೆಯ ದೃಷ್ಟಿಯಿಂದಲಿರಬೇಕು. ಏಕೆಂದರೆ ಹದಿನೆಂಟೇ ಮಂತ್ರಗಳುಳ್ಳ ಈ ಚಿಕ್ಕ ಉಪನಿಷತ್ತಿನಲ್ಲಿ ಅರಿಯಬೇಕಾದುದನ್ನು ಮನಮುಟ್ಟುವಂತೆ ಉಪದೇಶಿಸಿದೆಯಲ್ಲದೆ ಆ ಅರಿವಿಗೆ ತಕ್ಕ ಆಚರಣೆಯಿರಬೇಕಾದುದನ್ನು ಒತ್ತಿ ಒತ್ತಿ ಹೇಳಿದೆ.

ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಸ್ವಿದ್ಧನಂ ॥ ೧ ॥

ಅರ್ಥ—ಜಗತ್ಯಾಂ = ಜಗತ್ತಿನಲ್ಲಿ, ಜಗತ್ = ಚರ (ಮತ್ತು ಅಚರ) ವಾದುದು, ಯತ್ಕಿಂಚ = ಯಾವುದಿದೆಯೋ, ಇದಂ ಸರ್ವಂ = ಇದೆಲ್ಲವೂ, ಈಶಾವಾಸ್ಯಂ = ಈಶನಿಂದ ವಾಸಿಸಲ್ಪಟ್ಟಿದೆ, ತೇನ ತ್ಯಕ್ತೇನ = ಪರಮಾತ್ಮನಿತ್ತ ಪ್ರಸಾದವೆಂದು, ಭುಂಜೀಥಾಃ = ಭೋಗಿಸು, ಕಸ್ಯಸ್ವಿತ್ = ಯಾವನೊಬ್ಬನದಾದರೂ, ಧನಂ = ದ್ರವ್ಯವನ್ನು, ಮಾಗೃಧಃ = ಆಶಿಸಬೇಡ.

ಪದ್ಯಾನುವಾದ —

ಈಶನಿಂ ವಾಸ್ಯಮಿದು ಧರಣಿ ಸಚರಾಚರಂ।
ಆಶಿಸದೆ ಪರಧನವ ಭುಜಿಸೀಶನಿತ್ತುದಂ ॥ ೧ ॥

ಈಶಾವಾಸ್ಯೋಪನಿಷತ್ತಿನ ಮೊದಲನೆಯ ಮಂತ್ರದಲ್ಲಿಯೇ ಮುಮುಕ್ಷುವಿಗೆ ಆಗಬೇಕಾದ ಅರಿವೂ, ಆ ಅರಿವಿಗೆ ತಕ್ಕ ಆಚರಣೆಯೂ ಸೂಚಿಸಲ್ಪಟ್ಟಿವೆ. ಈ ಉಪನಿಷತ್ತು ಉಪದೇಶಿಸುವ ಮುಖ್ಯ ಅಂಶವು ಇದೇ ಆಗಿದೆ. ಜಗತ್ತೆಲ್ಲವನ್ನು ವ್ಯಾಪಿಸಿರುವವನು ಈಶ ಎಂದರೆ ಒಡೆಯ

ಎಂಬುದೇ ಅರಿವು. ತನಗೆ ದೊರೆತ ಒಡೆಯನ ಸ್ವತ್ತನ್ನು ಒಡೆಯನಿಗರ್ಪಿಸಿ, ಅದನ್ನು ಅವನ ಪ್ರಸಾದರೂಪವಾಗಿ ಅನುಭವಿಸಬೇಕೇ ಹೊರತು ಇತರರ ಭಾಗಕ್ಕೆ ಬಂದ ಸ್ವತ್ತಿಗೆ ಆಸೆಪಡಬಾರದೆಂಬುದೇ ಅರಿವಿಗೆ ತಕ್ಕ ಆಚಾರ. ಶರಣರ ನಿಲುವಾದರೂ ಇದೇ :

ಮಣಿಗಳ ಸೂತ್ರದಂತೆ, ತ್ರಿಸಯನ ನೀನಿಪ್ಪೆಯಯ್ಯಾ ಎಣಿಸುವಡ ತನು ಭಿನ್ನ ಆತ್ಮನೊಬ್ಬನೇ. ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವೃತಿರ್ಪೆನಯ್ಯಾ ರಾಮನಾಥಾ.

ಮಣಿಗಳನ್ನು ಪೋಣಿಸಿರುವ ಸೂತ್ರವೊಂದು ಇಲ್ಲದಿದ್ದರೆ ಅತ್ತ ಇತ್ತ ಚದುರುವುವು ಮಣಿಗಳು ; ಇವುಗಳನ್ನೆಲ್ಲ ಒಂದುಗೂಡಿಸುವ ಸೂತ್ರದಂತೆ ಪ್ರಾಣಿಗಳೆಲ್ಲವನ್ನೂ ಒಂದುಗೂಡಿಸುವುದು ಅವುಗಳೊಳಗೆ ಅಂತರ್ಯಾಮಿ ಯಾಗಿರುವ ಪರಮಾತ್ಮ. ಈ ಮಂತ್ರದ ಶಾಂಕರಭಾಷ್ಯದಲ್ಲಿ ಹೇಳಿದಂತೆ— ಎಲ್ಲವನ್ನೂ ಆಳುವುದರಿಂದ ಈಶನೆಂದು ಪರಮೇಶ್ವರನಿಗೆ ಹೆಸರು ; ಅವನು ಎಲ್ಲರ ಪರಮಾತ್ಮನು ; ಏಕೆಂದರೆ ಆತನೇ ಪ್ರತ್ಯಗಾತ್ಮರೂಪದಿಂದ ಎಲ್ಲಾ ಪ್ರಾಣಿಗಳಿಗೂ ಆತ್ಮನಾಗಿ ಎಲ್ಲವನ್ನೂ ಆಳುವನು.*

ತೈತ್ತರೀಯೋಪನಿಷತ್ತಿನಲ್ಲಿ ಹೇಳಿದಂತೆ 'ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್' ಎಂದರೆ ಪರಮಾತ್ಮನು ಜಗತ್ತನ್ನು ಸೃಷ್ಟಿಸಿ ಅದರಲ್ಲಿ ಅನು ಪ್ರವೇಶಮಾಡಿದನು :

ಶಿವ ತನ್ನ ವಿನೋದಕ್ಕೆ ರಚಿಸಿದನು ಅನಂತ ವಿಶ್ವವನು ; ರಚಿಸಿದವನು ವಿಶ್ವಕ್ಕೆ ಹೊರಗಾಗಿರ್ದನೆ? ಇಲ್ಲ ವಿಶ್ವಮಯನಾದವನು.

ಪುರುಷಸೂಕ್ತದಲ್ಲಿ ಹೇಳಿದಂತೆ 'ಪಾದೋಽಸ್ಯ ವಿಶ್ವಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎಂದರೆ ಪರಮಾತ್ಮನು ತನ್ನ ಕಿಂಚಿದಂಶದಿಂದ

---

ಶಾಂಕರ ಭಾಷ್ಯ

*ಈಶಾ ಈಷ್ಟೇ ಇತಿ ಈಟ್ ; ತೇನ ಈಶಾ ; ಈಶಿತಾ ಪರಮೇಶ್ವರಃ ಪರಮಾತ್ಮಾ ಸರ್ವಸ್ಯ ; ಸಹಿ ಸರ್ವಮೀಷ್ಟೇ ಸರ್ವ ಜಂತೂ ನಾಮಾತ್ಮಾ ಸನ್ ಪ್ರತ್ಯಗಾತ್ಮತಯಾ.

ಚರಾಚರ ಪ್ರಪಂಚವಾಗಿ ಬಹ್ವಂಶದಿಂದ ಸ್ವಪ್ರಕಾಶದಲ್ಲಿ ತಾನೇ ತಾನಾಗಿರು ತ್ತಾನೆ. ಕಿಂಚಿದಂಶದಿಂದಲೇ ವಿಶ್ವವೆಲ್ಲವನ್ನೂ ಆವರಿಸಿರುವನಾಗಿ, ಪ್ರಪಂಚ ದಲ್ಲಿರುವ ಪ್ರಾಣಿಗಳೆಲ್ಲವುಗಳ ಅಂಗಗಳೆಲ್ಲ ಅವನವೆ ಆಗಿವೆ. ಆದುದರಿಂದಲೇ ಅವನ ಅಂಗಗಳು ಸಹಸ್ರವೆನ್ನುವುದುಂಟು.

*ಸಾವಿರದ ತಲೆಯುವನು ಸಾವಿರದ ಕಣ್ಣವನು |
ಸಾವಿರದ ಪದದವನು ಪರಮಪುರುಷೋನ್ನತನು |
ಆವರಿಸಿ ಮೂಜಗವ ಬಿಡದೆಯುದನೆಲ್ಲವನು |
ಭಾವಿಸೆ ದಶಾಂಗುಲಮತಿಕ್ರಮಿಸಿ ನಿಂದಿಹನು |

ಎಂಬುದು ಪುರುಷಸೂಕ್ತ.

ವನವೆಲ್ಲ ನೀವೆ ವನದೊಳಗಣ ದೇವತರುವೆಲ್ಲ ನೀವೆ, ತರುವಿನೊಳ ಗಾಡುವ ಖಗಮೃಗವೆಲ್ಲ ನೀವೆ, ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖವ ತೋರ.

ಎಂದು ಹಂಬಲಿಸಿದಳು ಅಕ್ಕಮಹದೇವಿ. ಅಣ್ಣನ ಉದ್ಗಾರವಾದರೂ ಇದೇ:

ಎತ್ತೆತ್ತ ನೋಡಿದೊಡತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಹು ನೀನೇ ದೇವಾ, ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ವಿಶ್ವತೋ ಪಾದ ನೀನೇ ದೇವಾ ಕೂಡಲ ಸಂಗಮದೇವಾ.

ಎನ್ನುವ ವಚನದಂತೆ ಪರಮಾತ್ಮನು ಎಲ್ಲೆಲ್ಲಿಯೂ ವ್ಯಾಪಿಸಿರುವನು. ಭಗವದ್ಗೀತೆಯಲ್ಲಿ 'ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ' ಎಂದು ಹೇಳಿದೆ. 'ಅಂಶೋ ನಾನಾವ್ಯಪದೇಶಾತ್' ಎಂಬುದು ಬ್ರಹ್ಮಸೂತ್ರ. ಹೀಗೆ ಜಗತ್ತಿನಲ್ಲಿರುವುದೆಲ್ಲವೂ ಜಗದ್ವ್ಯಾಪಕ

---

*ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ |
ಸ ಭೂಮಿಂ ವಿಶ್ವತೋ ವೃತ್ವಾತ್ಯ ತಿಷ್ಠದ್ದಶಾಂಗುಲಂ ||

ಎಂಬುದೇ ಅರಿವು. ತನಗೆ ದೊರೆತ ಒಡೆಯನ ಸ್ವತ್ತನ್ನು ಒಡೆಯನಿಗರ್ಪಿಸಿ, ಅದನ್ನು ಅವನ ಪ್ರಸಾದರೂಪವಾಗಿ ಅನುಭವಿಸಬೇಕೇ ಹೊರತು ಇತರರ ಭಾಗಕ್ಕೆ ಬಂದ ಸ್ವತ್ತಿಗೆ ಆಸೆಪಡಬಾರದೆಂಬುದೇ ಅರಿವಿಗೆ ತಕ್ಕ ಆಚಾರ. ಶರಣರ ನಿಲುವಾದರೂ ಇದೇ :

ಮಣಿಗಳ ಸೂತ್ರದಂತೆ, ತ್ರಿಸಯನ ನೀನಿಪ್ಪೆಯಯ್ಯಾ ಎಣಿಸುವಡ ತನು ಭಿನ್ನ ಆತ್ಮನೊಬ್ಬನೇ. ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವುತಿರ್ಪೆನಯ್ಯಾ ರಾಮನಾಥಾ.

ಮಣಿಗಳನ್ನು ಪೋಣಿಸಿರುವ ಸೂತ್ರವೊಂದು ಇಲ್ಲದಿದ್ದರೆ ಅತ್ತ ಇತ್ತ ಚದುರುವುವು ಮಣಿಗಳು ; ಇವುಗಳನ್ನೆಲ್ಲ ಒಂದುಗೂಡಿಸುವ ಸೂತ್ರದಂತೆ ಪ್ರಾಣಿಗಳೆಲ್ಲವನ್ನೂ ಒಂದುಗೂಡಿಸುವುದು ಅವುಗಳೊಳಗೆ ಅಂತರ್ಯಾಮಿ ಯಾಗಿರುವ ಪರಮಾತ್ಮ. ಈ ಮಂತ್ರದ ಶಾಂಕರಭಾಷ್ಯದಲ್ಲಿ ಹೇಳಿದಂತೆ— ಎಲ್ಲವನ್ನೂ ಆಳುವುದರಿಂದ ಈಶನೆಂದು ಪರಮೇಶ್ವರನಿಗೆ ಹೆಸರು ; ಅವನು ಎಲ್ಲರ ಪರಮಾತ್ಮನು ; ಏಕೆಂದರೆ ಆತನೇ ಪ್ರತ್ಯಗಾತ್ಮರೂಪದಿಂದ ಎಲ್ಲಾ ಪ್ರಾಣಿಗಳಿಗೂ ಆತ್ಮನಾಗಿ ಎಲ್ಲವನ್ನೂ ಆಳುವನು.*

ತೈತ್ತರೀಯೋಪನಿಷತ್ತಿನಲ್ಲಿ ಹೇಳಿದಂತೆ 'ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್' ಎಂದರೆ ಪರಮಾತ್ಮನು ಜಗತ್ತನ್ನು ಸೃಷ್ಟಿಸಿ ಅದರಲ್ಲಿ ಅನು ಪ್ರವೇಶಮಾಡಿದನು :

ಶಿವ ತನ್ನ ವಿನೋದಕ್ಕೆ ರಚಿಸಿದನು ಅನಂತ ವಿಶ್ವವನು ; ರಚಿಸಿದವನು ವಿಶ್ವಕ್ಕೆ ಹೊರಗಾಗಿರ್ದನೆ? ಇಲ್ಲ ವಿಶ್ವಮಯನಾದನು.

ಪುರುಷಸೂಕ್ತದಲ್ಲಿ ಹೇಳಿದಂತೆ 'ಪಾದೋಽಸ್ಯ ವಿಶ್ವಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎಂದರೆ ಪರಮಾತ್ಮನು ತನ್ನ ಕಿಂಚಿದಂಶದಿಂದ

---

ಶಾಂಕರ ಭಾಷ್ಯ

*ಈಶಾ ಈಷ್ಟೇ ಇತಿ ಈಟ್ ; ತೇನ ಈಶಾ ; ಈಶಿತಾ ಪರಮೇಶ್ವರಃ ಪರಮಾತ್ಮಾ ಸರ್ವಸ್ಯ ; ಸಹಿ ಸರ್ವಮೀಷ್ಟೇ ಸರ್ವ ಜಂತೂ ನಾಮಾತ್ಮಾ ಸನ್ ಪ್ರತ್ಯಗಾತ್ಮತಯಾ.

ಚರಾಚರ ಪ್ರಪಂಚವಾಗಿ ಬಹ್ವಂಶದಿಂದ ಸ್ವಪ್ರಕಾಶದಲ್ಲಿ ತಾನೇ ತಾನಾಗಿರು ತ್ತಾನೆ. ಕಿಂಚಿದಂಶದಿಂದಲೇ ವಿಶ್ವವೆಲ್ಲವನ್ನೂ ಆವರಿಸಿರುವನಾಗಿ, ಪ್ರಪಂಚ ದಲ್ಲಿರುವ ಪ್ರಾಣಿಗಳೆಲ್ಲವುಗಳ ಅಂಗಗಳೆಲ್ಲ ಅವನವೆ ಆಗಿವೆ. ಆದುದರಿಂದಲೇ ಅವನ ಅಂಗಗಳು ಸಹಸ್ರವೆನ್ನುವುದುಂಟು.

*ಸಾವಿರದ ತಲೆಯುವನು ಸಾವಿರದ ಕಣ್ಣವನು।
ಸಾವಿರದ ಪದದವನು ಪರಮಪುರುಷೋನ್ನತನು।
ಆವರಿಸಿ ಮೂಜಗವ ಬಿಡದೆಯುದನೆಲ್ಲವನು।
ಭಾವಿಸೆ ದಶಾಂಗುಲವನುತಿಕ್ರಮಿಸಿ ನಿಂದಿಹನು।

ಎಂಬುದು ಪುರುಷಸೂಕ್ತ.

ವನವೆಲ್ಲ ನೀವೆ ವನದೊಳಗಣ ದೇವತರುವೆಲ್ಲ ನೀವೆ, ತರುವಿನೊಳ ಗಾಡುವ ಖಗಮೃಗವೆಲ್ಲ ನೀವೆ, ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖವ ತೋರ.

ಎಂದು ಹಂಬಲಿಸಿದಳು ಅಕ್ಕಮಹದೇವಿ. ಅಣ್ಣನ ಉದ್ಗಾರವಾದರೂ ಇದೇ:

ಎತ್ತೆತ್ತ ನೋಡಿದೊಡತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಹು ನೀನೇ ದೇವಾ, ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ವಿಶ್ವತೋ ಪಾದ ನೀನೇ ದೇವಾ ಕೂಡಲ ಸಂಗಮದೇವಾ.

ಎನ್ನುವ ವಚನದಂತೆ ಪರಮಾತ್ಮನು ಎಲ್ಲೆಲ್ಲಿಯೂ ವ್ಯಾಪಿಸಿರುವನು. ಭಗವದ್ಗೀತೆಯಲ್ಲಿ 'ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ' ಎಂದು ಹೇಳಿದೆ. 'ಅಂಶೋ ನಾನಾವ್ಯಪದೇಶಾತ್' ಎಂಬುದು ಬ್ರಹ್ಮಸೂತ್ರ. ಹೀಗೆ ಜಗತ್ತಿನಲ್ಲಿರುವುದೆಲ್ಲವೂ ಜಗದ್ವ್ಯಾಪಕ

---

*ಸಹಸ್ರ ಶಿರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರಪಾತ್।
ಸ ಭೂಮಿಂ ವಿಶ್ವತೋ ವೃತ್ವಾತ್ಯ ತಿಷ್ಠದ್ದಶಾಂಗುಲಂ ॥

ನಾದ ಪರಮಾತ್ಮನ ಅಂಶವೇ ಆದ ಬಳಿಕ ಈ ಅಂಶವೆಲ್ಲವೂ ಅಂಶಿಯಾವ ಈಶನ ಒಡತನಕ್ಕೊಳಪಟ್ಟಿದೇ.

ನೆಲದೀಪವೊಡೆಯನು, ಜಲತಂಪಿನೊಡೆಯನು, ಹಿರಿಯ ಪೆಂಪಿನೊಡೆಯನು. ಅಗ್ನಿ ಉಷ್ಣದೊಡೆಯನು, ಚಂದ್ರಕಾಂತದೊಡೆಯನು, ಸೂರ್ಯಕಾಂತದೊಡೆಯನು .. ಜಗತ್ಪ್ರಭು ಸೊಡ್ಡಳಾ.

ಹೀಗೆ ಎಲ್ಲವೂ ಪರಮಾತ್ಮನವೇ ಎಂದರಿದಮೇಲೆ ತನ್ನದೆಂದು ಬಚ್ಚಿಟ್ಟುಕೊಳ್ಳುವುದೇನು ? ಪರರದೆಂದು ಆಶಿಸಡುವುದೇನು ? ಆದುದರಿಂದ 'ಈಶಾವಾಸ್ಯಮಿದಂ ಸರ್ವಂ' ಎಂಬ ಅರಿವುಂಟಾಗಲು 'ತೇನ ತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಸ್ವಿದ್ಧನಂ' ಎಂದರೆ 'ಆಶಿಸದೆ ಪರಧನವ ಭುಜಿಸಿಲೇಶನಿತ್ತುದಂ' ಎಂಬುದೇ ಆ ಅರಿವಿಗೆ ತಕ್ಕ ಆಚಾರ. ಇದೇ ಈಶಾವಾಸ್ಯೋಪನಿಷತ್ತಿನ ಉಪದೇಶ. ಇದೇ ಅದರ ಮೊದಲನೆಯ ಮಂತ್ರದಿಂದಲೇ ಸಾರುವ ಸಂದೇಶ.

'ಮಾಗೃಧಃ ಕಸ್ಯಸ್ವಿದ್ಧನಂ' ಎಂಬಂತೆ ಆಶಿಸದೆ ಪರಧನವ ಏಕೆ ಇರಬೇಕು ? - ಕವಿ ರವೀಂದ್ರರು ಫಿಲಾಸಾಫಿಕಲ್ ಕಾಂಗ್ರೆಸ್ಸಿನ ಮೊದಲನೆಯ ಅಧಿವೇಶನದ ಅಧ್ಯಕ್ಷಭಾಷಣದಲ್ಲಿ ಹೇಳಿದಂತೆ*–'ಈಶಾವಾಸ್ಯೋಪನಿಷತ್ತಿನ ಮೊದಲನೆಯ ಮಂತ್ರದಲ್ಲಿಯೇ 'ಮಾಗೃಧಃ' ಎಂದರೆ ಆಸೆ ಮಾಡಬಾರದೆಂಬ ವಿಧಿಯಿದೆ. ಏಕೆಂದರೆ ಆಸೆಯು ಅಂತ್ಯವಿಲ್ಲದುದು ; ಅದು ಜೀವನದ ಸ್ಫುರಣ ಲಯಗತಿಯನ್ನು ಅದುಮಿಬಿಡುತ್ತದೆ. ಈ ಸ್ಫುರಣ ಲಯಗತಿಯಲ್ಲಿಯೇ ಸೃಷ್ಟಿಯಿದೆ. ವಿದ್ಯಾಂಚಾ ವಿದ್ಯಾಂಚ ಎಂದರೆ ಕ್ಷರಾಕ್ಷರಗಳು ಸಂಧಿಸುವ ಮಧ್ಯಸ್ಥಿತಿಯೇ ಈ ಸ್ಫುರಣ ಲಯಗತಿಯು. ಜೀವನದ ಸ್ಫುರಣ

---

*In the very first verse of Isa, the injunction is given to us 'Magridhaha'—Thou not shall not covet . . The greed having no limit smothers the rhythm. Creation is rhythm, the rhythm which is the border on which Vidyancha avidyancha–the infinite and the finite meet.

ಲಯಗತಿಯು ಅನಿರ್ಬಂಧವಾಗಿ ಹರಿಯಲು ಸಿದ್ಧಾಂತಮಣಿಯಲ್ಲಿ ಹೇಳಿದಂತೆ—

ಪರಸ್ತ್ರೀ ಸಂಗ ನಿರ್ಮುಕ್ತಃ ಪರದ್ರವ್ಯ ಪರಾಙ್ಮುಖಃ |
ಶಿವಾರ್ಥಕಾರ್ಯ ಸಂಪನ್ನಃ ಶಿವಾಗಮ ಪರಾಯಣಃ ||

ಆಗಬೇಕು. ಅಣ್ಣನವರ ಆದೇಶವಿದು :

ತೊರೆಯಮೀವ ಅಣ್ಣಗಳಿರಾ, ತೊರೆಯಮೀವ ಸ್ವಾಮಿಗಳಿರಾ,
ತೊರೆಯಿಂಭೋ ತೊರೆಯಿಂಭೋ
ಪರನಾರಿಸಂಗವ ತೊರೆಯಿಂಭೋ
ಪರಧನದಾಮಿಷವ ತೊರೆಯಿಂಭೋ
ಇವ ತೊರೆಯದೇ ಹೋಗಿ ತೊರೆಯ ಮಿಂದರೆ
ಬರುದೊರೆ ಹೋಹುದು ಕೂಡಲ ಸಂಗಮದೇವಾ

ತೇನತ್ಯಕ್ತೇನ ಭುಂಜೀಥಾಃ ಎಂದರೆ ಆಸೆಯುಳಿದವನು ಸನ್ಯಾಸಿಯಾಗಬೇಕೆ? ಶ್ರೀ ಶಂಕರಾಚಾರ್ಯರ ಭಾಷ್ಯದಂತೆ ಪುತ್ರಾದ್ಯೇಷಣತ್ರಯ ಸಂನ್ಯಾಸೆ ಏವಾಧಿಕಾರೋ ನ ಕರ್ಮಸು ; ತೇನತ್ಯಕ್ತೇನ ತ್ಯಾಗೇನ ಇತ್ಯರ್ಥಃ. ಪತ್ನಿ ಪುತ್ರ ವಿತ್ತಗಳನ್ನು ತೊರೆದು ಸನ್ಯಾಸಿಯಾಗಬೇಕು.—ಇದೇ 'ತೇನ ತ್ಯಕ್ತೇನ ಭುಂಜೀಥಾಃ' ಎಂಬುದರ ಅರ್ಥ ಎಂದು ಶ್ರೀ ಶಂಕರಾಚಾರ್ಯರ ಅಭಿಪ್ರಾಯ. ಆದರೆ ಭಗವದ್ಗೀತೆಯಲ್ಲಿ 'ಕರ್ಮಸನ್ಯಾಸಾತ್ ಕರ್ಮಯೋಗೋವಿಶಿಷ್ಯತೇ' ಎಂದರೆ ಕರ್ಮಸನ್ಯಾಸಕ್ಕಿಂತ ಕರ್ಮಯೋಗವೇ ಶ್ರೇಷ್ಠವೆಂದು ಹೇಳಿದೆ. ಆದುದರಿಂದ ಶ್ರೀ ಶಂಕರರ ನಿಲುವನ್ನು ಶರಣರು ಒಪ್ಪರು. 'ತೇನ ಈಶೇನ ತ್ಯಕ್ತೇನ ದತ್ತೇನ ಭುಂಜೀಥಾಃ' ಎಂಬ ಮಾಧ್ವಭಾಷ್ಯದ ನಿಲುವು ಶರಣರ ನಿಲುವಿಗೆ ಹೆಚ್ಚು ಹೊಂದುತ್ತದೆ. ಶಿವನು ಕೊಟ್ಟಷ್ಟನ್ನು ಶಿವನ ಪ್ರಸಾದರೂಪವಾಗಿ ಅನುಭವಿಸಬೇಕೆಂಬುವೇ ಈ ಪದಗಳ ಸರಿಯಾದ ಅರ್ಥ. ನಾವು ಅನುಭವಿಸುವುದು ಪಂಚೇಂದ್ರಿಯಗಳ ಮೂಲಕ ; ಮನಸ್ಸೆಂಬ ಇಂದ್ರಿಯದಲ್ಲಿ ಈ ಅನುಭವದಿಂದಾಗುವ ತೃಪ್ತಿಯನ್ನು ಪಡೆವೆವು. ಇವುಗಳಲ್ಲೆಲ್ಲ ಇರುವ ಈಶನ ಚೈತನ್ಯಕ್ಕೆ ಆಚಾರಾದಿ ಲಿಂಗಗಳೆಂದು ಹೆಸರು. ಆಯಾ ಲಿಂಗಗಳಿಗೆ ಆಯಾ

ಇಂದ್ರಿಯಗಳ ಸುಖವನ್ನು ಅರ್ಪಿಸಬೇಕು ; ಆಗ ಅದು ಆಯಾಲಿಂಗಗಳ ಪ್ರಸಾದವಾಗುವುದು :

ನಾಸಿಕವಾಚಾರ (ಲಿಂಗ), ಜಿಹ್ವೆ ಗುರು (ಲಿಂಗ), ಕಂಗಳು (ಶಿವ) ಲಿಂಗ, ತ್ವಕ್ಕು ಜಂಗಮಲಿಂಗ, ಕರ್ಣಪ್ರಸಾದ (ಲಿಂಗ), ಭಾವ ಮಹಾಲಿಂಗ ಕೂಡಲ ಸಂಗಯ್ಯ ನಿಮ್ಮ ಶರಣ ಇಂತು ಸರ್ವಾಂಗ ಲಿಂಗ ಪ್ರಸಾದಿ.

ಶಬ್ದಸ್ಪರ್ಶ ರೂಪು ರಸ ಗಂಧ ಪಂಚೇಂದ್ರಿಯಂಗಳು ಮೊದಲಾಗಿ ಸಕ ದವು ಲಿಂಗದತ್ತತ್ತಲೆ, ಕೂಡಲ ಚೆನ್ನಸಂಗಯ್ಯ, ಲಿಂಗನಿವಾಸಿ ಶರಣಂಗೆ.

ನೆಲ ತಳವಾರನಾದಡೆ ಕಳ್ಳಂಗೆ ಹೋಗಲೆಡೆಯುಂಟೆ? ಸರ್ವಾಂಗ ಲಿಂಗಿಗೆ ಅನರ್ಪಿತ ಉಂಟೇ ನಿಷ್ಕಳಂಕ ಮಲ್ಲಿಕಾರ್ಜುನಾ.

ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನದಲ್ಲ, ಅದು ಜಗಕ್ಕಿಕ್ಕಿದ ವಿಧಿ. ನಿನ್ನೊಡವೆ ಎಂಬುದು ಜ್ಞಾನರತ್ನ.

ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ಗಾಳಿ ನಿಮ್ಮ ದಾನ, ಕಾಯ ನಿಮ್ಮ ದಾನ, ಜೀವ ನಿಮ್ಮ ದಾನ, ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ, ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ.

ನಾವು ಪಡೆದಿರುವುದೆಲ್ಲ ಪರಮಾತ್ಮನಿಂದಲೇ ಬಂದುದೆಂಬುದನರಿದು, ಅದನ್ನು ಅನುಭವಿಸುವ ಇಂದ್ರಿಯಗಳಲ್ಲಿರುವ ಆಚಾರಾದಿಲಿಂಗಗಳೆಂಬ ಶಿವ ಚೈತನ್ಯಕ್ಕೆ ಅರ್ಪಿಸಿ. ಅರ್ಪಿತವಾದವುಗಳನ್ನು ಶಿವಪ್ರಸಾದವೆಂದರಿದು ಭೋಗಿ ಸಿದರೆ 'ತೇನ ತ್ಯಕ್ತೇನ ಭುಂಜೀಥಾಃ' ಎಂಬುದರ ಆದೇಶವನ್ನು ಪಾಲಿಸಿ ದಂತಾಗುವುದು. ಒಟ್ಟಿನಲ್ಲಿ 'ಈಶನಿಂ ವಾಸ್ಯಮಿದು ಧರಣಿ ಸಚರಾಚರಂ' ಎಂಬುದನರಿದು ಆ ಅರಿವಿನಂತೆ ಆಚರಿಸಲು 'ಆಶಿಸದೆ ಪರಧನವ ಭುಜಿಸಿಕ ನಿತ್ತುದಂ' ಎಂಬುದು ಈಶದ ಮೊದಲನೆಯ ಮಂತ್ರದ ಆದೇಶ:

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ
ಏವಂ ತ್ವಯಿ ನಾನ್ಯಥೇ ತೋऽಸ್ತಿ ನ ಕರ್ಮ ಲಿಪ್ಯತೇ ನರೇ ॥೨॥

ಪದ್ಯಾನುವಾದ —

ಕರ್ಮವಂಗೈದೆ ಕಳೆ ಶತವರ್ಷವಂ; ನರಗೆ।
ಕರ್ಮಲೇಪನವಿಲ್ಲ; ಬಿಡಲಿದನು ಪೆರತಿಲ್ಲ ॥

ಅರ್ಥ—ಇಹ = ಈ ಲೋಕದಲ್ಲಿಯೇ, ಕರ್ಮಾಣಿ = ಕರ್ಮಗಳನ್ನು, ಕುರ್ವನ್ನೇವ = ಮಾಡುತ್ತಲೇ, ಶತಂ ಸಮಾಃ = ನೂರು ವರ್ಷಗಳು, ಜಿಜೀವಿಷೇತ್ = ಜೀವಿಸಲಿಚ್ಛಿಸಬೇಕು, ಏವಂತ್ವಯಿನರೇ = ಈ ರೀತಿಯಿರುವ ಮನುಷ್ಯನಾದ ನಿನ್ನಲ್ಲಿ, ಕರ್ಮನಲಿಪ್ಯತೇ = ಕರ್ಮವು ಅಂಟುವುದಿಲ್ಲ, ಇತಃ = ಇದಲ್ಲದೆ, ಅನ್ಯಥಾ = ಬೇರೆ ಉಪಾಯವು, ನಾಸ್ತಿ = ಇರುವುದಿಲ್ಲ.

ಪ್ರಪಂಚದಲ್ಲಿರುವುದರಲ್ಲೆಲ್ಲಾ ಪರಶಿವನು ವ್ಯಾಪಿಸಿರುವನಾದುದರಿಂದ ಆಶಾಪಾಶ ವಿಮುಕ್ತನಾಗಿ, ಶಿವನಿಂದ ಪ್ರಾಪ್ತವಾದುದನ್ನು ಶಿವನಿಗರ್ಪಿಸಿ ಅದನ್ನು ಅವನ ಪ್ರಸಾದರೂಪವಾಗಿ ಅನುಭವಿಸಬೇಕು ಎಂದು ಈಶಾವಾಸ್ಯದ ಉಪಕ್ರಮದಲ್ಲಿಯೇ ಹೇಳಿರುವುದಷ್ಟೆ. ಇರುವುದೆಲ್ಲ ಶಿವನಿಂದ ವ್ಯಾಪ್ತವಾದುದೇ ಎಂಬ ಅರಿವಿಗೆ ಅನುಸಾರವಾದ ಕರ್ಮಾಚರಣೆಯಿದು. ಕರ್ಮಲೇಪನವಾಗದಂತೆ ಕರ್ಮವನ್ನು ಮಾಡುತ್ತ ನೂರು ವರ್ಷ ಬದುಕಬೇಕೇ ಹೊರತು ಕರ್ಮತ್ಯಾಗಮಾಡಬಾರದೆಂದು ಎರಡನೆಯ ಮಂತ್ರವಿದರಲ್ಲಿ ಹೇಳಿ ಒಂದನೇ ಮಂತ್ರದಲ್ಲಿ ಹೇಳಿರುವುದರ ಮುನ್ನಡೆಯನ್ನು ಉಪನಿಷತ್ತು ಸೂಚಿಸುತ್ತದೆ. ಜ್ಞಾನಕ್ಕೆ ಅನುಸಾರವಾದ ಕರ್ಮಾಚರಣೆಯು ಎರಡನೆಯ ಮಂತ್ರದಲ್ಲಿಯೂ ಹೇಳಿರುವುದರಲ್ಲಿ 'ಅಭ್ಯಾಸ' ಎಂದರೆ ಪುನರುಕ್ತಿಯಿದೆ. 'ಮಾಗೃಧಃ' ಎಂದು ಮೊದಲನೆಯ ಮಂತ್ರದಲ್ಲಿ ಹೇಳಿರುವುದರಿಂದ ನಿರಪೇಕ್ಷೆಯಿಂದ ಕರ್ಮ ಮಾಡಬೇಕಾಗುವುದು. ಕರ್ಮಲೇಪನವಾಗದಂತೆ ಕರ್ಮ ಮಾಡಬೇಕೆಂಬುದೇ ಎರಡನೆಯ ಮಂತ್ರವಿದರ ಆದೇಶ. ಈ ಮಂತ್ರವೇ ಭಗವದ್ಗೀತೆಯಲ್ಲಿ ಹೇಳಿರುವ ನಿಷ್ಕಾಮ ಕರ್ಮಯೋಗಕ್ಕೆ ಹಿನ್ನೆಲೆಯೆಂಬುದು ತಜ್ಞರ ಮತ.

ಕರ್ಮವನ್ನು ಮಾಡದಿದ್ದರೆ ಕರ್ಮಬಂಧನವಾಗುವುದಿಲ್ಲ ಆದರೆ

ಬಂಧನಕ್ಕೆ ಕಾರಣವಾದುದು ಕರ್ಮವಲ್ಲ. ಕರ್ಮವನ್ನು ಮಾಡಲು ಪ್ರೋತ್ಸಾಹಿಸುವ ರಾಗದ್ವೇಷಗಳು. ಹೆಣ್ಣು ಹೊನ್ನು ಮಣ್ಣುಗಳನ್ನು ಪಡೆಯಬೇಕೆಂಬ ಆಶೆಯೇ ಬಂಧನಕ್ಕೆ ಕಾರಣವೇ ಹೊರತು ಹೆಣ್ಣು ಹೊನ್ನು ಮಣ್ಣುಗಳಲ್ಲ.

ಹೊನ್ನು ಮಾಯೆಯೆಂಬರು; ಹೆಣ್ಣು ಮಾಯೆಯೆಂಬರು; ಮಣ್ಣು ಮಾಯೆಯೆಂಬರು. ಹೊನ್ನು ಮಾಯೆಯಲ್ಲ; ಹೆಣ್ಣು ಮಾಯೆಯಲ್ಲ; ಮಣ್ಣು ಮಾಯೆಯಲ್ಲ; ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ

ಎನ್ನುವರು ಅಲ್ಲಮಪ್ರಭುದೇವರು. ಆದುದರಿಂದ ಹೆಣ್ಣು, ಮಣ್ಣು, ಹೊನ್ನನ್ನು ತೊರೆಯಬೇಕಾಗಿಲ್ಲ. ಅವುಗಳ ಮೇಲಿನ ಆಸೆಯನ್ನು ತೊರೆದರೆ ರಾಗ ದ್ವೇಷಗಳಿಗೆ ಎಡೆಯಿಲ್ಲ. ಆವ ಪದಾರ್ಥವಾದರೂ ತಾನಾಗಿ ಬಂದುದ ಲಿಂಗಕ್ಕೆ ಅರ್ಪಿಸಿ ತತ್ಪ್ರಸಾದವೆಂದು ಅನುಭವಿಸುವುದೇ ಆಚಾರ. ದುರಾಶೆ ಯಿಂದ ಅದನ್ನು ಪಡೆಯಲೆತ್ನಿಸುವುದೇ ಅನಾಚಾರ. ಫಲಾಪೇಕ್ಷೆಯಿಲ್ಲದೆ ಮನುಷ್ಯನು ತಾನು ಮಾಡಬೇಕಾದ ಕರ್ತವ್ಯವನ್ನು ಮಾಡಿದರೆ ರಾಗದ್ವೇಷ ಗಳಿಗೆ ಅವನ ಮನಸ್ಸಿನಲ್ಲಿ ಎಡೆಯಿಲ್ಲ. ಮನುಷ್ಯನಿಗೆ ತಾನು ಮಾಡಬೇಕಾದ ಕರ್ಮವನ್ನು ಮಾಡುವುದರಲ್ಲಿ ಅಧಿಕಾರವು ಇದೆಯೇ ಹೊರತು ಅದರ ಫಲದ ಮೇಲೆ ಅಧಿಕಾರವಿಲ್ಲವಾಗಿ ಕರ್ಮಫಲಕ್ಕೆ ಹೇತುವಾಗದೆ ಕರ್ಮ ಮಾಡ ಬೇಕೇ ಹೊರತು ಕರ್ಮಮಾಡುವುದನ್ನು ನಿಲ್ಲಿಸಬಾರದೆಂಬುದು ಗೀತೆಯ ಆದೇಶ*. ಹೀಗೆ ಕರ್ಮ ಮಾಡಿದರೂ ಫಲಾಸೆಯನ್ನು ತೊರೆದು ಕರ್ಮ ಬಂಧನವಾಗದಿರುವಂತೆ ಮಾಡುವ ಜಾಣ್ಮೆಗೆ ಯೋಗವೆಂದು ಹೆಸರು. ಶರಣರು ಅದನ್ನು ಕಾಯಕವೆನ್ನುವರು.

ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ; ನಿಮ್ಮ ಶರಣರಿ ಗಿತ್ತಲ್ಲದೆ ಮತ್ತೊಂದನರಿಯೆ, ಕೂಡಲ ಸಂಗಮದೇವಾ.

---

*ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ |
ಮಾ ಕರ್ಮಫಲ ಹೇತು ರ್ಭೂರ್ಮಾತೇ ಸಂಗೋಽಸ್ತ್ವಕರ್ಮಣಿ ||

ಎಂದು ಫಲಾಶಾ ರಹಿತರಾಗಿ ಮಾಡುವುದೇ ಯೋಗ, ಅದೇ ಕಾಯಕ. 'ಸಕಲ ಜೀವಾವಳಿಗೆ ಲೇಸನೇ ಬಯಸುವರು ನಮ್ಮ ಶರಣರು' ಆರಂಬವ ಮಾಡಬಹುದು, ವ್ಯವಹಾರ ಮಾಡಬಹುದು, ಪರಸೇವೆಯನ್ನು ಮಾಡಬಹುದು; ಆದರೆ ಹಾಗೆ ಮಾಡುವಾಗ—

ನಾನು ಆರಂಬವ ಮಾಡುವೆನಯ್ಯಾ ಗುರುಪೂಜೆಗೆಂದು
ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು
ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು ||

ನಾನಾ ಕಾರ್ಯಗಳನ್ನು ಫಲಾಸೆಯಿಲ್ಲದೆ ಮಾಡುವರು. 'ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕೆ ಅರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ' ಎಂಬುದು ಶರಣರ ನಿಲುವು. 'ಮಾ ತೇ ಸಂಗೋಽಸ್ತ್ವಕರ್ಮಣಿ' ಎಂದರೆ ಕರ್ಮ ಮಾಡದಿರುವುದಕ್ಕೆ ಮನಸೋಲಬಾರದೆಂಬ ಗೀತೆಯ ನಿಲುವು ಶರಣರಿಗೂ ಮಾನ್ಯವೆ—

ಕೃಷಿಯ ಮಾಡಿ ಉಣ್ಣದೆ, ಹಸಿವು ಹರಿವ ಪರಿ ಇನ್ನೆಂತೋ? ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೋ? ಬೇಯದ ಅಶನವನುಂಬ ಠಾವಾವುದು?

'ಯದ್ಯತ್ ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ' ಎಂದರೆ ಯಾವ ಕಾರ್ಯ ಮಾಡಿದರೂ ಅದನ್ನು ಪರಮಾತ್ಮನ ಸೇವೆಯೇ ಎಂಬ ದೃಷ್ಟಿಯಿಂದ ಮಾಡಿದರೆ ಪರಧನ, ಪರಸ್ತ್ರೀ, ಪರಕ್ಷೇತ್ರಗಳಿಗೆ ಆಶೆಪಡುವುದಿಲ್ಲವಾಗಿ ಕರ್ಮವು ಬಂಧನವಾಗದು. 'ತೇನ ತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಸ್ವಿದ್ಧನಂ' ಎಂದರೆ ಪರರ ಸ್ವತ್ತಿಗೆ ಆಶೆಪಡದೆ ಎಲ್ಲವನ್ನೂ ಈಶಪ್ರಸಾದವೆಂದು ಅನುಭವಿಸುವುದೇ ಕರ್ಮಬಂಧನವಾಗದ ರೀತಿಯೆಂಬುದು ಈಶಾವಾಸ್ಯದ ಮೊದಲನೆಯ ಮಂತ್ರದ ಆದೇಶ. ಹೀಗೆ ಬಂಧನವಾಗದಂತೆ ಕರ್ಮ ಮಾಡುತ್ತ ನೂರು ವರ್ಷಗಳು ಬದುಕಿರಲು ಇಚ್ಛಿಸಬೇಕೆಂಬುದು ಈಶಾವಾಸ್ಯದ ಎರಡನೆಯ ಮಂತ್ರದ ಆದೇಶ. ಕರ್ಮ ಮಾಡದಿರುವವನು ಸಂನ್ಯಾಸಿಯಲ್ಲ, ಫಲದಾಸೆಯಿಲ್ಲದೆ ಕರ್ಮ ಮಾಡುವ

ವನು ಸಂನ್ಯಾಸಿ ಎಂದು ಹೇಳುವ ಗೀತೆಯ ನಿಲುವಿಗೆ* ಈಶಾವಾಸ್ಯದ ಎರಡನೆಯ ಮಂತ್ರದ ತಳಹದಿಯಿದೆ.

ಅಸುರ್ಯಾನಾಮ ತೇ ಲೋಕಾ ಅಂಧೇನ ತಮಸಾವೃತಾಃ ।
ತಾಗ್ಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇಕೇ ಚಾತ್ಮಹನೋ
ಜನಾಃ ॥ ೩ ॥

ಅರ್ಥ—ಅಸುರ್ಯಾನಾಮ ತೇಲೋಕಾಃ = ಅಸೂರ್ಯವೆಂಬ ಆ ಲೋಕಗಳು, ಅಂಧೇನ ತಮಸಾವೃತಾಃ = ಕುರುಡು ಕತ್ತಲೆಯಿಂದ ತುಂಬಿವೆ. ಯೇಕೇ ಚಾತ್ಮಹನೋಜನಾಃ ತೇ = ಯಾರು ಆತ್ಮಹತ್ಯೆ ಮಾಡಿಕೊಳ್ಳುವರೋ ಆ ಜನರು, ಪ್ರೇತ್ಯ = ಸತ್ತ ಬಳಿಕ, ತಾನ್ = ಆ ಲೋಕಗಳನ್ನು, ಅಭಿಗಚ್ಛಂತಿ = ಸೇರುತ್ತಾರೆ.

ಪದ್ಯಾನುವಾದ—

ಅಸುರಲೋಕದೊಳ್ ಕಗ್ಗತ್ತಲೆಯು ಕವಿದಿಹುದು ।
ಅಸುರಳಿಯುಲಾತ್ಮಘ್ನರವರಲ್ಲಿ ಗೈತಹರು ॥ ೩ ॥

ಆತ್ಮಘ್ನರು ನರಕವನ್ನು ಸೇರುವರೆಂಬುದನ್ನು ಈ ಮಂತ್ರದಲ್ಲಿ ಹೇಳಿದೆ—'ಆತ್ಮಾನಂ ಘ್ನಂತೀತಿ ಆತ್ಮಹನಃ, ಕೇ ತೇ? ಜನಾಃ ಅವಿದ್ವಾಂಸಃ'. ಎಂದರೆ ಆತ್ಮನನ್ನು ಕೊಲ್ಲುವವರು ಆತ್ಮಹನರು, ಅವರು ಯಾರು ಎಂದರೆ ಅವರು ಅವಿದ್ವಾಂಸರು—ಎಂದು ಶ್ರೀ ಶಂಕರಾಚಾರ್ಯರ ಅಭಿಪ್ರಾಯ. ಶ್ರೀ ನಾರಾಯಣರ ಪ್ರಕಾಶಿಕೆಯಲ್ಲಿ 'ಬ್ರಹ್ಮಜ್ಞಾನ ವಿಹೀನಾಃ ಕಾಮ್ಯ ನಿಷಿದ್ಧಕರ್ಮಾದಿ ನಿಷ್ಠಾಃ' ಎಂದು ಅರ್ಥ ಮಾಡಿದ್ದಾರೆ. ಈ ರೀತಿ ಅರ್ಥ ಮಾಡುವುದರಲ್ಲಿ ದೋಷವಿಲ್ಲ. ಆದರೆ ಆತ್ಮಘ್ನ

---

*ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥
(ಭ. ಗೀ. ೬-೧)

ನೆಂದರೆ ನರನಿಗೆ ನಿಯಮಿತವಾದ ನೂರುವರ್ಷಗಳವರೆಗೆ ನಿಷ್ಕಾಮಕರ್ಮವನ್ನು ಮಾಡುತ್ತ ಜೀವಿಸಲಿಚ್ಛಿಸಬೇಕೆಂಬ ಎರಡನೆಯ ಮಂತ್ರದಲ್ಲಿ ಹೇಳಿರುವ ವಿಧಿಗೆ ವಿರುದ್ಧವಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವವನು, ನರಕಕ್ಕೆ ಹೋಗುವನೆಂದು ಈ ಮೂರನೆಯ ಮಂತ್ರದಲ್ಲಿ ಹೇಳಿದೆಯೆನ್ನಬಹುದು. ವೇದಗಳ ಕಾಲದಲ್ಲಿಯೇ ಜೈನರು ವೇದವಿರುದ್ಧರಾದ ಎದುರಾಳಿಗಳಾಗಿದ್ದರು. ಅತಿ ಕಠಿಣವಾದ ಸಂನ್ಯಾಸವನ್ನು ಜೈನಮುನಿಗಳು ಅನುಸರಿಸುತ್ತಿದ್ದರು. ಈಶಾವಾಸ್ಯದ ಎರಡನೆಯ ಮಂತ್ರದಲ್ಲಿ ಇದಕ್ಕೆ ವಿರುದ್ಧವಾಗಿ ಯಾವಜ್ಜೀವವೂ ನಿಷ್ಕಾಮಕರ್ಮವನ್ನು ಮಾಡಬೇಕೆಂದು ಹೇಳಿದೆ. ಜೈನರು 'ಸಲ್ಲೇಖನ' ವ್ರತದಿಂದ ಆತ್ಮಹತ್ಯೆ ಮಾಡಿಕೊಳ್ಳಬಹುದೆಂಬ ನಿಲುವನ್ನು ಈಶದ ಮೂರನೆಯ ಮಂತ್ರವಿದು ಖಂಡಿಸುವುದೆಂಬುದು ಹೆಚ್ಚು ಸಂಭವನೀಯ.

ಸಲ್ಲೇಖನ ವ್ರತದಿಂದ ಆತ್ಮಹತ್ಯೆ ಮಾಡಿಕೊಳ್ಳುವುದರಲ್ಲಿ ಮಹತ್ವವಿರುವುದೆಂಬ ಭ್ರಾಂತಿ ಹಿಂದುಗಳಲ್ಲಿಯೂ ಹಬ್ಬಿ ಸರಯೂ ಮೊದಲಾದ ನದಿಗಳಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡ ಅರಸರ ಉಲ್ಲೇಖವುಂಟು. ಸಹಗಮನವೂ ಈ ತರಹದ ಭ್ರಾಂತಿಯೇ. ಬಸವಪೂರ್ವಲಿಂಗಧಾರಿ ಧರ್ಮದಲ್ಲಿ ಲಿಂಗ ಹೋದರೆ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಇದ್ದ ಪದ್ಧತಿಯನ್ನು ಶರಣರು ಖಂಡಿಸಿದ್ದಾರೆ.

**ಅಂಗದೊಳಗೆ ಮಹಾಲಿಂಗವಿರಲು, ಕಯ್ಯಲಿಂಗವು ಬಿದ್ದಿತೆಂದು ನೆಲದೊಳಗೆ ಅಂಗವ ಹೂಣುವರು ಭಂಗಪಡುವರಲಾ ಗುಹೇಶ್ವರಾ ಲಿಂಗವನರಿಯದ ಜಡರುಗಳು.**

**ಗುರು ಸತ್ತರೆ ಸಮಾಧಿಯ ಹೊಗಲೊಲ್ಲರಯ್ಯ! ಲಿಂಗ ಬಿದ್ದರೆ ಸಮಾಧಿಯ ಹೊಕ್ಕೆವೆಂಬರು. ಗುರುವಿನಿಂದ ಲಿಂಗವಾಯಿತ್ತೋ? ಲಿಂಗದಿಂದ ಗುರುವಾದನೋ? ..**

**ಲಿಂಗ ಬಿದ್ದಿತ್ತು ಲಿಂಗ ಬಿದ್ದಿತ್ತು ಎಂದು ನೋಯಲೇಕೆ? ಬಿದ್ದ ಲಿಂಗವನೆತ್ತಿಕೊಂಡು ಷೋಡಶೋಪಚಾರವಂ ಮಾಡುವುದು. ಹೀಗಲ್ಲದೆ ಶಸ್ತ್ರಸಮಾಧಿ ದುರ್ಮರಣವ ಮಾಡಿಕೊಂಡಿಹೆನೆಂಬ ಪಂಚಮಹಾಪಾತಕಂಗೆ ನಾಯಕ ನರಕ.**

ಕೆರೆಯನ್ನು ಕಟ್ಟುವಾಗ ಗರ್ಭಿಣಿ ಸ್ತ್ರೀಯೊಬ್ಬಳು ಹೂಳಿಸಿಕೊಳ್ಳುವುದು, ರಾಜನು ಸತ್ತರೆ ಅವನ ಗರುಡರೆಲ್ಲ ಸಾಯುವುದು, ಜೋಹರ್ ಪದ್ಧತಿ ಮೊದಲಾದ ಆತ್ಮಹತ್ಯ ಪ್ರಕರಣಗಳು ಈ ಮಂತ್ರದಿಂದ ಖಂಡಿಸಲ್ಪಟ್ಟಂತಹ ಆತ್ಮಹನನ ಕಾರ್ಯಗಳೇ.

**ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್ ।**
**ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ ತಸ್ಮಿನ್ನಪೋ ಮಾತರಿಶ್ವಾದಧಾತಿ ॥ ೪ ॥**

ಅರ್ಥ—ತತ್ = ಅದು, ಅನೇಜತ್ = ಚಲಿಸದು, ಏಕಂ = ಅದ್ವೈತವಾದದ್ದು, ಮನಸಃ = ಮನಸ್ಸಿಗಿಂತಲೂ, ಜವೀಯಃ = ಹೆಚ್ಚು ವೇಗವುಳ್ಳದ್ದು, ಏನತ್ = ಆ ಪರಮಾತ್ಮನನ್ನು ದೇವಾಃ = ಇಂದ್ರಿಯಗಳು, ನ ಆಪ್ನುವನ್ = ತಿಳಿಯಲಾರವು, ಪೂರ್ವಂ = ಆದಿಕಾಲದಿಂದಲೂ, ಅರ್ಷತ್ = ಪರಮಾತ್ಮ ತತ್ತ್ವವು ಸರ್ವಜ್ಞವಾಗಿದೆ. ತಿಷ್ಠತ್ = ಅದು ಒಂದು ಕಡೆಯಲ್ಲಿ ನಿಂತುಕೊಂಡೇ, ಧಾವತಃ = ಓಡತಕ್ಕ, ಅನ್ಯಾನ್ = ಬೇರೆಯದನ್ನು, ಅತ್ಯೇತಿ = ದಾಟುತ್ತದೆ, ತಸ್ಮಿನ್ = ಅದು ಇರುವುದರಿಂದ, ಮಾತರಿಶ್ವ = ವಾಯುವು, ಅಪಃ = ಜಲವನ್ನು, ದಧಾತಿ = ಧರಿಸುತ್ತದೆ.§

**ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥ ೫ ॥**

---

ಶಾಂಕರಭಾಷ್ಯ—

*ದ್ಯೋತನಾತ್ ದೇವಾಃ ಚಕ್ಷುರಾದೀಂದ್ರಿಯಾಣಿ, ತಸ್ಮಿನ್-ಆತ್ಮತತ್ವೇ ಸತಿ .... ಮಾತರಿಶ್ವಾ ವಾಯುಃ, ದಧಾತಿಧಾರಯತಿ ॥ ೪ ॥

ವೇದಾಂತ ದೇಶಿಕಭಾಷ್ಯ—

§ತಸ್ಮಿನ್ನವಸ್ಥಿತಃ ಅಪ್ ಪ್ರತಿಬಂಧಾನುಗುಣ ಕಾರಿಶ್ಯಾದಿರಹಿತೋಽಪಿ ವಾಯುರಪೋ ಬಿಭರ್ತಿ.

ಅರ್ಥ—ತತ್ = ಅದು, ಏಜತಿ = ಚಲಿಸುವುದು, ತತ್ = ಅದು, ನೈಜತಿ = ಚಲಿಸದು, ತತ್ = ಅದು, ದೂರೇ = ದೂರದಲ್ಲಿರುವುದು, ತತ್ ಉ ಅಂತಿಕೇ = ಅದೇ ಸಮೀಪದಲ್ಲಿರುವುದು, ತತ್ = ಅದು, ಅಂತರಸ್ಯ ಸರ್ವಸ್ಯ = ಎಲ್ಲದರ ಒಳಗಿದೆ, ತತ್ ಉ ಸರ್ವಸ್ಯ ಅಸ್ಯ ಬಾಹ್ಯತಃ = ಅದೇ ಈ ಎಲ್ಲದರ ಹೊರಗೆ ಇದೆ.

ಪದ್ಯಾನುವಾದ—

ಆದು ಜವದೆ ಮೀರ್ದೊಡಂ ಮನಮನಚಲಮೇಕಂ |
ಮೊದಲಿನದು ಸರ್ವಜ್ಞಮದಿಂದ್ರಿಯಾತೀತಂ ||

ಅದು ನಿಂತೆ ದಾಟುವುದು, ಧಾವಿಪುವವನ್ಯವುಂ |
ಅದರಿಂದ ಮಾತರಿಶ್ವಂ ಧರಿಪುದಪ್ಪುವಂ || ೪ ||

ಅದು ಚಲಿಪುದು ಚಲಿಸದು ಸಮೀಪಮದು ದೂರಂ |
ಅದಿದೆಲ್ಲದರ ಹೊರಗುಮದಿದೆಲ್ಲದರೊಳಗುಂ || ೫ ||

ಈಶಾವಾಸ್ಯದ ಮೊದಲನೆಯ ಮಂತ್ರದ ಮೊದಲನೆಯ ಪಾದದಲ್ಲಿಯೇ ಸರ್ವವನ್ನು ವ್ಯಾಪಿಸಿರುವ ಒಡೆಯ ಪರಮಾತ್ಮನ ಅರಿವನ್ನುಂಟುಮಾಡಿ ಆ ಅರಿವಿಗೆ ತಕ್ಕಂತೆ ಹೇಗೆ ಬಾಳಬೇಕೆಂಬುದನ್ನು ಮೂರನೆಯ ಮಂತ್ರದ ವರೆಗೆ ಹೇಳಿವೆಯಷ್ಟೆ. ನಾಲ್ಕು ಐದನೆಯ ಮಂತ್ರಗಳಲ್ಲಿ ಪರಮಾತ್ಮನ ಅರಿವನ್ನು ಹೆಚ್ಚಾಗಿ ಮಾಡಿ ಆ ಪರಮಾತ್ಮಾನುದರ್ಶನವನ್ನು ಪಡೆದವನ ನಡತೆಯನ್ನು ಆರು ಏಳನೆಯ ಮಂತ್ರಗಳಲ್ಲಿ ವಿವರಿಸಿ ಅರಿವು ಆಚರಣೆಗಳ ಸಮನ್ವಯವನ್ನು ಈ ನಾಲ್ಕು ಮಂತ್ರಗಳಲ್ಲಿ ಈ ಉಪನಿಷತ್ತು ಮಾಡಿರುವುದು ಕಂಡುಬರುತ್ತದೆ.

ಪರಮಾತ್ಮನನ್ನು ವರ್ಣಿಸುವುದು ಅಸಾಧ್ಯ ಏಕೆಂದರೆ ಅದು—

ಆಡಬಾರದ ಬಯಲು, ನೋಡಬಾರದ ಬಯಲು, ನುಡಿಯಬಾರದ ಬಯಲು, ಹಿಡಿಯಬಾರದ ಬಯಲು.

ಕಣ್ಣಿಗೆ ಕಾಂಬಡೆ ರೂಪಲ್ಲ, ಕೈಗೆ ಸಿಲುಕುವಡೆ ದೇಹಿಯಲ್ಲ, ನಡೆದಡೆ ಗಮನಿಯಲ್ಲ, ನುಡಿದಡೆ ವಾಚಾಳನಲ್ಲ, ನಿಂದಿಸಿದವಗೆ ಹಗೆಯಲ್ಲ, ಹೊಗಳಿದವಗೆ ಕೆಳೆಯಲ್ಲ, ಗುಹೇಶ್ವರನ ನಿಲುವು ಮಾತಿನಮಾಲೆಗೆ ಸಿಲುಕುವುದೆ?

ಮಾತಿನ ಮಾಲೆಗೆ ಸಿಗದ ಪರತತ್ತ್ವದ ಅನುಭವವನ್ನು ಪಡೆದವರು ಸಹಾ ಹೀಗೆ ಹೇಳುವರು :

ಕಂಡೆನಲ್ಲ ಕರುಳಿಲ್ಲದ ಕಲಿಯು! ಕಂಡೆನಲ್ಲ ಯೌವನವಿಲ್ಲದ ನೇಹವ! ಕಂಡೆನಲ್ಲ ಕೈದಿಲ್ಲದ ಕಲಿತನವ! ಕಂಡೆನಲ್ಲ ಕುಸುಮವಿಲ್ಲದ ಗಂಧವ!

ಹೀಗೆ ವಚನವಾಙ್ಮಯದಲ್ಲಿಯೂ ಉಪನಿಷತ್ತಿನಲ್ಲಿಯೂ ವಿರೋಧಾಭಾಸದ ಮಾತುಗಳಲ್ಲಿ ಆಡಲು ಬಾರದುದನ್ನು ಆಡಿ ತೋರಿಸಿರುವರು.

ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನು ಪಶ್ಯತಿ |
ಸರ್ವ ಭೂತೇಷು ಚಾತ್ಮಾನಂ ತತೋ ನ ವಿಜಗುಪ್ಸತೇ || ೬ ||

ಅರ್ಥ— ಯಃ ತು—ಯಾವನಾದರೆ, ಸರ್ವಾಣಿ ಭೂತಾನಿ—ಎಲ್ಲ ಭೂತಗಳನ್ನೂ, ಆತ್ಮನಿ ಏವ—ತನ್ನ ಆತ್ಮನಲ್ಲಿಯೇ, ಚ—ಮತ್ತು, ಸರ್ವ ಭೂತೇಷು— ಎಲ್ಲ ಭೂತಗಳಲ್ಲಿಯೂ, ಆತ್ಮಾನಂ—ತನ್ನ ಆತ್ಮವನ್ನು, ಅನುಪಶ್ಯತಿ— ಸದಾ ಕಾಣುತ್ತಿರುವನೋ, ತತಃ—ಆ ಕಾರಣದಿಂದ, ನವಿಜುಗುಪ್ಸತೇ—ಜುಗುಪ್ಸೆಯನ್ನು ಹೊಂದುವುದಿಲ್ಲ.

ಯಸ್ಮಿನ್ ಸರ್ವಾಭೂತಾನ್ಯಾತ್ಮೈವಾಭೂದ್ವಿಜಾನತಃ
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ||೭||

ಅರ್ಥ—ಯಸ್ಮಿನ್—ಯಾವ ಕಾಲದಲ್ಲಿ, ವಿಜಾನತಃ—ಪರಮಾತ್ಮನ ಅರಿವನ್ನು ಪಡೆದವನಿಗೆ, ಸರ್ವಾಣಿ ಭೂತಾನಿ—ಸಮಸ್ತ ಭೂತಗಳೂ, ಆತ್ಮೈವ—ತನ್ನ ಆತ್ಮವೇ, ಅಭೂತ್—ಆಗುತ್ತವೆಯೋ, ತತ್ರ—ಆಗ, ಏಕತ್ವಂ ಅನುಪಶ್ಯತಃ—ಅಖಂಡ ಪರಮಾತ್ಮನನ್ನು ಅರಿತವನಿಗೆ, ಮೋಹಃ ಕಃ-ಮೋಹವು ಯಾವುದು? ಶೋಕಃ ಕಃ-ಶೋಕವು ಯಾವುದು?

ಪದ್ಯಾನುವಾದ—

ಆತ್ಮನಂ ಸರ್ವ ಭೂತಂಗಳೊಳ್ ಮೇಣಪಂ |
ಆತ್ಮನೊಳೆ ಕಾಂಬವಂ ಪಡೆಯಂ ಜುಗುಪ್ಸೆಯಂ || ೬ ||

ಅರಿದಂದದಾತ್ಮವೇ ಭೂತಾಳಿಯಾದುದಂ |
ಅರಿಯಲೇಕತ್ವಮನುಳಿವುದೇ ಶೋಕಮೋಹಂ? || ೭ ||

ನಾಲ್ಕು ಐದನೆಯ ಮಂತ್ರಗಳಲ್ಲಿ ಪರಮಾತ್ಮನ ಸ್ವರೂಪದರ್ಶನವನ್ನು ಮಾಡಲಾಯಿತು. ಈಗ ಆರು ಏಳನೆಯ ಮಂತ್ರಗಳಲ್ಲಿ ಪರಮಾತ್ಮನ ಅರಿವನ್ನು ಪಡೆದ ಸ್ಥಿತಪ್ರಜ್ಞನ ಆಚರಣೆಯನ್ನು ಹೇಳಲಾಗುವುದು. 'ಈಶಾವಾಸ್ಯಮಿದಂ ಸರ್ವಂ' ಎಂಬ ಕಲ್ಪನೆಯ ಅನುಭವವನ್ನು ಪಡೆದವನೇ ಸ್ಥಿತಪ್ರಜ್ಞನು. ಪರಮಾತ್ಮನು ಸರ್ವವ್ಯಾಪಿಯಾಗಿರುವುದರಿಂದ ತನ್ನೊಳಗಿರುವ ಆತ್ಮನನ್ನೇ ಸರ್ವಭೂತಗಳಲ್ಲಿಯೂ ಕಾಣುವನು. ಪರಮಾತ್ಮನು ಸರ್ವವ್ಯಾಪಿಯೆಂದು ಮೊದಲನೆಯ ಮಂತ್ರದಲ್ಲಿಯೇ ಹೇಳಿರುವುದರ ವಿವರಣೆಯೇ ಈ ಮಂತ್ರಗಳಲ್ಲಿದೆ. ಸರ್ವವ್ಯಾಪಿಯಾದ ಪರಮಾತ್ಮನನ್ನು ಅರಿದವನಿಗೆ ಎಲ್ಲೆಲ್ಲಿಯೂ ಅಭೇದವೇ ಕಾಣುವುದು. ತನಗಿಂತ ಅನ್ಯವನ್ನು ಕಾಣದ ಆತ್ಮಾನುಭಾವಿಯು ಯಾವುದರಲ್ಲಿ ಜಿಗುಪ್ಸೆಪಟ್ಟಾನು? ಯಾವುದರಲ್ಲಿ ಮೋಹಪಟ್ಟಾನು? ಯಾವುದು ಇಲ್ಲವೆಂದು ವ್ಯಥೆಪಟ್ಟಾನು? 'ಮಾ ಗೃಧಃ ಕಸ್ಯಸ್ವಿದ್ಧನಂ' ಎಂಬುದು ಅವನಿಗೆ ತಾನಾಗಿಯೇ ಆಚರಣೆಗೆ ಬಂದಿರುವುದು. ಇದೇ ಚಿತ್ರವು ಈ ಉಪನಿಷತ್ತಿನ ಹಿನ್ನೆಲೆಯುಳ್ಳ ಭಗವದ್ಗೀತೆಯಲ್ಲಿದೆ—

ಸರ್ವ ಭೂತಸ್ಥಮಾತ್ಮಾನಂ ಸರ್ವ ಭೂತಾನಿ ಚಾತ್ಮನಿ |
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ||

ತನ್ನೊಳಗೂ ಹೊರಗೂ ಆತ್ಮನನ್ನೇ ನೋಡುವ ಶೋಕಮೋಹಗಳಿಲ್ಲದ ಜೀವನ್ಮುಕ್ತನ ಸ್ಥಿತಿಯನ್ನು ಚಿತ್ರಿಸುವ ವಚನಗಳಿವು :

ಎಲ್ಲಿ ನೋಡಿದೊಡಲ್ಲಿ ನೀನೇ ದೇವಾ, ಎಲ್ಲಿ ಮುಟ್ಟಿದಲ್ಲಿ ನೀನೇ ದೇವಾ, ಎಲ್ಲಿ ಭಾವಿಸಿದಡಲ್ಲಿ ನೀನೇ ದೇವಾ, ಎಲ್ಲ ಎಡೆಯಲ್ಲಿ ನಿಮ್ಮ ಮಹಾ

ಪ್ರಭೆಯೋ ಮುಸುಕಿತಾಗಿ, ಅಖಂಡೇಶ ನಾನು ನೀನೆಂಬುದಕ್ಕೆ ತೆರಹಿಲ್ಲ ದೇವಾ.

ಕ್ಷುತ್, ಪಿಪಾಸೆ, ಶೋಕ, ಮೋಹ, ಮದ, ಮತ್ಸರವೆಂಬ ಷಡ್ವರ್ಗಂಗಳು ಇಲ್ಲದೆ ಇರುತಿರ್ಪನು. ನಾಹಂ, ಕೋಹಂ, ಸೋಹಂ ಎಂಬ ಭಾವ ವಿರಹಿತನಿರ್ಪನು... ಕರ್ಪೂರ ಅಗ್ನಿಸಂಯೋಗವಾಗಿ ಕರ್ಪೂರದ ಗುಣವಳಿದು ಅಗ್ನಿಯಾದಂತೆ ಲಿಂಗವ ನೆನೆದು ಲಿಂಗವೇ ತಾನಾಗಿಪ್ಪುದೀಗ ನಿಜೈಕ್ಯ ಸ್ಥಲವೆಂದೆಂಬೆನಯ್ಯಾ ಮಹಲಿಂಗ ಗುರುಸಿದ್ಧೇಶ್ವರ ಪ್ರಭುವೇ.

ನಾನು ನಾನೆಂಬ ಅಹಂಕಾರಭಾವವಳಿದು ಜ್ಞಾನಾನಂದಮಯ ತಾನಾದ ಬಳಿಕ, ತನ್ನಿಂದನ್ಯವಾದುದೊಂದೂ ಇಲ್ಲವಾಗಿ ಕಾಣಲೊಂದಿಲ್ಲ, ಕೇಳಲೊಂದಿಲ್ಲ, ಅರಿಯಲೊಂದಿಲ್ಲ. ಅನಾದಿ ಅವಿದ್ಯಾ ಮೂಲ ಮಾಯಾಜಾಲ ಚರಾಚರ ನಾಸ್ತಿಯಾಯಿತ್ತು ಇನ್ನೇನ ಹೇಳಲುಂಟೆ ನಿಜೈಕ್ಯಂಗೆ? ವಿಷಯ ವಿಷಯಿಗಳೆಂಬ ಉಭಯ ಭಾವವಡಗಿ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನೇ ತಾನಾಗಿಪ್ಪನು.

ಸಪರ್ಯಗಾತ್ ಶುಕ್ರಮಕಾಯ ಮವ್ರಣಂ ।
ಅಸ್ನಾವಿರಂ ಶುದ್ಧಮಪಾಪವಿದ್ಧಂ ।
ಕವಿರ್ಮನೀಷೀ ಪರಿಭೂಃಸ್ಸ್ವಯಂಭೂಃ ।
ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ
ಸಮಾಭ್ಯಃ ॥ ೮ ॥

ಅರ್ಥ—ಸಃ—ಆ ಪರಮಾತ್ಮನು, ಪರ್ಯಗಾತ್—ಸರ್ವವ್ಯಾಪಿಯು ಶುಕ್ರಂ—ಪ್ರಕಾಶವುಳ್ಳವನು, ಅಕಾಯಂ—ಶರೀರರಹಿತನು, ಅವ್ರಣಂ—ವ್ರಣವಿಲ್ಲದವನು, ಅಸ್ನಾವಿರಂ—ನರರಹಿತನು, ಶುದ್ಧಂ—ಪರಿಶುದ್ಧನಾದವನು, ಅಪಾಪವಿದ್ಧಂ—ಪಾಪಲೇಪವಿಲ್ಲದವನು, ಕವಿ—ಕ್ರಾಂತದರ್ಶಿಯು ಮನೀಷೀ—ಮನಸ್ಸನ್ನು ಪ್ರೇರಿಸುವವನು, ಪರಿಭೂಃ—ಎಲ್ಲರಿಗೂ ಮೇಲಿರುವನು, ಸ್ವಯಂಭೂಃ—ಸ್ವಯಂ ಹುಟ್ಟಿದವನು, ಶಾಶ್ವತೀಭ್ಯಃ ಸಮಾಭ್ಯಃ—ಅನಂತಕಾಲದವರೆಗೂ, ಯಥಾತಥ್ಯತಃ—ಹೇಗೆ ಇರಬೇಕೋ ಹಾಗೆ ಅರ್ಥಾತ್—ಪದಾರ್ಥಗಳನ್ನು, ವ್ಯದಧಾತ್—ಹೊರಹೊಮ್ಮಿಸಿದನು.

ವೇದಾಂತದೇಶಿಕ ಭಾಷ್ಯ—ವ್ಯದಧಾತ್—ಪ್ರಕಾಶಿತವಾನ್.

ಪದ್ಯಾನುವಾದ—

ಪರಿಭೂ ಸ್ವಯಂಭು ಕವಿ ಶುಕ್ರನಸ್ನಾವಿರಂ |
ಪರಿಶುದ್ಧನವ್ರಣಂ ವಿಭುವಪಾಪವಿದ್ಧಂ|
ವರ ಮನೀಷಿಯು ಕಾಯನೈದೆ ಸೃಷ್ಟಿಗೈದಂ |
ನೆರೆ ಶಾಶ್ವತ ಸುಯೋಜನೆಯಿನರ್ಥನಿಚಯಮಂ||

ಪರಮಾತ್ಮನನ್ನು ಪರಿಶುದ್ಧ ಸರ್ವವ್ಯಾಪಿ, ಸರ್ವಜ್ಞ, ಕವಿ ಮೊದಲಾದ ಪದಗಳಿಂದ ವರ್ಣಿಸಲಾಗಿದೆ. ಕಾರ್ಯ ಮಾಡಲು ದೇಹವಿರಬೇಕಷ್ಟೆ. ಆದರೆ ಪರಮಾತ್ಮನು ಕಾಯರಹಿತನು, ನರಗಳಿಲ್ಲದವನು. ಆದರೂ ಪರಮಾತ್ಮನಿಗೂ ಕಾಯಕವುಂಟು. ಶಾಶ್ವತವಾದ ಯೋಜನೆಗೆ ಅನುಸಾರವಾಗಿ ನಡೆವಂತೆ ಚರಾಚರಾತ್ಮಕ ಜಗತ್ತನ್ನು ಸೃಷ್ಟಿಸುತ್ತಾನೆ. ವಚನಕಾರರ ನಿಲುವಿನಂತೆ ಗುರು, ಲಿಂಗ, ಜಂಗಮ ಈ ಮೂರಕ್ಕೂ ಸಹ ಕಾಯಕವುಂಟು. ಭಗವದ್ಗೀತೆಯಲ್ಲಿ 'ಕರ್ತಾರಮಪಿ ಮಾಂ ವಿದ್ಧಿ ಅಕರ್ತಾರಮವ್ಯಯಂ ನ ಮಾಂ ಕರ್ಮಾಣಿ ಲಿಂಪಂತಿ' ಎಂದು ಹೇಳಿರುವುದರಿಂದ ಭಗವಂತನೂ ಕರ್ಮಲೇಪನವಾಗದಂತೆ ಕರ್ಮ ಮಾಡಿ, ಈಶಾವಾಸ್ಯದ ಎರಡನೆಯ ಮಂತ್ರಕ್ಕೆ ಮಾರ್ಗದರ್ಶಕನಾಗಿದ್ದಾನೆ.

ಅಂಧಂ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ |
ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ ||೯||

ಅರ್ಥ—ಯೇ—ಯಾರು, ಅವಿದ್ಯಾಂ—ಅವಿದ್ಯೆಯನ್ನು, ಉಪಾಸತೇ—ಉಪಾಸನೆ ಮಾಡುತ್ತಾರೋ, (ತೇ—ಅವರು), ಅಂಧಂತಮಃ—ಕುರುಡು ಕತ್ತಲೆಯನ್ನು, ಪ್ರವಿಶಂತಿ—ಪ್ರವೇಶಿಸುತ್ತಾರೆ, ಉ—ಮತ್ತು, ಯೇ—ಯಾರು ವಿದ್ಯಾಯಾಂ—ವಿದ್ಯೆಯಲ್ಲಿಯೇ, ರತಾಃ—ನಿರತರಾಗಿರುತ್ತಾರೋ, ತೇ—ಅವರು, ತತಃ ಭೂಯಃ ಇವ—ಅದಕ್ಕಿಂತಲೂ ಹೆಚ್ಚಿನದಂತೆ ಇರುವ, ತಮಃ—ಅಂಧಕಾರವನ್ನು, ಪ್ರವಿಶಂತಿ—ಪ್ರವೇಶ ಮಾಡುತ್ತಾರೆ ||೯||

ಅನ್ಯದೇವಾಹುರ್ವಿದ್ಯಯಾ ಅನ್ಯದೇವಾಹುರವಿದ್ಯಯಾ ।
ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥೧೦॥

ಅರ್ಥ—ವಿದ್ಯಯಾ - ವಿದ್ಯೆಯಿಂದಾಗುವ ಫಲವು, ಅನ್ಯದೇವ_ ಬೇರೆಯೇ ಎಂದು, ಆಹುಃ—ಹೇಳುತ್ತಾರೆ, ಅವಿದ್ಯಯಾ—ಅವಿದ್ಯೆಯಿಂದಾ ಗುವ ಫಲವು, ಅನ್ಯದೇವ—ಬೇರೆಯೆ ಎಂದು, ಆಹುಃ—ಹೇಳುತ್ತಾರೆ, ಇತಿ—ಹೀಗೆಂದು, ಯೇ--ಯಾರು, ನಃ—ನಮಗೆ, ತತ್—ಅದನ್ನು, ವಿಚಚಕ್ಷಿರೇ—ವಿವರಿಸಿದರೋ ಆ, ಧೀರಾಣಾಂ— ಧೀರರಿಂದ, ಶುಶ್ರುಮ— ಕೇಳಿದ್ದೇವೆ ॥ ೧೦ ॥

ವಿದ್ಯಾಂ ಚಾವಿದ್ಯಾಂ ಚ ಯಸ್ತದ್ ವೇದೋಭಯಗ್ಂ ಸಹ ।
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ ॥೧೧॥

ಅರ್ಥ—ಯೇ—ಯಾರು, ವಿದ್ಯಾಂ ಚಾವಿದ್ಯಾಂ ಚ ಉಭಯಂ ತತ್—ಆ ವಿದ್ಯಾವಿದ್ಯೆಗಳೆರಡನ್ನೂ, ಸಹ—ಒಟ್ಟಿಗೆ, ವೇದ—ತಿಳಿಯು ತ್ತಾನೋ (ಆತನು), ಅವಿದ್ಯಯಾ—ಅವಿದ್ಯೆಯಿಂದ, ಮೃತ್ಯುಂ—ಮೃತ್ಯು ವನ್ನು. ತೀರ್ತ್ವಾ—ದಾಟಿ, ವಿದ್ಯಯಾ—ವಿದ್ಯೆಯಿಂದ, ಅಮೃತಂ—ಮೋಕ್ಷ ವನ್ನು, ಅಶ್ನುತೇ—ಹೊಂದುತ್ತಾನೆ.

ಪದ್ಯಾನುವಾದ—

ಕತ್ತಲೆಯು ನವಿದ್ಯಾಪಾಸಕರ್ ಪುಗಲ್ ಕ ।
ಗ್ಗತ್ತಲೆಯನೆ ಪೊಗುವರ್ ವಿದ್ಯೆಯೌಪಾಸಕರ್ ॥ ೯ ॥

ಬೇರೆಯುದವಿದ್ಯೆಯಿಂ ಬೇರೆಯುದು ವಿದ್ಯೆಯಿಂ ।
ಧೀರರೆಮಗರುಪಿದರ್ ತವೆಯಿಂದಂ ವಿವರದಿಂ ॥ ೧೦ ॥

ವಿದ್ಯೆಯುನವಿದ್ಯೆಯೊಡನರಿದವರ್ಗೆ ಮೋಕ್ಷಂ ।
ವಿದ್ಯೆಯಿಂನವಿದ್ಯೆಯಿಂ ದಾಂಟುವರ್ ಮೃತ್ಯುವಂ ॥ ೧೧ ॥

ಈ ಮೂರು ಮಂತ್ರಗಳ ವಿಷಯದಲ್ಲಿ ಈ ಉಪನಿಷತ್ತಿನ ಭಾಷ್ಯವನ್ನು ಬರೆದಿರುವ ಆಚಾರ್ಯರುಗಳಿಗಿರುವ ಭಿನ್ನಾಭಿಪ್ರಾಯಗಳಿಗಿಂತ ಹೆಚ್ಚು

ಭಿನ್ನಾಭಿಪ್ರಾಯವು ಮತ್ತಾವ ವಿಷಯದಲ್ಲಿಯೂ ಇಲ್ಲವೆಂದರೆ ಅತಿಶಯೋಕ್ತಿಯೇನಲ್ಲ. ಇವುಗಳಲ್ಲಿ ಮೊದಲನೆಯ ಮಂತ್ರದ ಅಭಿಪ್ರಾಯವನ್ನು ಗ್ರಹಿಸುವುದೇ ಕಷ್ಟ. ಅವಿದ್ಯೋಪಾಸನೆಯಿಂದ ಬರುವುದು ಕುರುಡು ಕತ್ತಲೆಯ ಲೋಕವೆಂದು ಆ ಮಂತ್ರವು ಹೇಳುತ್ತದೆ. ಇದನ್ನೇನೋ ಒಪ್ಪೋಣ; ಆದರೆ ವಿದ್ಯೆಯಿಂದ ಕತ್ತಲೆಯ ಲೋಕಕ್ಕೆ ಹೋಗುವರೆಂದು ಈ ಮಂತ್ರದಲ್ಲಿಹೇಳಿರುವುದು ಎಂತಹವರಿಗೂ ಆಶ್ಚರ್ಯವನ್ನುಂಟುಮಾಡುವುದು; ಏಕೆಂದರೆ ವಿದ್ಯೆಯಿಂದ ಮೋಕ್ಷವೆಂಬುದು ಎಲ್ಲೆಲ್ಲಿಯೂ ಉಕ್ತವಾದ ವಿಷಯ. ಇಷ್ಟೇ ಅಲ್ಲ; ಅವಿದ್ಯೆಯಿಂದ ದೊರೆಯುವ ಕತ್ತಲೆಯ ಲೋಕಕ್ಕಿಂತ ಹೆಚ್ಚು ಗಾಢಾಂಧತಮಲೋಕಕ್ಕೆ ವಿದ್ಯೆಯು ಒಯ್ಯುವುದೆಂಬುದು ಎಂತಹವರೂ ನಂಬದ ಮಾತು; ಹಾಗೆಂದರೆ ವಿದ್ಯೆಯು ಅವಿದ್ಯೆಗಿಂತ ಕೀಳಾಗುವುದು. "ನಹಿ ಜ್ಞಾನೇನಸದೃಶಂ" ಎಂದರೆ ಜ್ಞಾನಕ್ಕೆ ಸದೃಶವಾದುದು ಇಲ್ಲವೆಂದು ಗೀತೆಯಲ್ಲಿ ಹೇಳಿವೆ: "ಬ್ರಹ್ಮವೇದ ಬ್ರಹ್ಮೈವ ಭವತಿ" ಎಂದರೆ ಬ್ರಹ್ಮವನ್ನು ಅರಿತವನು ಬ್ರಹ್ಮನೇ ಆಗುತ್ತಾನೆಂದು ಮುಂಡಕ ಉಪನಿಷತ್ತಿನಲ್ಲಿ ಹೇಳಿದೆ. ಆ ಉಪನಿಷತ್ತಿನಲ್ಲಿಯೇ "ದ್ವೇ ವಿದ್ಯೇ ವೇದಿತವ್ಯೇ ಪರಾಚೈವಾಪರಾಚ" ಎಂದು ಹೇಳಿರುವುದರಲ್ಲಿ ವಿದ್ಯೆಯನ್ನು ಪರಾವಿದ್ಯೆ ಎಂದರೆ ಶ್ರೇಷ್ಠವಾದ ವಿದ್ಯೆಯೆಂದೂ ಅವಿದ್ಯೆಯನ್ನು ಅಪರವಿದ್ಯೆಯೆಂದೂ ಹೇಳಿದೆ. ವಿದ್ಯೆಯೇ ಅವಿದ್ಯೆಗಿಂತ ಶ್ರೇಷ್ಠವೆಂಬುದು ಬಾಲರಿಗೂ ತಿಳಿದ ವಿಷಯವಾಗಿದೆ. ಹೀಗಿದ್ದರೂ ಈಶಾವಾಸ್ಯೋಪನಿಷತ್ತಿನಲ್ಲಿ ಅವಿದ್ಯೆಯು ಒಯ್ಯುವ ಕತ್ತಲೆಯ ಲೋಕಕ್ಕಿಂತ ಹೆಚ್ಚು ಕತ್ತಲೆಯ ಲೋಕಕ್ಕೆ ವಿದ್ಯೆಯು ಒಯ್ಯುವುದೆಂದು ಹೇಳಿ ಅವಿದ್ಯೆಗಿಂತಲೂ ವಿದ್ಯೆಯನ್ನು ಕೀಳು ಮಾಡಿರುವುದು ಏಕೆ ಎಂಬ ಪ್ರಶ್ನೆಯನ್ನೇ ಶ್ರೀ ಶಂಕರಾಚಾರ್ಯರು ಎತ್ತಿಲ್ಲ. ವಿದ್ಯೆಯೊಂದರಿಂದಲೇ ಮೋಕ್ಷವೆನ್ನುವ ಶ್ರೀ ಶಂಕರಾಚಾರ್ಯರ ಸಿದ್ಧಾಂತಕ್ಕೆ ಜ್ಞಾನಕರ್ಮಗಳೆರಡೂ ಸಹ ಮೋಕ್ಷವನ್ನು ಕೊಡುವುವೆಂದು ಹೇಳುವುದು ವಿರುದ್ಧವಾಗುವುದು. ಈ ಉಪನಿಷತ್ತಿನ ೧೧ನೆಯ ಮಂತ್ರದಲ್ಲಿ ವಿದ್ಯೆ ಮತ್ತು ಅವಿದ್ಯೆ ಸಹಾ ಕೂಡಿದ್ದರೆ ಅಮೃತ ದೊರೆವುದೆನ್ನುವುದಕ್ಕೆ ಜ್ಞಾನ ಮತ್ತು ಕರ್ಮಗಳಿಂದ ಮೋಕ್ಷವಾಗುವುದೆಂದು ಅರ್ಥಮಾಡುವುದು ಶಾಂಕರ ಸಿದ್ಧಾಂತಕ್ಕೆ ಹೊಂದುವುದಿಲ್ಲ. ಆದುದರಿಂದ ಶ್ರೀ ಶಂಕರಾಚಾರ್ಯರು

"ವಿದ್ಯಾಂಚಾವಿದ್ಯಾಂಚ ದೇವತಾಜ್ಞಾನಂ ಕರ್ಮಚೇತ್ಯರ್ಥಃ.ಎಂದೂ, ಅಮೃತಂ ದೇವತಾತ್ಮಭಾವಂ" ಎಂದೂ ಹೇಳಿ, ಅವಿದ್ಯೆಯೆಂದರೆ ಕರ್ಮವೆಂದೂ ವಿದ್ಯೆಯೆಂದರೆ ದೇವತೋಪಾಸನೆಯೆಂದೂ, ಅಮೃತವೆಂದರೆ ದೇವಲೋಕವೆಂದೂ ಅರ್ಥಮಾಡಿದ್ದಾರೆ. ದೇವತೋಪಾಸನೆ ಕರ್ಮಗಳೆರಡನ್ನೂ ಒಟ್ಟಿಗೆ ಆಚರಿಸಬಹುದಾದುದರಿಂದ ಹೀಗೆಯೇ ಅರ್ಥಮಾಡಬೇಕೆನ್ನುವರು. ಹಾಗಾದರೆ ಒಂಭತ್ತನೆಯ ಮಂತ್ರದ ಅರ್ಥವು – ಒಂದೊಂದನ್ನೇ ಆಚರಿಸಿದಾಗ ಕರ್ಮವು ಕತ್ತಲೆಯ ಲೋಕಕ್ಕೆ ಒಯ್ಯುವುದೆಂದೂ ದೇವತೋಪಾಸನೆಯು ಅದಕ್ಕಿಂತಲೂ ಹೆಚ್ಚು ಕತ್ತಲೆಯ ಲೋಕಕ್ಕೆ ಒಯ್ಯುವುದೆಂದೂ ಹೇಳಿದಂತಾಗುತ್ತದೆ. ದೇವತೋಪಾಸನೆಯು ಕರ್ಮಕ್ಕಿಂತ ಕೀಳೆನ್ನುವುದು ಹೇಗೆ ಸರಿ ಎಂಬುದಕ್ಕೆ ಶಾಂಕರಭಾಷ್ಯದಲ್ಲಿ ಸಮಾಧಾನವನ್ನು ಹೇಳಿಲ್ಲ.

ರಾಮಾನುಜಾನುಯಾಯಿಗಳಾದ ವೇದಾಂತದೇಶಿಕರ ಭಾಷ್ಯದಲ್ಲಿ ೯ನೆಯ ಮಂತ್ರದ "ಯೇ ವಿದ್ಯಾಮುಪಾಸತೇ" ಎಂಬುದಕ್ಕೆ "ಕೇವಲ ಕರ್ಮನಿರತಾನಾಂ ದುಃಖಾನುವೃತ್ತಿಮಧೀಯತೇ." ಎಂದು ಭಾಷ್ಯವನ್ನು ಬರೆದು "ಪ್ಲವಾಹ್ಯೇತೇ ಅದೃಢಾ ಯಜ್ಞರೂಪಾಃ" ಎಂಬ ಆಧಾರವನ್ನು ಕೊಟ್ಟಿದ್ದಾರೆ. ಒಂದೊಂದನ್ನೇ ಆಚರಿಸಿದಾಗ ದುಃಖಕಾರಿಯಾದ ಯಜ್ಞಾದಿ ಕರ್ಮವು ಒಯ್ಯುವ ಕತ್ತಲೆಲೋಕಕ್ಕಿಂತ ದೇವತೋಪಾಸನಾರೂಪವಾದ ವಿದ್ಯೆಯು ಹೆಚ್ಚು ಕತ್ತಲೆಯ ಲೋಕಕ್ಕೆ ಒಯ್ಯುವುದೆಂದಾಯಿತು. ಇದು ಹೇಗೆ ಸಮಂಜಸವೆಂದು ಅವರೂ ಹೇಳಿಲ್ಲ. ಆದುದರಿಂದ ಈ ಅರ್ಥವಾದರೂ ೯ನೆಯ ಮಂತ್ರದಲ್ಲಿರುವ ತೊಡಕನ್ನು ಬಿಡಿಸುವುದಿಲ್ಲ.

ಅನ್ಯಥೋಪಾಸಕಾ ಯೇ ತು ತಮೋಂಧಂ ಯಾಂತ್ಯಸಂಶಯಂ ।
ತತೋಽಧಿಕಮಿವ ವ್ಯಕ್ತಂ ಯಾಂತಿ ತೇಷಾಮನಿಂದಕಾಃ ॥

ಎಂದು ಮುಂತಾಗಿ ಮಾಧ್ವಭಾಷ್ಯದಲ್ಲಿ ಹೇಳಿರುವುದರಲ್ಲಿ ೯ನೆಯ ಮಂತ್ರದಲ್ಲಿನ ವಿದ್ಯೆಯೆಂದರೆ ಪರಮಾತ್ಮನ ಯಥಾರ್ಥಜ್ಞಾನವೆಂದೂ, ಪರಮಾತ್ಮನ ಅಯಥಾರ್ಥಸ್ವರೂಪವನ್ನು ಧ್ಯಾನಿಸುವವರು ಹೋಗುವ ಲೋಕಕ್ಕಿಂತ ಹೆಚ್ಚು ಕತ್ತಲೆಯ ಲೋಕವನ್ನು, ಅವರನ್ನು ನಿಂದಿಸದಿರುವವರು ಸೇರುವರೆಂದೂ

ಮಾಧ್ವಭಾಷ್ಯದಲ್ಲಿ ಹೇಳಿದೆ. ಹಾಗಾದರೆ, ಪರರ ನಿಂದೆಯು ಶ್ರೇಯಸ್ಕರವೆ ? ಇವರಲ್ಲಿಯೂ ವಿದ್ಯೋಪಾಸಕರು ಎಂದರೆ ಪರಮಾತ್ಮನ ಯಥಾರ್ಥ ಸ್ವರೂಪವನ್ನು ಧ್ಯಾನಿಸುವವರು, ಹಾಗೆಮಾಡದವರನ್ನು ನಿಂದಿಸದ ಮಾತ್ರಕ್ಕೆ ಅವರಿಗಿಂತ ಹೇಗೆ ಕಡಮೆಯಾಗುವರು-ಎಂಬುದಕ್ಕೆ ಕಾರಣವನ್ನು ಭಾಷ್ಯದಲ್ಲಿ ಹೇಳಿಲ್ಲ. ಹೀಗಾಗಿ ಶ್ರೀಮತಾಚಾರ್ಯರ ಭಾಷ್ಯಗಳಲ್ಲಿಯೂ ೯ನೆಯ ಮಂತ್ರದ ತೊಡಕನ್ನು ಬಿಡಿಸಿಲ್ಲವೆಂಬುದು ಮಾತ್ರವೇ ಅಲ್ಲ ಆ ದಿಸೆಯಲ್ಲಿ ಪ್ರಯತ್ನವನ್ನೇ ಮಾಡಿಲ್ಲ ; ತೊಡಕು ಇರುವುದನ್ನು ಗಮನಿಸಿಯೂ ಇಲ್ಲ.

ಈ ಮೂರು ಮಂತ್ರಗಳೂ ಒಟ್ಟಿಗೆ ಒಂದೆಡೆ ಬರುವುದರಿಂದ, ವಿದ್ಯೆ ಅವಿದ್ಯೆ ಎಂಬ ಅವುಗಳಲ್ಲಿರುವ ಪದಗಳಿಗೆ ಒಂದೇ ರೀತಿಯ ಅರ್ಥಮಾಡಬೇಕಾಗುವುದು ; ಎರಡನೆಯದಾಗಿ ೧೧ನೆಯ ಮಂತ್ರದಲ್ಲಿ "ಉಭಯಂ ಸಹಾ" ಎಂಬ ಪದಗಳಿರುವುದರಿಂದ ವಿದ್ಯೆ ಮತ್ತು ಅವಿದ್ಯೆಗಳು ಒಬ್ಬ ಪುರುಷನೇ ಒಂದೇ ಕಾಲದಲ್ಲಿ ಎರಡನ್ನೂ ಆಚರಿಸುವಂತಿರಬೇಕು. ಮೂರನೆಯದಾಗಿ ಇವುಗಳಲ್ಲಿ ಒಂದನ್ನೇ ಆಚರಣೆಗೆ ತರುವುದಾದರೆ ವಿದ್ಯೆಯಿಲ್ಲದ ಅವಿದ್ಯೆಯೇ, ಅವಿದ್ಯೆ ಇಲ್ಲದ ವಿದ್ಯೆಗಿಂತಲೂ ಉತ್ತಮವಾದುದಾಗಿರಬೇಕು. ಇವೆಲ್ಲಕ್ಕೂ ಸರಿಹೊಂದುವಂತೆ, ವಿದ್ಯೆ ಮತ್ತು ಅವಿದ್ಯೆ ಪದಗಳಿಗೆ ಶ್ರೀಮತಾಚಾರ್ಯರ ಭಾಷ್ಯಗಳಲ್ಲಿ ಅರ್ಥ ಹೇಳಿಲ್ಲದಿರುವುದು ಸೋಜಿಗವೇ ಸರಿ.

ವೀರಶೈವ ಸಿದ್ಧಾಂತದಲ್ಲಿ ಜ್ಞಾನಕರ್ಮಪದಗಳಿಗೆ ಸರಿಯಾದ ಪಾರಿಭಾಷಿಕ ಪದಗಳು ಅರಿವು, ಆಚಾರ—ಎಂಬುವು; ಜ್ಞಾನ, ಕರ್ಮ ಎಂಬ ಪದಗಳನ್ನೂ ಅವರು ಉಪಯೋಗಿಸುವುದೂ ಉಂಟು. ಆದರೆ ಕರ್ಮಪದವು ಮುಂಡಕೋಪನಿಷತ್ತಿನಲ್ಲಿ ನಿಂದಿಸಲ್ಪಟ್ಟ ಯಜ್ಞಯಾಗಾದಿ ವಿಧ್ಯುಕ್ತ ಕರ್ಮಗಳ ಪಾರಿಭಾಷಿಕ ಪದವಾಗಿ ಉಪಯೋಗಿಸಲ್ಪಟ್ಟಿರುವುದರಿಂದ ಆ ಪದಕ್ಕೆ ಬದಲಾಗಿ ಎಲ್ಲ ಕೆಲಸಗಳಿಗೂ ಅನ್ವಯಿಸುವ ಕ್ರಿಯಾ ಎಂಬ ಪದವನ್ನಾಗಲೀ ಅಥವಾ "ಕ್ರೀ" ಎಂಬ ಪದವನ್ನಾಗಲೀ ಉಪಯೋಗಿಸುವುದುಂಟು. ಜ್ಞಾನ ಅಥವಾ ಅರಿವು ಎಂದರೆ ತಿಳಿವಳಿಕೆ—ವಿಶೇಷವಾಗಿ ಪಾರಮಾರ್ಥಿಕವಾದ ತಿಳಿವಳಿಕೆ. ಇದಕ್ಕೆ ಅನುಸಾರವಾದ ಕಾರ್ಯಾ

ಚರಣೆಗೆ, ನಡವಳಿಕೆಗೆ, 'ಆಚಾರ'ವೆಂದು ಹೆಸರು ; ಈ ಅರಿವು ಆಚಾರಗಳ ಸಮನ್ವಯವು ವಚನಗಳಲ್ಲಿ ಕಂಡುಬರುವುದು :

ಅಂತರಂಗದ ಅರಿವು ಬಹಿರಂಗದ ಕ್ರಿಯೆ, ಈ ಉಭಯ ಸಂಪುಟ ಒಂದಾದ ಶರಣಂಗೆ ಹಿಂಗಿತ್ತು ತನುಸೂತಕ, ಹಿಂಗಿತ್ತು ಮನಸೂತಕ.

ಜ್ಞಾನದಲ್ಲಿ ಅರಿದರೇನಯ್ಯ ಸತ್ಕ್ರಿಯಾಚಾರಿಯಾಗದನ್ನಕ್ಕ? ನೆನದ ಮಾತ್ರದಲ್ಲಿ ಕಾಂಬುದೇ ಕಾರ್ಯದಲ್ಲಿಲ್ಲದೆ? . . ಜ್ಞಾನವಿಲ್ಲದ ಕ್ರೀ ಜಡ; ಕ್ರೀ ಯಿಲ್ಲದ ಜ್ಞಾನ ಭ್ರಾಂತಿ.

'ಅಂತರಂಗದ ಅರಿವು ಬಹಿರಂಗದ ಕ್ರಿಯೆ, ಉಭಯ ಒಂದಾದ ಶರಣ', ಮತ್ತು 'ವಿದ್ಯಾಂ ಚಾವಿದ್ಯಾಂಚಯಸ್ತದ್ವೇದೋಭಯಂಸಹ' ಎಂಬ ಮಾತುಗಳು ಎರಡೂ ಒಂದೇ. ಮೇಲಿನ ವಚನಗಳನ್ನು ರಚಿಸಿದವರು ಈ ಉಪನಿಷತ್ತನ್ನು ಮನಸ್ಸಿನಲ್ಲಿ ಇಟ್ಟುಕೊಂಡಿದ್ದರೋ ಏನೋ ಎನಿಸುವುದು; ಇಲ್ಲದಿದ್ದರೂ ಇರಬಹುದು. ಜ್ಞಾನಕ್ಕೆ ಅನುಸಾರವಾದ ಕ್ರಿಯೆ ಅಥವಾ ಆಚರಣೆಯು 'ಯಸ್ಯಯೇನ ಸಮುಚ್ಚಯಃ ಸಂಭವತಿ ನ್ಯಾಯತಃ ಶಾಸ್ತ್ರತೋವಾ, ತದಿಹೋಚ್ಯತೇ' ಎಂದು ಶ್ರೀ ಶಂಕರಾಚಾರ್ಯರು ೧೧ನೆಯ ಮಂತ್ರದಲ್ಲಿ ಹೇಳಿದ ನಿಯಮಕ್ಕೆ ಹೊಂದುತ್ತದೆ. ಶ್ರೀ ಶಂಕರಾಚಾರ್ಯರು 'ವಿದ್ಯೆ' ಪದಕ್ಕೆ ವಿಧ್ಯುಕ್ತ ಕರ್ಮಕ್ಕೆ ಹೊಂದುವ ಅರ್ಥವನ್ನು ೧೧ನೆಯ ಮಂತ್ರಕ್ಕೆ ಹೊಂದಿಸಿಕೊಂಡರು; ಆದರೆ ಇದು ೯ನೆಯ ಮಂತ್ರಕ್ಕೆ ಹೊಂದಲಿಲ್ಲ. ವಚನಕಾರರು ಜ್ಞಾನಕ್ಕೆ ಹೊಂದುವ ಕ್ರಿಯೆಯನ್ನು ಹೇಳಿರುವರು. ಇದು ೯ನೆಯ ಮಂತ್ರಕ್ಕೂ ೧೧ನೆಯ ಮಂತ್ರಕ್ಕೂ ಸಹ ಸರಿಹೋಗುವುದನ್ನು ಚೆನ್ನಬಸವೇಶ್ವರರ ವಚನದಿಂದ ತೋರಿಸಬಹುದು :

ಕ್ರಿಯೆಯೇ ಜ್ಞಾನ; ಜ್ಞಾನವೇ ಕ್ರಿಯೆ; ಜ್ಞಾನವೆಂದರೆ ತಿಳಿಯುವುದು, ಕ್ರಿಯೆಯೆಂದರೆ ತಿಳಿದಂತೆ ಮಾಡುವುದು. ಪರಸ್ತ್ರೀ ಸಂಗವ ಮಾಡಬಾರದೆಂಬುದೇ ಜ್ಞಾನ, ಮಾಡದಿರ್ಪುದೇ ಕ್ರಿಯೆ.

ಇದಕ್ಕಿಂತಲೂ ಉತ್ತಮಉದಾಹರಣೆಯನ್ನು ಮೇಲೆ ಕಂಡ ಸಮಸ್ಯೆ ಪರಿಹಾರಕ್ಕೆ ಕೊಡಲಾಗುವುದಿಲ್ಲ. ತಪ್ಪು ತಪ್ಪೆಂದು ತಿಳಿದು ತಪ್ಪು ಮಾಡದಿರುವುದು ಉತ್ತಮ. ತಪ್ಪು ತಪ್ಪೆಂದು ಅರಿಯದೆ ಇದ್ದರೂ ತಪ್ಪು

ಮಾಡದಿರುವವನು ಮಧ್ಯಮು; ತಪ್ಪು ತಪ್ಪೆಂದು ಅರಿದೂ ತಪ್ಪು ಮಾಡುವವನು ಅಧಮನು. ಅರಿಯದವನ ತಪ್ಪಿನಲ್ಲಿ ಅಜ್ಞಾನವೆಂಬ ತಮಸ್ಸಿದೆ; ಅರಿದೂ ತಪ್ಪು ಮಾಡುವುದರಲ್ಲಿ ಗಾಢ ತಮಸ್ಸಿದೆ. 'ಈಶಾವಾಸ್ಯಮಿದಂ ಸರ್ವಂ' ಎಂಬ ಅರಿವಿದ್ದೂ ಪರಧನಕ್ಕಾಸೆಪಡುವವನು, ಅಂತಹ ಅರಿವಿಲ್ಲದೆ ಪರಧನಕ್ಕಾಸೆಪಡುವವನು ಪಡೆವುದಕ್ಕಿಂತ ಹೆಚ್ಚಾದ ತಮಸ್ಸಿಗೊಳಗಾಗುವನೆಂಬುದು ೯ನೆಯ ಮಂತ್ರದ ಉಪದೇಶ. ಇಬ್ಬರೂ ಪಡೆವ ತಮೋಲೋಕದಲ್ಲಿ ತಾರತಮ್ಯವಿದೆಯೆಂಬುದು ೧೦ನೆಯ ಮಂತ್ರದ ಉಪದೇಶ. 'ಈಶಾವಾಸ್ಯಮಿದಂ ಸರ್ವಂ' ಎಂಬ ಜ್ಞಾನಕ್ಕೆ ಅನುಸಾರವಾಗಿ ಪರಧನಕ್ಕೆ ಆಸೆಪಡದ, ಎಂದರೆ 'ಅಂತರಂಗದ ಅರಿವು' ಬಹಿರಂಗದ ಕ್ರಿಯೆ—ಈ ಉಭಯಸಂಪುಟ ಒಂದಾದ ಶರಣಂಗೆ' ಅವನ ಸತ್ಕ್ರಿಯೆಯಿಂದ ಇಹಲೋಕದ ಬಾಳುವೆ ಸುಖನಾಗಿ ಕಳೆವುದು; ಹೀಗೆ ಮರ್ತ್ಯಲೋಕದ ಯಾತ್ರೆಯು ಆತಂಕವಿಲ್ಲದೆ, ಕಡೆಹಾಯಲು ಅವನ ಅರಿವಿನಿಂದ 'ಅಮೃತ' ಎಂದರೆ ಜೀವನ್ಮುಕ್ತಿ ದೊರೆಯುವುದು.

ಅಂತರಂಗದ ಅರಿವು ಬಹಿರಂಗದ ಕ್ರಿಯೆ ಈ ಉಭಯಸಂಪುಟ ಒಂದಾದ ಶರಣಂಗೆ ಹಿಂಗಿತ್ತು ತನುಸೂತಕ, ಹಿಂಗಿತ್ತು ಮನಸೂತಕ ಕೂಡಲ ಚೆನ್ನಸಂಗಯ್ಯನಲ್ಲಿ ಸಂಗವಾದುದು ಸರ್ವೇಂದ್ರಿಯ.

ಅಂತರಂಗದ ಅರಿವಿಂಗೆ ಆಚಾರವೇ ಕಾಯ; ಆಚಾರಕಾಯವಿಲ್ಲದೊಡೆ ಅರಿವಿಂಗೆ ಆಶ್ರಯವಿಲ್ಲ. ಅರಿವು ಆಚಾರದಲ್ಲಿ ಸಮವೇದಿಸಿದ ಲಿಂಗೈಕ್ಯನ ಕ್ರಿಯಾಬದ್ಧನೆಂದು ನುಡಿದರೆ ಪಂಚಮಹಾಪಾತಕ.

ಅಂಧಂ ತಮಃ ಪ್ರವಿಶಂತಿ ಯೇಽಸಂಭೂತಿಮುಪಾಸತೇ ।
ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಗ್ ರತಾಃ ॥೧೨॥

ಅರ್ಥ—ಯೇ-ಯಾರು, ಅಸಂಭೂತಿಂ-ಅಸಂಭೂತಿಯನ್ನು, ಉಪಾಸತೇ-ಉಪಾಸನೆ ಮಾಡುತ್ತಾರೋ, (ತೇ-ಅವರು), ಅಂಧಂ ತಮಃ-ಕುರುಡಗತ್ತಲನೆಯನ್ನು, ಪ್ರವಿಶಂತಿ-ಪ್ರವೇಶಿಸುತ್ತಾರೆ, ತತಃ-ಅದಕ್ಕಿಂತಲೂ, ಭೂಯಃ-ಅಧಿಕವಾಗಿ, ಇವ-ತೋರುವ, ತಮಃ-ತಮಸ್ಸನ್ನು

ಯೇ–ಯಾರು, ಸಂಭೂತ್ಯಾಂ ರತಾಃ–ಸಂಭೂತಿಯಲ್ಲಿ ಆಸಕ್ತರಾಗಿರುವರೋ, ತೇ–ಅವರು, (ಪ್ರವಿಶಂತಿ–ಪ್ರವೇಶಿಸುವರು).

ಅನ್ಯದೇವಾಹುಸ್ಸಂಭವಾದನ್ಯದೇವಾಹುರಸಂಭವಾತ್ ।
ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥ ೧೩ ॥

ಅರ್ಥ— ಸಂಭವಾತ್–ಸಂಭವದಿಂದ, ಅನ್ಯದೇವ–ಬೇರೆ ಫಲವು ಎಂದು, ಆಹುಃ–ಹೇಳುತ್ತಾರೆ. ಅಸಂಭವಾತ್–ಅಸಂಭವದಿಂದ, ಅನ್ಯದೇವ–ಬೇರೆ ಫಲವು ಎಂದು, ಆಹುಃ–ಹೇಳುತ್ತಾರೆ. ಇತಿ–ಹೀಗೆ, ಯೇ–ಯಾವ ಧೀರರು, ನಃ–ನಮಗೆ, ತತ್–ಈ ವಿಷಯವನ್ನು, ವಿಚಚಕ್ಷಿರೇ–ವಿವರಿಸಿದರೋ, ತೇಷಾಂ–ಅಂತಹ, ಧೀರಾಣಾಂ–ಧೀರರಿಂದ, ಶುಶ್ರುಮ–ಕೇಳಿದ್ದೇವೆ.

ಸಂಭೂತಿಂ ಚ ವಿನಾಶಂ ಚ ಯಸ್ತದ್ ವೇದೋಭಯಗ್‌ಂ ಸಹ ।
ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಮೃತಮಶ್ನುತೇ ॥ ೧೪ ॥

ಅರ್ಥ— ಸಂಭೂತಿಂ ಚ ವಿನಾಶಂ ಚ–ಸಂಭೂತಿಯನ್ನು ಮತ್ತು ವಿನಾಶವನ್ನು, ಉಭಯಂ ಸಹ–ಎರಡನ್ನೂ ಒಟ್ಟಿಗೆ, ಯಃ–ಯಾರು, ವೇದ–ತಿಳಿಯುತ್ತಾರೋ, (ತೇ–ಅವರು), ವಿನಾಶೇನ–ವಿನಾಶದ ಮೂಲಕ, ಮೃತ್ಯುಂ–ಸಂಸಾರರೂಪ ಮೃತ್ಯುವನ್ನು, ತೀರ್ತ್ವಾ–ದಾಟಿ, ಸಂಭೂತ್ಯಾ–ಸಂಭೂತಿಯಿಂದ, ಅಮೃತಂ–ಅಮೃತವನ್ನು, ಅಶ್ನುತೇ–ಹೊಂದುತ್ತಾರೆ.

ಪದ್ಯಾನುವಾದ

ಕತ್ತಲೆಯನೆಪೊಗೆ, ಸಂಭೂತ್ಯುಪಾಸಕರ್, ಕ ।
ಗ್ಗತ್ತಲೆಯನೆ ಪೊಗುವರ್ ಸಂಭೂತ್ಯುಪಾಸಕರ್ ॥ ೧೨ ॥

ಅನ್ಯಮಂದು ಸಂಭವದೆ ; ಅನ್ಯಮದಸಂಭವದೆ ।
ಮುನ್ನಿದಂ ವಿವರಿಸಿದ ಧೀರರಿಂ ಕೇಳಿದೆವು ॥ ೧೩ ॥

ಸಂಭೂತಿ ವಿನಾಶವುನೊಡನೆ ತಿಳಿಯೆ ಮೋಕ್ಷಂ |
ಸಂಭೂತಿಯಿಂ, ಮೃತ್ಯು ತರಣಂ ವಿನಾಶದಿಂ || ೧೪ ||

ಹಿಂದಿನ ಮೂರು ಮಂತ್ರಗಳಲ್ಲಿರುವ ವಿದ್ಯಾವಿದ್ಯ ಪದಗಳ ಸ್ಥಾನಗಳಲ್ಲಿ ಸಂಭೂತಿ, ಅಸಂಭೂತಿ ಅಥವಾ ವಿನಾಶ ಎಂಬ ಪದಗಳು ಈ ಮೂರು ಮಂತ್ರಗಳಲ್ಲಿವೆ. ಸಂಭೂತಿಯು ವಿದ್ಯೆಗೂ, ಅಸಂಭೂತಿಯು ಅವಿದ್ಯೆಗೂ ಸಂಬಂಧಪಟ್ಟಿದೆಯೆಂಬುದು ಸ್ಪಷ್ಟ. 'ಸಂಭೂತಿಂ ಚ ಸಮಸ್ತಸ್ಯ ಜಗತಃ ಸಂಭವೈಕ ಹೇತುಂ ಚ ಪರಬ್ರಹ್ಮ; ವಿನಾಶಂ ಚ ವಿನಾಶೀ ಚ ಶರೀರಂ" ಎಂದು ಉವಟಾಚಾರ್ಯರ ಭಾಷ್ಯದಲ್ಲಿ ಹೇಳಿರುವುದು ಸರಿ ಹೋಗುತ್ತದೆ. ಸಂಭೂತಿ ಎಂದರೆ ಪರಬ್ರಹ್ಮನಿಗೆ ಸಂಬಂಧಿಸಿದುದು ವಿದ್ಯೆ ಅರ್ಥಾತ್ ಅರಿವು ; ಅಸಂಭೂತಿ ಅಥವಾ ವಿನಾಶವೆಂದರೆ ಶರೀರಕ್ಕೆ ಸಂಬಂಧಿಸಿದದು ಅವಿದ್ಯೆ ಅರ್ಥಾತ್ ಆಚಾರ. ದೇಹವೆಂಬುದು ದೇವಾಲಯ; ಈ ಗೃಹದಲ್ಲಿ ರಾಗದ್ವೇಷಾದಿ ಕಶ್ಮಲನ್ನು ತುಂಬಿದರೆ ಅದರಲ್ಲಿ ದೇವನಿರಲಾರನು ; ಇದೇ ತಮಸ್ಸಿನಿಂದ ತುಂಬಿದ ನರಕವಾಗುವುದು. ಭಕ್ತಿ ಪ್ರೇಮ ಅರಿವು ಆಚಾರಗಳಿಂದ ದೇಹವೆಂಬ ದೇವಾಲಯವು ಅಲಂಕೃತವಾದರೆ ಅದರಲ್ಲಿಯೇ ಜೀವನ್ಮುಕ್ತಿ ದೊರೆಯುವುದು. ಇದೇ ಅಮೃತತತ್ವ. ಬಸವಣ್ಣನವರು "ಎನ್ನ ಕಾಲೇ ಕಂಭ, ದೇಹವೇ ದೇಗುಲ, ಸಿರ ಹೊನ್ನಕಳಸವಯ್ಯಾ" ಎಂದಿರುವರು. ದೇವನನ್ನು ಮರೆದು ದೇಹವನ್ನೇ ಪೋಷಿಸಿದರೆ ಇಹಲೋಕದ ಸುಖದ ಆಭಾಸವಾದರೂ ಉಂಟು; ಆದರೆ ದೇಹವನ್ನು ದಂಡಿಸಿ ದೇವನನ್ನು ನೆನೆವೆನೆಂದರೆ ಏಣಿಯನ್ನು ಮುರಿದು ಅಟ್ಟವನ್ನು ಹತ್ತಲೆತ್ನಿಸುವವನ ಗತಿಯಾಗುವುದು ; ಆಗ ಇಹವೂ ಇಲ್ಲ, ಪರವೂ ಇಲ್ಲ. ಆದುದರಿಂದ ಇಂತಹವರು ಹೆಚ್ಚು ತಮಸ್ಸಿಗೊಳಗಾಗುವರೆನ್ನಬಹುದು.

ಶ್ರೀ ಶಂಕರಾಚಾರ್ಯರು "ಸಂಭೂತ್ಯಾಂ ಕಾರ್ಯಬ್ರಹ್ಮಣಿ ಹಿರಣ್ಯಗರ್ಭಾಖ್ಯೇ" ಎಂದೂ, "ಅಸಂಭೂತಿಃ ಪ್ರಕೃತಿಃ" ಎಂದೂ ಅರ್ಥ ಮಾಡಿದ್ದಾರೆ. ಸಂಭೂತಿ ಎಂಬ ಪದವಲ್ಲಿ ಅಕಾರಲೋಪವಿದ್ದಂತೆ ಓದಿಕೊಳ್ಳಬೇಕೆಂದಿದ್ದಾರೆ. ವೇದಾಂತದೇಶಿಕರು ಸಂಭೂತಿಯೆಂದರೆ ಬ್ರಹ್ಮ

ಪ್ರಾಪ್ತಿಯೆಂದೂ, ಅಸಂಭೂತಿಯೆಂದರೆ ಬ್ರಹ್ಮಪ್ರಾಪ್ತಿಗೆ ಪ್ರತಿಬಂಧಕವಾದ ವಿನಾಶವೆಂದೂ ಅರ್ಥ ಮಾಡಿರುವರು. ಶ್ರೀಮಧ್ವಾಚಾರ್ಯರು ಸಂಭೂತಿ ಯೆಂದರೆ ಪರಮಾತ್ಮನ ಸೃಷ್ಟಿ ಕರ್ತೃತ್ವವೆಂದೂ, ವಿನಾಶ (ಅಸಂಭೂತಿ) ಎಂದರೆ ಪರಮಾತ್ಮನ ಸಂಹಾರ ಕರ್ತೃತ್ವವೆಂದೂ ಅರ್ಥ ಮಾಡಿರುವರು. ಈ ಅರ್ಥಗಳು ೧೧ನೆಯ ಮಂತ್ರಕ್ಕೆ ಹೊಂದಿಸಲಾಗುವುದಿಲ್ಲವೆಂದು ಹೇಳ ಬೇಕಾಗಿಯೇ ಇಲ್ಲ.

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।
ತತ್ ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥ ೧೫ ॥

ಅರ್ಥ—ಸತ್ಯಸ್ಯ ಮುಖಂ-ಪರಬ್ರಹ್ಮನ ಮುಖವು, ಹಿರಣ್ಮಯೇನ ಪಾತ್ರೇಣ-ಹಿರಣ್ಮಯವಾದ ಪಾತ್ರೆಯಿಂದ, ಅಪಿಹಿತಂ-ಮುಚ್ಚಿರುತ್ತದೆ; ಪೂಷನ್-ಎಲೈ ಪೂಷನೆ, ತತ್-ಅದನ್ನು, ತ್ವಂ-ನೀನು, ಸತ್ಯಧರ್ಮಾಯ-ಸತ್ಯಧರ್ಮನಾದ ನನಗೆ, ದೃಷ್ಟಯೇ-ಕಾಣುವುದಕ್ಕಾಗಿ, ಅಪಾವೃಣು-ತೆರೆಯುವನಾಗು.*

ಪದ್ಯಾನುವಾದ

ಸತ್ಯಮುಖಮಪಿಹಿತಂ ಹಿರಣ್ಮಯ ಪಾತ್ರೆಯಿಂ ।
ಸತ್ಯಧರ್ಮನ ದರ್ಶನಕೆ ಪೂಷ ತೆರೆಯುದಂ ॥

ಶ್ರೀಕರಭಾಷ್ಯದಲ್ಲಿ "ಸೌರಮಂಡಲ ಮಧ್ಯಸ್ಥಂ ಸಾಂಬಂ" ಎಂದು ಮೊದಲಾಗುವ ಸ್ಮೃತ್ಯಾಧಾರಗಳನೇಕವನ್ನು ಕೊಟ್ಟಿದೆ. ಪದ್ಮಪುರಾಣದಲ್ಲಿ ಸೂರ್ಯನನ್ನು "ರುದ್ರವಪುಷ"ನೆಂದು ವರ್ಣಿಸಿದೆ. ಆದುದರಿಂದ ಪರಶಿವ ಬ್ರಹ್ಮವು ಸೂರ್ಯಮಂಡಲ ಮಧ್ಯಸ್ಥವಾದುದಾಗಿ ಹಿರಣ್ಮಯ ಪಾತ್ರೆ

---

ಶಾಂಕರ ಭಾಷ್ಯಾಧಾರ

*ಸತ್ಯಧರ್ಮಾಯ-ತವ ಸತ್ಯಸ್ಯ ಉಪಾಸನಾತ್ ಸತ್ಯಂ ಧರ್ಮೋ ಯಸ್ಯ ಸೋಽಹಂ ಸತ್ಯಧರ್ಮಾ.

ಯಿಂದ ಮುಚ್ಚಲ್ಪಟ್ಟಿದೆ ಎನ್ನಬಹುದು. ಆದರೆ "ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ" ಎಂಬುದು "ತುಚ್ಛೇನಾಭ್ವಪಿಹಿತಂ" ಎಂಬುದನ್ನು ಜ್ಞಾಪಕಕ್ಕೆ ತರುತ್ತದೆ. ನಾಸದೀಯ ಸೂಕ್ತದಲ್ಲಿರುವ "ತುಚ್ಛೇನ ಆಭು ಅಪಿಹಿತಂ" ಎಂಬ ಪದಗಳಿಗೆ ತಿಲಕರ ಗೀತಾರಹಸ್ಯದಲ್ಲಿ ಅರ್ಥ ಮಾಡಿರುವಂತೆ--ಆಭು ಎಂದರೆ ಪರಬ್ರಹ್ಮವು, ತುಚ್ಛೇನ ಎಂದರೆ ಮಾಯಾಶಕ್ತಿಯಿಂದ, ಅಪಿಹಿತಂ ಎಂದರೆ ಮುಚ್ಚಲ್ಪಟ್ಟದೆ—ಎಂದು ಅರ್ಥ ವಾಗುತ್ತದೆ. ಇಲ್ಲಿಯೂ ಪರಬ್ರಹ್ಮವು ಹಿರಣ್ಮಯ ಪಾತ್ರೆಯೆಂದರೆ ಮನೋಹರವಾದ ಜಗತ್ತಿನಿಂದ ಮುಚ್ಚಲ್ಪಟ್ಟದೆ ಎಂದಾಗುವುದು. ಅರ್ಥಾತ್ ಪರಬ್ರಹ್ಮವು ಚರಾಚರಾತ್ಮಕವಾದ ಪ್ರಪಂಚದಲ್ಲಿ ಅಂತರ್ಯಾಮಿ ಯಾಗಿದೆ ಎನ್ನಬಹುದು. ಪರತತ್ತ್ವವು ಅಂತರ್ಯಾಮಿಯಾಗಿ ತೆರೆಯ ಮರೆಯಲ್ಲಿರುವುದನ್ನು ಶರಣರು ಹೀಗೆ ವರ್ಣಿಸಿದ್ದಾರೆ.

ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯಲಡಗಿರ್ದ ಮಿಂಚಿ ನಂತೆ, ಬಯಲ ಮರೆಯೊಳಡಗಿರ್ದ ಮರೀಚಿಯಂತೆ ಕಂಗಳ ಮರೆಯೊಳಡ ಗಿರ್ದ ಬೆಳಗಿನಂತೆ ನಿಮ್ಮ ನಿಲುವು ಗುಹೇಶ್ವರಾ.

ಜಗತ್ತಿನ ಮೋಹವೆಂಬ ತೆರೆಯು ತೆರೆಯಲು ಈಶ್ವರಾನುಗ್ರಹವು ಬೇಕಾಗು ವುದರಿಂದ ಅಂತಹ ತೆರೆಯನ್ನು ತೆರೆಯಬೇಕೆಂಬ ಪ್ರಾರ್ಥನೆ ಈ ಮಂತ್ರ ದಲ್ಲಿದೆ.

**ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್ ।**
**ಸಮೂಹ ತೇಜೋ ಯತ್ತೇರೂಪಂ ಕಲ್ಯಾಣತಮಂ ತತ್ತೇಪಶ್ಯಾಮಿ ।**
**ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥ ೧೬ ॥**

ಅರ್ಥ—ಪೂಷನ್ ಏಕರ್ಷೇ ಯಮ ಸೂರ್ಯ ಪ್ರಾಜಾಪತ್ಯ-ಪೂಷ ಏಕರ್ಷಿ, ಯಮ, ಸೂರ್ಯ, ಪ್ರಾಜಾಪತ್ಯ ಎಂಬ ಹೆಸರುಳ್ಳವನೆ, ವ್ಯೂಹ ರಶ್ಮೀನ್-ರಶ್ಮಿಗಳನ್ನು ಬದಿಗಿರಿಸು; ತೇಜಃ ಸಮೂಹ-ತೇಜಸ್ಸನ್ನು ಒಟ್ಟು ಗೂಡಿಸು. ತೇ-ನಿನ್ನ, ಕಲ್ಯಾಣ ತಮಂ-ಅತ್ಯಂತ ಮಂಗಳಕರವಾದ, ರೂಪಂ-ರೂಪವು, ಯತ್-ಯಾವುದೋ, ತತ್-ಅದನ್ನು, ಪಶ್ಯಾಮಿ-

ನೋಡುತ್ತೇನೆ. ಯೋಸಾವ ಸೌಪುರುಷಃ-ಯಾವನವ ಪುರುಷನಿರುವನೋ, ಸೋಹಮಸ್ಮಿ-ಅವನೇ ನಾನು.

ಪದ್ಯಾನುವಾದ—

ಯಮ ಪ್ರಾಜಾಪತ್ಯ ಪೂಷ ಸೂರ್ಯೈಕರ್ಷಿ ।
ಅಮಿತ ರಶ್ಮಿಯಂ ಸರಿಸಿಯುಪಸಂಹರಿಸು, ತೇ ।
ಜಮಂ; ತವ ಕಲ್ಯಾಣ ತಮ ರೂಪಮಂ ನೋಳ್ಪೆ ।
ನಮಲಮದು ; ಪುರುಷನಾವನವನೋ ಆನವಂ ॥ ೧೬ ॥

ಪೂಷನೇ ಮೊದಲಾದ ಹೆಸರುಗಳೆಲ್ಲ ದೇವನೊಬ್ಬನವೆ. "ಏಕಂ ಸದ್ವಿಪ್ರಾ ಬಹುಧಾ ವದಂತಿ" ಎಂಬ ಶ್ರುತಿಯಿದೆ. "ದೇವನೊಬ್ಬ ನಾಮ ಹಲವು" ಎಂದು ವಚನವಾಙ್ಮಯವು ಹೇಳುತ್ತದೆ. ಯಮ ಸೂರ್ಯ ಮೊದಲಾದ ಹೆಸರುಗಳು ಒಬ್ಬ ದೇವನವೆ. ಆ ದೇವನು ಮಹಾ ತೇಜಸ್ವಿ; ಕಣ್ಣು ಕುಕ್ಕುವಷ್ಟು ತೇಜಃಪುಂಜ ಅವನದು—

ನಿಮ್ಮ ತೇಜವ ನೋಡಲೆಂದು ತೊರಸಾರಿ ನೋಡುತ್ತಿರಲು, ಶತಕೋಟಿ ಸೂರ್ಯರು ಮೂಡಿದಂತೆ ಇದ್ದುದಯ್ಯಾ! ಮಿಂಚಿನ ಬಳ್ಳಿಯು ಸಂಚವ ಕಂಡೊಡೆ ಎನಗೆ ಸೋಜಿಗವಾಯಿತ್ತು. ಗುಹೇಶ್ವರಾ ನೀನು ಜ್ಯೋತಿರ್ಲಿಂಗ ವಾದೊಡೆ ಉಪಮಿಸಿ ನೋಡಬಲ್ಲವರಿಲ್ಲವಯ್ಯಾ!

ಜೀವನಾದರೂ ಆ ಮಹಾ ಬೆಳಗಿನ ಕಿರಣ ತಾನೆ. ಆ ಬೆಳಗಿನೊಳಗೆ ಈ ಬೆಳಗು ಸೇರಲು ಒಂದೇ ಬೆಳಗು ಆಗುವುದು—

ಸ್ಫಟಿಕದ ಘಟದೊಳಗೆ ಎತ್ತಿದ ಜ್ಯೋತಿ ಒಳ ಹೊರಗೊಂದೇ ಸ್ವಯವಾಗಿ ಪ್ರಜ್ವಲಿಸುವಂತೆ, ಎನ್ನೊಳಗಿಪ್ಪ ತನು ಹೊರಗಿಪ್ಪ ತನು ಒಂದೇ ವಸ್ತುವೆಂದು ಆದ್ಯಂತವ ಕಾಣಬಂದಿತ್ತು ನೋಡಾ. ಆ ಪರಶಿವತತ್ತ್ವವೇ ಶರಣನು ತಾನೇ ನೋಡಾ. ಬೇರೊಂದು ಸ್ವರೂಪವಲ್ಲ ಕಣಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ಪರಮಾತ್ಮ ಸಾಕ್ಷಾತ್ಕಾರವಾಗಲು "ಸೋಹಮಸ್ಮಿ"—ಅವನೇ

ನಾನು ಎಂಬ ಅರಿವುಂಟಾಗುವುದು. "ಸೋಹಮಸ್ಮಿ" ಎಂಬುದು "ತತ್ತ್ವಮಸಿ"ಯ ಹಾಗೆ ಒಂದು ಮಹಾವಾಕ್ಯ. ಜಲದಲ್ಲಿ ಜಲ ಬೆರದಂತೆ, ಅಗ್ನಿಯಲ್ಲಿ ಅಗ್ನಿ ಬೆರೆದಂತೆ, ಶಿವನಲ್ಲಿ ಶಿವಾಂಶನಾದ ಜೀವನು ಬೆರೆದು ಅವಿಭಾಗನಾಗುವನು. ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದಂತೆ :

ಜಲೇಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ |
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ||

ವಚನವಾಙ್ಮಯದಲ್ಲಿ ಹೇಳಿದಂತೆ :

ಗಾಳಿಯಲ್ಲಿ ತೋರಿದ ಸುಳಿಗಾಳಿಯಡಗುವುದಕ್ಕೆ ಗಾಳಿಯೇ ಆಶ್ರಯವಲ್ಲದೆ ಮತ್ತೆ ಬೇರೆ ಆಶ್ರಯವುಂಟೆ ಅಯ್ಯಾ? ಅಗ್ನಿಯಲ್ಲಿ ತೋರಿದ ಕಿಡಿಗಳಡಗುವುದಕ್ಕೆ ಅಗ್ನಿಯೇ ಆಶ್ರಯವಲ್ಲದೆ ಮತ್ತೆ ಬೇರೆ ಉಂಟೇ ಅಯ್ಯಾ? ಆದಿ ಅನಾದಿಯಿಂದತ್ತತ್ತವಾದ ಪರವಸ್ತುವಿನಲ್ಲಿ ರೂಪಿಸಿ ತೋರಿದ ನಿಜೈಕ್ಯವಡಗುವುದಕ್ಕೆ ಆ ಪರವಸ್ತುವೇ ಆಶ್ರಯವಲ್ಲದೆ ಮತ್ತೆ ಬೇರೆ ಆಶ್ರಯವುಂಟೇ? ಅಖಂಡೇಶ್ವರಾ.

ವಾಯುರನಿಲಮಮೃತಮಥೇದಂ ಭಸ್ಮಾಂತಗ್ಂ ಶರೀರಂ |
ಓಂ ಕ್ರತೋಸ್ಮರ ಕೃತಗ್ಂ ಸ್ಮರ ಕ್ರತೋಸ್ಮರ ಕೃತಗ್ಂಸ್ಮರ ||೧೭||

ಅರ್ಥ—ವಾಯುಃ-ವಾಯುವು, ಅಮೃತಂ-ಸಾವಿಲ್ಲದ, ಅನಿಲಂ-ವಾಯುವನ್ನು ಸೇರಲಿ), ಅಥ-ಆಮೇಲೆ, ಇದಂ ಶರೀರಂ-ಈ ಶರೀರವು, ಭಸ್ಮಾಂತಗ್ಂ-ಭಸ್ಮಾಂತವಾಗಲಿ, ಓಂ ಕ್ರತೋಸ್ಮರ-ಓಂಕ್ರತುವೇ ಸ್ಮರಿಸು, ಕೃತಂ-ಮಾಡಿದುದನ್ನು, ಸ್ಮರ-ಸ್ಮರಿಸು, ಕ್ರತೋಸ್ಮರ-ಕ್ರತುವೇ ಸ್ಮರಿಸು, ಕೃತಂ ಸ್ಮರ-ಮಾಡಿದುದನ್ನು ಸ್ಮರಿಸು.

ಪದ್ಯಾನುವಾದ—

ತನು ಭಸ್ಮಕಮಸ್ಮೃತಾನಿಲಕೆ ಸೇರ್ವುದು ಜೀವಂ |
ನೆನೆ, ಓಂ ಕ ತು ಕೃತವಂ ನೆನೆ, ಓಂ ಕ್ರತು(ಕೃತವಮಂ ||

ನೂರು ವರ್ಷಗಳವರೆಗೂ ನಿಷ್ಕಾಮಕರ್ಮಗಳನ್ನು ಮಾಡುತ್ತ ಬದುಕಿರಬೇಕೆಂದು ಇಚ್ಛಿಸಬೇಕೆಂದೂ, ಈ ಮಧ್ಯೆ ಆತ್ಮಘಾತಕವನ್ನು ಮಾಡಿಕೊಳ್ಳುವುದು ನರಕಕ್ಕೆ ಹೇತುವೆಂದು ಈಶಾವಾಸ್ಯದ ಎರಡು ಮೂರನೆಯ ಮಂತ್ರಗಳಲ್ಲಿ ಹೇಳಿದೆಯಷ್ಟೆ. ಸಾಯುವವರೆಗೂ ನಿಷ್ಕಾಮಕರ್ಮವನ್ನು ಮಾಡಿ, ಸಾಯುವಾಗ ಕೊನೆಯ ಮಂತ್ರದಲ್ಲಿ ಹೇಳಿದಂತೆ ಮುಂದಿನ ಮಾರ್ಗದಲ್ಲಿ ಒಯ್ಯುವ ಅಗ್ನಿಯನ್ನು ಸುಪಥದಲ್ಲಿ ಒಯ್ಯಲೆಂದು ತಾವು ಮಾಡಿರುವ ನಿಷ್ಕಾಮಕರ್ಮವನ್ನು ಮರೆಯದಿರಲೆಂಬ ಪ್ರಾರ್ಥನೆ ಈ ಮಂತ್ರದಲ್ಲಿದೆ. ಈಶಾವಾಸ್ಯೋಪನಿಷತ್ತು ನಿಷ್ಕಾಮಕರ್ಮವನ್ನು ಬೋಧಿಸುವುದೇ ಹೊರತು ಸಂನ್ಯಾಸಮಾರ್ಗವಲ್ಲವೆಂಬುದು ಈ ಮಂತ್ರದಿಂದಲೂ ವ್ಯಕ್ತವಾಗುತ್ತದೆ—

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ವಿಶ್ವಾನಿ ದೇವ ವಯುನಾನಿ ವಿದ್ವಾನ್ ।
ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥ ೧೮ ॥

ಅರ್ಥ—ಅಗ್ನೇ-ಅಗ್ನಿಯೇ, ಅಸ್ಮಾನ್-ನಮ್ಮನ್ನು, ಸುಪಥಾ-ಒಳ್ಳೆಯ (ಎಂದರೆ ಅರ್ಚಿರಾದಿ) ಮಾರ್ಗದಲ್ಲಿ, ರಾಯೇ-ಮೋಕ್ಷಧನಕ್ಕಾಗಿ, ನಯ-ಒಯ್ಯುವನಾಗು, ವಿಶ್ವಾನಿ ವಯುನಾನಿ ವಿದ್ವಾನ್-ಎಲ್ಲ ಕರ್ಮಗಳನ್ನು ಬಲ್ಲವನಾದ, ದೇವ-ದೇವನೆ, ಅಸ್ಮತ್ ಜುಹುರಾಣಮೇನಂ-ನಮ್ಮ ಕುಟಿಲ ಪಾಪಗಳನ್ನು, ಯುಯೋಧಿ-ಬಿಡಿಸು, ತೇ-ನಿನಗೆ, ಭೂಯಿಷ್ಠಾಂ-ಬಹಳ, ನಮ ಉಕ್ತಿಂ-ನಮಸ್ಕಾರದ ನುಡಿಗಳನ್ನು, ವಿಧೇಮ-ಹೇಳುತ್ತೇನೆ.

ಪದ್ಯಾನುವಾದ—

ಸರ್ವೇಶ ನಡಸಗ್ನಿ ಧನದತ್ತ ಸುಪಥದೊಳ್ ।
ಸರ್ವ ಕರ್ಮಜ್ಞ, ಕಳೆ ಪಾಪಮಂ ನಮಿಸುವೆಂ ॥ ೧೮ ॥

ಮೋಕ್ಷಾರ್ಥಿಯಾಗಿ, ಮರಣಶಯ್ಯೆಯಲ್ಲಿರುವವನು ಸರ್ವಕರ್ಮಜ್ಞನಾದ ಅಗ್ನಿಯನ್ನು ಕುರಿತು ಮಾಡುವ ಪ್ರಾರ್ಥನೆಯಿದು ಉಪನಿಷತ್ತಿನ

ಉಪಸಂಹಾರದಲ್ಲಿದೆ. ಉಪಕ್ರಮದ ಮೂರು ಮಂತ್ರಗಳಲ್ಲಿಯೂ ನಿಷ್ಕಾಮ ಕರ್ಮವನ್ನು ಯಾವಜ್ಜೀವವೂ ಮಾಡಬೇಕೆಂದು ಒತ್ತಿ ಹೇಳಿದೆ. ನಾಲ್ಕೈದನೆಯ ಮಂತ್ರದಲ್ಲಿ ಪರಮಾತ್ಮನ ವಿಷಯದ ಜ್ಞಾನದ ಉಪದೇಶವನ್ನು ಮಾಡಿ, ಆರೇಳನೆಯ ಮಂತ್ರಗಳಲ್ಲಿ ಪರಮಾತ್ಮನ ಅರಿವಿನಿಂದ ಸರ್ವಭೂತಾತ್ಮನಾದವನು ಎಲ್ಲೆಲ್ಲಿಯೂ ಏಕತ್ವವನ್ನೇ ನೋಡುತ್ತ ಶೋಕ ಮೋಹರಹಿತನಾಗಿರುವವನ ಅರಿವಿಗೆ ತಕ್ಕ ಆಚರಣೆಯಿರುವ ಆಚಾರ ಮಾರ್ಗವನ್ನು ದರ್ಶನ ಮಾಡಿದೆ. ಸರ್ವಜ್ಞನಾದ ಪರಮಾತ್ಮನೂ ಸೃಷ್ಟಿ ಸ್ಥಿತಿ ಲಯ ಕರ್ಮದಲ್ಲಿ ನಿರತನಾಗಿರುವುದನ್ನು ಹೇಳಿದೆ.–ಹೀಗೆ ಅರಿವು ಆಚಾರಗಳ ಸಮನ್ವಯವನ್ನು ಉಪನಿಷತ್ತು ಹೇಳುತ್ತಿರುವ ಅಭ್ಯಾಸವು ಕಂಡುಬರುವುದು. ೯ರಿಂದ ೧೧ನೆಯ ಮಂತ್ರಗಳಲ್ಲಿ ಅವಿದ್ಯೆ ಎಂದರೆ ಆಚರಣೆಗೆ ವಿದ್ಯೆಗಿಂತ ಎಂದರೆ ಅರಿವಿಗಿಂತ ಹಿರಿಮೆಯನ್ನು ಹೇಳಿ ಕರ್ಮದ ಮಹತ್ವವನ್ನು ತೋರಿಸುವುದರಲ್ಲಿ ಅಪೂರ್ವತೆಯಿದೆ. ಮುಂದಿನ ಮೂರು ಮಂತ್ರಗಳಲ್ಲಿಯೂ (೧೨-೧೪) ಇಹಲೋಕದ ಜೀವನಕ್ಕೆ ಕೊಟ್ಟಿರುವ ಹಿರಿಮೆಯ ವಿಷಯದಲ್ಲಿಯೂ ಇದೇ ಮಾತನ್ನು ಹೇಳಬೇಕಾಗುವುದು. ಇನ್ನು ೧೫ ಮತ್ತು ೧೬ನೆಯ ಮಂತ್ರದಲ್ಲಿ ಮೋಕ್ಷಪ್ರಾಪ್ತಿಯ ಫಲವನ್ನು ಹೇಳಿದೆ. ಮರಣಶಯ್ಯೆಯಲ್ಲಿರುವನ ಪ್ರಾರ್ಥನೆಯಲ್ಲಿ ಅನುಷಂಗಿಕವಾಗಿ ಕರ್ಮದ ಅವಶ್ಯಕತೆಯು ಸೂಚಿತವಾಗಿರುವುದು ಅರ್ಥವಾದವೆನ್ನಬಹುದು. ಇದರಲ್ಲಿಯೂ ಕರ್ಮದ ಹಿರಿಮೆಯು ಕಂಡುಬರುವುದು. ಒಟ್ಟಿನಲ್ಲಿ ಮೊದಲಿನಿಂದ ಕೊನೆಯವರೆಗೂ ಉಪನಿಷತ್ತಿನ ಉಪಪತ್ತಿ ಎಂದರೆ ಉಪಪಾದನೆ (line of argument) ಯಲ್ಲಿಯೂ ಅರಿವು ಆಚಾರಗಳ ಸಮನ್ವಯವೇ ಉಪನಿಷತ್ತಿನ ತಾತ್ಪರ್ಯವೆಂಬುದು ಸಿದ್ಧಾಂತವಾಗುತ್ತದೆ—

ಉಪಕ್ರಮೋಪಸಂಹಾರೌ ಅಭ್ಯಾಸೋಽಪೂರ್ವತಾ ಫಲಂ |
ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯ ನಿರ್ಣಯೇ ||

ಇಲ್ಲಿ ಕಂಡ ಷಡ್ಲಿಂಗಗಳಿಗನುಸಾರವಾದ ಈಶಾವಾಸ್ಯೋಪನಿಷತ್ತಿನ ತಾತ್ಪರ್ಯವೇನೆಂದರೆ__

ಅಂತರಂಗದ ಅರಿವು, ಬಹಿರಂಗದ ಕ್ರಿಯೆ, ಈ ಉಭಯಸಂಪುಟ

ಒಂಪಾದ ಶರಣಂಗೆ ಹಿಂಗಿತ್ತು ತನುಸೂತಕ ಹಿಂಗಿತ್ತು ಮನಸೂತಕ ಕೂಡಲ ಚೆನ್ನಸಂಗಯ್ಯನಲ್ಲಿ ಸಂಗವಾದುದು ಸರ್ವೇಂದಿಯ.

ತಾತ್ಪರ್ಯ ನಿರ್ಣಯ ಮಾಡುವವರು ಗಮನಿಸಬೇಕಾದ ವಿಷಯ ವೊಂದಿದೆ. ಶ್ರೀ ಶಂಕರಾದಿ ಆಚಾರ್ಯರು ಲೋಕಮಾನ್ಯ ತಿಲಕರ ಗೀತಾ ರಹಸ್ಯದಲ್ಲಿ ಹೇಳಿದಂತೆ 'ತಮ್ಮ ಸಂಪ್ರದಾಯಗಳಿಗೆ ಅನುಕೂಲವಾದ ವಚನಗಳಷ್ಟೇ ಪ್ರಧಾನವಾಗಿವೆಯೆಂದು, ಮಿಕ್ಕವುಗಳು ಗೌಣವಾಗಿವೆ ಯೆಂದು ಎಣಿಸಿ, ಅಥವಾ ಪ್ರತಿಕೂಲವಾದ ವಚನಗಳ ಅರ್ಥವನ್ನು ಯುಕ್ತಿ ಪ್ರಯುಕ್ತಿಗಳಿಂದ ತಿರುಗಿಸಿ, ಇಲ್ಲವೇ ಸಾಧಿಸಿದಲ್ಲಿ ಸುಲಭ ಮತ್ತು ಸರಳವಾದ ವಚನಗಳಿಂದಲೇ ತಮಗೆ ಅನುಕೂಲವಾದ ಶ್ಲೋಕಾರ್ಥವನ್ನೂ ಅನುಮಾನಗಳನ್ನೂ ಹಿಂಡಿ ತೆಗೆದು, ಆ ಗ್ರಂಥದಿಂದ ತಮ್ಮ ಸಂಪ್ರದಾ ಯವೇ ಸಿದ್ಧಾಂತವಾಗುತ್ತೆಂದು ಭಿನ್ನಾಭಿಪ್ರಾಯವನ್ನು ಪ್ರತಿಪಾದಿಸು ತ್ತಾರೆ. ಆದರೆ ಯಾವುದೊಂದು ಗ್ರಂಥದ ತಾತ್ಪರ್ಯವನ್ನು ಈ ರೀತಿಯಲ್ಲಿ ನಿರ್ಣಯಿಸುವುದಕ್ಕೂ ಮತ್ತು ತಮ್ಮ ಸಂಪ್ರದಾಯವೇ.... ಪ್ರತಿಪಾದ್ಯ ವಾಗಿರಬೇಕೆಂಬ ಆಗ್ರಹವನ್ನಾಗಲೇ ಮಿಕ್ಕ ಯಾವತರ ಅಭಿಮಾನ ವನ್ನಾಗಲೀ ಹಿಡಿಯದೆ ಸಮಗ್ರ ಗ್ರಂಥದ ಸಮೀಕ್ಷಣವನ್ನು ಮೊದಲು ಸ್ವತಂತ್ರವಾಗಿ ಮಾಡಿ ಅದರ ಮಥಿತಾರ್ಥವನ್ನು ತೆಗೆಯುವುದಕ್ಕೂ ಸ್ವಾಭಾವಿಕವಾಗಿ ಮಹದಂತರ ವಿರುವುದು". ಮಾನ್ಯರಾಧಾಕೃಷ್ಣನ್ನರು "They develop their interpretalious in the light of the.r own preconceived opinions" ಎಂದಿದ್ದಾರೆ. ಆದುದರಿಂದ ಆಚಾರ್ಯರ ಸಿದ್ಧಾಂತವು ಎಷ್ಟರಮಟ್ಟಿಗೆ ಅವರು ಭಾಷ್ಯ ಬರೆದಿರುವ ಉಪನಿಷತ್ತಿನಿಂದ ಸಮರ್ಥನೆಯನ್ನು ಪಡೆಯುತ್ತ ದೆಂಬುದನ್ನು ವಿಚಾರಮಾಡಬೇಕೇ ಹೊರತು, ಆ ಉಪನಿಷತ್ತಿನ ತಾತ್ಪರ್ಯ ನಿರ್ಣಯವನ್ನು ಅವರ ಭಾಷ್ಯದಲ್ಲಿ ನಿರೀಕ್ಷಿಸಬಾರದು. ಆದರೆ ಆಚಾರ್ಯ ರುಗಳ ಭಾಷ್ಯಗಳು ಉಪನಿಷತ್ತುಗಳ ಅರ್ಥವನ್ನು ತಿಳಿಯಲು ಅತ್ಯಂತ ಸಹಾಯಕವಾಗಿವೆಯೆಂಬುದನ್ನು ಮರೆಯಬಾರದು.

# ಕೇನೋಪನಿಷತ್ತಿನಲ್ಲಿ ಪ್ರತಿಬೋಧ

ದಶೋಪನಿಷತ್ತುಗಳಲ್ಲಿ ಮೊದಲನೆಯದಾಗಿ ಎಣಿಸಲ್ಪಡುವ ಈಶ ಕೇನೋಪನಿಷತ್ತುಗಳು ಉಪದೇಶಿಸುವುದು ಪರಾತ್ಪರ ವಿಷಯವೇ ಆದರೂ, ಒಂದೇ ನಾಣ್ಯದ ಎರಡು ಮುಖಗಳಂತೆ, ಪರಾತ್ಪರ ವಿಷಯದ ಬೇರೆ ಬೇರೆ ಮುಖಗಳು ಆ ಉಪನಿಷತ್ತುಗಳಲ್ಲಿ ಪ್ರದರ್ಶಿಸಲ್ಪಡುತ್ತವೆ. ಪರಮಾತ್ಮನ ವಿಷಯದಲ್ಲಿ ಈಶೋಪನಿಷತ್ತು ಜ್ಞಾನದಾನವನ್ನು ಮಾಡುವುದಲ್ಲದೆ ಹಾಗೆ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡವನು ಈ ಜಗತ್ತಿನಲ್ಲಿ ಹೇಗೆ ಶೋಕ ಮೋಹಗಳನ್ನು ಕಳೆದುಕೊಂಡು, ಸರ್ವ ಭೂತಾತ್ಮ ಭೂತಾತ್ಮನಾಗಿ ಫಲಾಪೇಕ್ಷೆಯಿಲ್ಲದೆ ಕರ್ಮ ಮಾಡುತ್ತ, ಜೀವನ್ಮುಕ್ತನಾಗಿ ತನ್ನ ಪೂರ್ಣಾಯಸ್ಸನ್ನು ಕಳೆಯುವನು ಎಂಬುದನ್ನು ತಿಳಿಸುತ್ತದೆ. ಕೇನೋಪನಿಷತ್ತು ಆ ಪರಮಾತ್ಮನ ಜ್ಞಾನವಾಗುವುದು ಹೇಗೆ ಎಂಬ ವಿಚಾರವನ್ನು ಮಾಡುವುದು. ಪರಮಾತ್ಮನ ಜ್ಞಾನವಾದವರೂ ಅದು ಹೇಗಿದೆಯೆಂಬುದನ್ನು ಹೇಳಲಾಗುವುದೇ ?—ಎಂದರೆ, ವಚನಕಾರರು ಹೇಳುವಂತೆ ಪರಮಾತ್ಮಾನುಭವವು "ಶಿಶು ಕಂಡ ಕನಸಿನಂತೆ", "ಮೂಕ ಸವಿದ ಸಕ್ಕರೆಯಂತೆ" ನುಡಿಗೆ ನಿಲುಕದುದೇ ಆಗಿದೆ. ಜಪಾನಿನಲ್ಲಿ ಪ್ರಚಲಿತವಾಗಿರುವ ಜೆನ್ ಬೌದ್ಧಧರ್ಮದಂತೆ ಬುದ್ಧನು ಹೇಳಿದನೆಂಬುದನ್ನು ಹೀಗೆ ಕನ್ನಡಿಸಬಹುದು—

"ತಿಳಿಸಿರಿ ಅರಿಯಬಯಸುವೆವು"-ಎನೆ, ಅದಿಂತೆಂದು |
ತಿಳಿಸದಿರು ; ಮೋಣದಂತಲ್ಲವೆಂದಾದೊಡಂ |
ತಿಳಿಸದಿರು ; ಇಂತಲ್ಲ-ಎಂಬುದುಂ ಸಟೆಯೆನಲ್ |
ತಿಳಿಸುವುದೆ ? ಸಂಪೂರ್ಣವಾಗದಂ ಪಡೆಯದೆಯೆ |
ತಿಳಿಸುವುದೆ ? ಸಂಪೂರ್ಣವಾಗದಂ ಪಡೆವೊಡಂ |
ಶಿಳಿಸುವಾ ವಾಹನಂ-ನುಡಿ, ಅಲ್ಲಿ ನಡೆಯದಿರೆ |

ತಿಳಿಸುವಾ ನುಡಿ, ಎಂತು ಸಾಗುವುದದಲ್ಲಿಂದೆ ? |
ತಿಳಿಸಿರೆನೆ-ಸಂಪೂರ್ಣ ಮೌನವೋ ಉತ್ತರವು |*

ನುಡಿಗೆ ನಿಲುಕದ ಪರತತ್ತ್ವ ವಿಷಯದಲ್ಲಿ ಅರಿವನ್ನುಂಟುಮಾಡುವುದು ಸುಲಭವಲ್ಲವಷ್ಟೆ. ಈ ಕ್ಲಿಷ್ಟತರ ಕಾರ್ಯವನ್ನು ಕೇನೋಪನಿಷತ್ತು ಮಾಡುತ್ತಿರುವುದರಿಂದಲೋ ಏನೋ, ಈ ಉಪನಿಷತ್ತಿಗೆ ಬ್ರಾಹ್ಮಿ ಉಪನಿಷತ್ತೆಂದು ಹೆಸರಿದೆ. ಅಲ್ಲದೆ ಈ ಉಪನಿಷತ್ತಿಗೆ ಶ್ರೀ ಶಂಕರಾಚಾರ್ಯರಿಂದ ಪದಭಾಷ್ಯ, ವಾಕ್ಯಭಾಷ್ಯ ಎಂಬ ಎರಡು ಭಾಷ್ಯಗಳು ಬರೆಯಲ್ಪಟ್ಟವೆ ; ಇತರ ಆಚಾರ್ಯರೂ ಭಾಷ್ಯಗಳನ್ನೂ ಬರೆದಿದ್ದಾರೆ. ಆದರೂ ಈ ಉಪನಿಷತ್ತಿನ ಅಭಿಪ್ರಾಯವೇನೆಂಬುದನ್ನು ತಿಳಿಯುವುದು ಕಷ್ಟ. ಪರಮಾತ್ಮನ ಅರಿವಾಗುವುದು ಹೇಗೆಂಬ ಕ್ಲಿಷ್ಟತರ ಪ್ರಶ್ನೆಗೆ ಉಪನಿಷತ್ತಿನ ಸಮಸ್ಯೆಯ ರೂಪದ ಉತ್ತರವನ್ನು ಹೀಗೆ ಕನ್ನಡಿಸಬಹುದು—

ಅರಿದವಗೆ ತಿಳಿಯದದು ಅರಿಯದವ ತಿಳಿದಿಹಂ |
ಅರಿಯೆ ಪ್ರತಿಬೋಧದೆ ಪಡೆವನಮೃತತ್ವಮಂ ||

ಪರಮಾತ್ಮನನ್ನು ಅರಿದವನಿಗೆ ಅದರ ಅರಿವಾಗಿಲ್ಲ ; ಅದರ ಅರಿವಾಗಿಲ್ಲದವನು ಅದನ್ನು ಅರಿತಿಹನು—ಎಂದು ಹೇಳಿರುವುದಕ್ಕೆ ಅರ್ಥವೇ ಆಗುವು

*Words cannot explain it. Only absolute silence can do that. The Buddha himself kept quiet when tackled on this point. He said :

When they question thee, to know what 'It' is
Do not affirm anything or deny anything
For what ever is denied is not true
How can one truly say what 'That' may be
While he himself has not fully won to what 'It' is
And after he has won, what word is there to be sent from a region
Where the chariet of speech finds no track on which to go?
Therefore to their question affer SILENCE only.

ದಿಲ್ಲ; ಇನ್ನು ಪ್ರತಿಬೋಧದಿಂದ ತಿಳಿದರೆ ಮೋಕ್ಷವನ್ನು ಪಡೆವನು ಎಂದು ಹೇಳಿರುವುದರಲ್ಲಿ ಪ್ರತಿಬೋಧವೇ ಪರಮಾತ್ಮನನ್ನು ಅರಿವ ಮಾರ್ಗವೆಂದಾಯಿತು. ಆದರೆ ಪ್ರತಿಬೋಧವೆಂದರೇನು ಎಂಬ ವಿಷಯದಲ್ಲಿ ಎಷ್ಟು ಜನರು ಈ ಉಪನಿಷತ್ತಿಗೆ ಭಾಷ್ಯವನ್ನು ಬರೆದಿದ್ದಾರೋ ಅಷ್ಟು ಭಿನ್ನಾಭಿಪ್ರಾಯಗಳಿವೆ. ಈ ಭಿನ್ನಾಭಿಪ್ರಾಯಗಳಿಗೆ ಕಾರಣವೇನೆಂದರೆ ಪ್ರತಿಯೊಬ್ಬರು ಭಾಷ್ಯಕಾರರೂ ಅವರವರ ಮತಸಿದ್ಧಾಂತಕ್ಕೆ ಅನುಸರಿಸಿ ಅವರವರ ಮತ ಪ್ರಕಾರ ಕರ್ಮ, ಜ್ಞಾನ, ಭಕ್ತಿ ಮೊದಲಾದವುಗಳಲ್ಲಿ ಯಾವುದು ಮೋಕ್ಷ ಕಾರಣವೆನ್ನುವರೋ ಅದೇ ಪ್ರತಿಬೋಧಪದದ ಅರ್ಥವೆನ್ನುವರು. ಇವರಲ್ಲಿ ಪ್ರತಿಯೊಬ್ಬರೂ ಹೇಳುವುದರಲ್ಲಿ ಸತ್ಯಾಂಶವಿಲ್ಲದಿಲ್ಲ. ಶ್ರೀ ಶಂಕರಾಚಾರ್ಯರ ಭಾಷ್ಯದಂತೆ "ಬೋಧಂಪ್ರತಿ ಬೋಧಂಪ್ರತಿ ವಿದಿತಂ ಪ್ರತಿಭೋಧ ವಿದಿತಂ" ಎಂದರೆ ಪ್ರತಿಯೊಂದು ಬೋಧ (ಅರಿವು) ದಲ್ಲಿಯೂ ಆಗುವ ಬೋಧವೇ ಪ್ರತಿಬೋಧವೆನಿಸುವುದು. ಪರಮಾತ್ಮನು ಪ್ರಜ್ಞಾನಘನ ಎಂದರೆ ಅರಿವಿನ ಗಟ್ಟಿಯೇ ಆದುದರಿಂದ ನಮಗಾಗುವ ಪ್ರತಿಯೊಂದು ಅರಿವಿನಲ್ಲಿಯೂ ವಿದಿತನಾಗುವನು ಪರಮಾತ್ಮನೆಂಬ ಮಾತಿನಲ್ಲಿ ಸತ್ಯವಿದೆ. ರಾಮಾನುಜೀಯರಾದ ರಂಗರಾಮಾನುಜರು "ಪ್ರತಿಬೋಧೇನ ಉಪಾಸನರೂಪಯಾ" ಎಂದು ಮೊದಲಾಗಿ ಭಾಷ್ಯ ಬರೆದಿರುವುದರಲ್ಲಿ ಪ್ರತಿಬೋಧವೆಂದರೆ ಉಪಾಸನೆಯೆಂದೂ ಆದರಿಂದ ಮೋಕ್ಷವಾಗುವುದೆಂದೂ ಅರ್ಥಮಾಡಿದ್ದಾರೆ. ಮಾಧ್ವಭಾಷ್ಯದಲ್ಲಿ ಪ್ರತಿಬೋಧಪದಕ್ಕೆ ಸ್ಪಷ್ಟವಾಗಿ ಅರ್ಥವನ್ನು ಬರೆಯದಿದ್ದರೂ ಭಕ್ತಿ ಉಪಾಸನಾರೂಪವಾದುದು ಪ್ರತಿಬೋಧವೆನ್ನುವುದೇ ಅವರ ನಿಲುವೆನ್ನಬಹುದು. "ಯಮೇವೈಷ ವೃಣುತೇ ತೇನ ಲಭ್ಯಃ" ಎಂಬ ಮುಂಡಕೋಪನಿಷತ್ತಿನ ಆಧಾರದಂತೆ ಭಕ್ತ್ಯುಪಾಸನೆಗಳಿಂದ ಪ್ರೀತನಾದ ಪರಮೇಶ್ವರನು ಭಕ್ತನಿಗೆ ಲಭ್ಯನು ನಾರಾಯಣರು "ಗುರೂಪದೇಶಃ ಪ್ರತಿಬೋಧಃ" ಎಂದಿದ್ದಾರೆ. ಶ್ವೇತಾಶ್ವತರೋಪನಿಷತ್ತಿನಲ್ಲಿ—

ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ||

ಎಂದು ಹೇಳಿರುವುದರಿಂದ ಪರಮಾತ್ಮನ ಅರಿವಾಗಲು ಗುರೂಪದೇಶದ ಆವಶ್ಯಕತೆಯು ಅನಿವಾರ್ಯ. ಪ್ರತಿಬೋಧಪದಕ್ಕೆ ಶಾಂಕರೀ ವ್ಯಾಖ್ಯೆಯಲ್ಲಿ "ಪ್ರತಿಬೋಧನಾಮ ಲಿಂಗಾಂಗಸಾಮರಸ್ಯರೂಪ ಶಿವಾದ್ವೈತ ಜ್ಞಾನಂ' ಎಂದು ಹೇಳಿರುವ ಶಿವಜೀವರ ಸಾಮರಸ್ಯರೂಪ ಶಿವಾದ್ವೈತ ಜ್ಞಾನವೇ ಪ್ರತಿಬೋಧವೆನ್ನಬಹುದು. ಭರ್ತೃಪ್ರಪಂಚರು, ಕಾಣಾದರು ಬೌದ್ಧರು ಮೊದಲಾದವರು ಪ್ರತಿಬೋಧಪದಕ್ಕೆ ಕೊಟ್ಟಿರುವ ಅರ್ಥಗಳನ್ನು ನನ್ನ "ಕೇನೋಪನಿಷತ್ ತಾತ್ಪರ್ಯ ನಿರ್ಣಯ" ಗ್ರಂಥದಲ್ಲಿ ವಿಮರ್ಶಿಸಲಾಗಿದೆ. ಇವುಗಳಲ್ಲಿ ಯಾವ ಅರ್ಥವು ಸರಿಯಾದುದು ಎಂಬುದನ್ನು ನಿರ್ಣಯಿಸುವುದು ಪ್ರಕೃತ ವಿಷಯವಲ್ಲ. ಇವುಗಳಲ್ಲಿ ಯಾವುದಾದರೊಂದು ಅಥವಾ ಬೇರೆಯಾದುದೊಂದು ಅರ್ಥವು ಕೇನೋಪನಿಷತ್ತಿನಲ್ಲಿ ಅಭಿಪ್ರೇತವೆಂಬುದು ಕೇನೋಪನಿಷತ್ತನ್ನು ಅಧ್ಯಯನಮಾಡುವವರಿಗೆ ಅವಶ್ಯವಾದುದು. ಹಾಗೆ ಮಾಡಲು ತಮ್ಮ ಯಾವದೊಂದು ಸಿದ್ಧಾಂತವನ್ನೂ ಈ ಉಪನಿಷತ್ತಿನ ಸಹಾಯದಿಂದ ಸಿದ್ಧಾಂತಮಾಡಲು ಹೊರಡದೆ, ಉಪನಿಷತ್ತು ಏನು ಹೇಳುತ್ತದೆ ಎಂಬುದನ್ನು ನಿರ್ಣಯಿಸಲು ಸಿದ್ಧರಾಗಬೇಕು. ಹಾಗೆ ಮಾಡಲು ಲೋಕಮಾನ್ಯ ತಿಲಕರು ಗೀತಾರಹಸ್ಯದಲ್ಲಿ ಹೀಗೆ ಮಾರ್ಗದರ್ಶನ ಮಾಡಿರುವರು—"ಗ್ರಂಥ ಪ್ರಕರಣ ಇಲ್ಲವೇ ವಾಕ್ಯಗಳ ಅರ್ಥವನ್ನು ನಿರ್ಣಯಿಸುವ ವಿಷಯದಲ್ಲಿ ಅತ್ಯಂತ ಕುಶಲರಾದ ಮೀಮಾಂಸಕರ, ಎಲ್ಲರಿಗೂ ಮಾನ್ಯವಾದ ಹಳೆಯ ಶ್ಲೋಕವೊಂದು ಕೆಳಗೆ ಬರೆದಂತೆ ಇರುತ್ತದೆ :

ಉಪಕ್ರಮೋಪಸಂಹಾರಾ ಅಭ್ಯಾಸೋಽ ಪೂರ್ವತಾ ಫಲಂ।
ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯ ನಿರ್ಣಯೇ ॥

ನಿಜಗುಣಶಿವಯೋಗಿಗಳು 'ವಿವೇಕಚಿಂತಾಮಣಿ'ಯಲ್ಲಿ ಹೇಳಿದಂತೆ "ಉಪಕ್ರಮೋಪಸಂಹಾರಂಗಳು, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ, ಉಪಪತ್ತಿಯೆಂಬ ಲಿಂಗ ಷಟ್ಕದಿಂ ಶ್ರವಣದೊಳ್ ತಾತ್ಪರ್ಯಮಂ ನಿರ್ಣಯಿಸಲಪ್ಪುದು." ಹೀಗೆ ಹೇಳಿರುವ ಷಡ್ಲಿಂಗಗಳ ದೃಷ್ಟಿಯಿಂದ ಕೇನೋಪನಿಷತ್ತಿನ ತಾತ್ಪರ್ಯದ ನಿರ್ಣಯವನ್ನು ಮಾಡುವ

ನೊಪಲು ಪ್ರತಿಬೋಧ ಶಬ್ದಕ್ಕಿರುವ ಮೇಲೆ ಹೇಳಿದ ಅರ್ಥಕ್ಕಿಂತ ಬೇರೆಯಾದುದೊಂದು ಅರ್ಥವಿರುವುದನ್ನು ಸೂಚಿಸಿ, ಅದು ಕೇನೋಪನಿಷತ್ತಿಗೆ ಅಭಿಪ್ರೇತವಾದ ಅರ್ಥವೇ ಎಂಬುದನ್ನು ನೋಡಬೇಕಾಗುವುದು. ಕೆಲವು ಪದಗಳಿಗೆ 'ಪ್ರತಿ' ಎಂಬ ಪ್ರತ್ಯಯವನ್ನು ಸೇರಿಸಿದಾಗ ಬೇರೆ ಬೇರೆ ಅರ್ಥವಾಗುವುದೆಂಬುದು ಅಂತಹ ಕೆಲವು ಪದಗಳ ಅರ್ಥವನ್ನು ನೋಡು ವುದರಿಂದ ತಿಳಿಯಬರುವುದು. ಪ್ರತಿದಿನ, ಪ್ರತಿವಾದಿ, ಪ್ರತಿಕ್ರಿಯೆ, ಪ್ರತಿ ಕ್ಷಿಪ್ತ, ಪ್ರತಿಗಮನ, ಪ್ರತಿಘಾತ ಇವು ಅಂತಹ ಕೆಲವು ಪದಗಳು. ಇವು ಗಳಲ್ಲಿ ಪ್ರತಿಗಮನವೆಂದರೆ ಗಮನ ಯಾವ ದಿಕ್ಕಿನಲ್ಲಿ ಆಗುವುದೋ ಅದಕ್ಕೆ ಎದುರಾದ ದಿಕ್ಕಿನಲ್ಲಿ ಗಮನವಾದರೆ ಪ್ರತಿಗಮನವೆಂದಾಗುವುದು. ನಮ್ಮ ಇಂದ್ರಿಯಗಳು ಸ್ವಾಭಾವಿಕವಾಗಿ ಹೊರಗಡೆಗೆ ಹರಿದು ಹೊರಗಿನ ವಸ್ತು ಗಳ ಬೋಧವನ್ನು ಎಂದರೆ ಅರಿವನ್ನು ಉಂಟುಮಾಡುವುವು. ಹೀಗೆ ಹೊರಗೆ ಹರಿವ ಇಂದ್ರಿಯಗಳು ಒಳಗಿರುವ ಆತ್ಮನ ಬೋಧವನ್ನು ಮಾಡ ಲಾರವು. ಇಂದ್ರಿಯಗಳು ಪ್ರತಿಗಮನ ಮಾಡಲಾದರೆ—ಎಂದರೆ ಹಿಂತಿರುಗಿ ಒಳಗೆ ಹರಿಯಬಲ್ಲವಾದರೆ, ಪ್ರತಿಬೋಧವಾಗಿ ಅಂತರಾತ್ಮದರ್ಶನವಾಗು ವುದು; ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಇಂದ್ರಿಯಗಳು ಹೊರಗಡೆಗೆ ಹರಿಯಲು ಹೊರಗಿರುವ ವಸ್ತುಗಳು 'ಬೋಧವಿದಿತ' ವಾಗುವುವು ಇಂದ್ರಿಯಗಳ ಪ್ರತಿಗಮನದಿಂದ ಎಂದರೆ ಒಳಗೆ ಹರಿಯು ವುದರಿಂದ ಅಂತರಾತ್ಮವು 'ಪ್ರತಿಬೋಧವಿದಿತ'ವಾಗುವುದು. ಕಠೋಪನಿ ಷತ್ತಿನ ಮಂತ್ರವೊಂದರಿಂದಲೂ ಅದರ ಶ್ರೀ ಶಂಕರಾಚಾರ್ಯರ ಭಾಷ್ಯ ದಿಂದಲೂ ಈ ವಿಷಯವು ಸ್ಪಷ್ಟವಾಗುವುದು—

ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ, ತಸ್ಮಾತ್ ಪರಾಙ್
ಪಶ್ಯತಿ ನಾಂತರಾತ್ಮನ್ ।
ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತ ಚಕ್ಷುರಮೃತತ್ವ
ಮಿಚ್ಛನ್ ॥

ಸ್ವಯಂಭುವು ಇಂದ್ರಿಯಗಳನ್ನು ಹೊರಮುಖವಾಗಿ ಕೊರೆದಿರುವನು; ಆದುದರಿಂದಲೇ ಮನುಷ್ಯನು ಹೊರಗಡೆಗೇ ನೋಡುತ್ತಾನೆ, ಒಳಗೆ ನೋಡ ಲಾಗುವುದಿಲ್ಲ. ಆದರೆ ಮೋಕ್ಷವನ್ನು ಅಪೇಕ್ಷಿಸುವ ಯಾವನೋ ಒಬ್ಬ

ಧೀರನು ಹಿಂತಿರುಗಿಸಿಕೊಂಡ ನೋಟವುಳ್ಳವನಾಗಿ ಒಳಗಿರುವ ಆತ್ಮನ ದರ್ಶನವನ್ನು ಮಾಡುವನು—ಎಂಬುದು ಈ ಮಂತ್ರದ ಅರ್ಥ. ಇಂದ್ರಿಯ ಗಳು ಸ್ವಾಭಾವಿಕವಾಗಿ ಹರಿಯುವುದು ಹೊರಗಡೆಗೆ; ಅಂತರಾತ್ಮನನ್ನು ನೋಡಬೇಕಾದರೆ ಅವುಗಳನ್ನು ಒಳಗಡೆಗೆ (ಧ್ಯಾನಯೋಗದಲ್ಲಿ) ಪ್ರಯತ್ನ ದಿಂದ ಹರಿಸಬೇಕು. ಇದು ಯಾವನೋ ಒಬ್ಬ ಧೀರನಿಗೆ ಸಾಧ್ಯ. ಶಾಂಕರ ಭಾಷ್ಯದಂತೆ—"ಕಶ್ಚಿದ್ ಧೀರಃ" ಎಂದರೆ "ಕಶ್ಚಿದ್ ನದ್ಯಾಃ ಪ್ರತಿ ಸ್ರೋತಃ ಪ್ರವರ್ತನಮಿವ ಧೀರಃ." ಸ್ರೋತಃ ಎಂದರೆ ನದಿಯು ಸ್ವಾಭಾವಿಕವಾಗಿ ಕೆಳಕ್ಕೆ ಹರಿಯುವಿಕೆ; ಪ್ರತಿಸ್ರೋತಃ ಎಂದರೆ ಅದನ್ನು ಹಿಂತಿರುಗಿಸಿ ಮೇಲಕ್ಕೆ ಹರಿಯುವಂತೆ ಮಾಡಿದಾಗ ಆಗುವ ಹರಿಯುವಿಕೆ; ಇದಕ್ಕೆ ಭಗೀರಥ ಪ್ರಯತ್ನವೇ ಆಗಬೇಕು. ಹಾಗೆಯೇ ಇಂದ್ರಿಯ ಸ್ರೋತ ವನ್ನು ಹಿಂತಿರುಗಿಸಿ ಅದನ್ನು ಪ್ರತಿಸ್ರೋತ ಮಾಡಬಲ್ಲವನು ಭಗೀರಥನಂತಹ ಅಪರೂಪವಾದ ಧೀರ. ಇಂದ್ರಿಯಸ್ರೋತದಿಂದ ಎಂದರೆ ಅದು ಸ್ವಾಭಾವಿಕ ವಾಗಿ ಹರಿವುದರಿಂದ ಹೊರಗಿನ ವಸ್ತುಗಳು ವಿದಿತವಾಗುವುವು; ಧ್ಯಾನ ಯೋಗದಲ್ಲಿ ಇಂದ್ರಿಯಗಳ ಪ್ರತಿಸ್ರೋತವನ್ನು ಮಾಡುವುದಾದರೆ ಎಂದರೆ ಹೊರಗೆ ಹರಿವ ಇಂದ್ರಿಯಗಳನ್ನು ಒಳಗಡೆ ಹರಿಸಿದರೆ ಅಂತರಾತ್ಮನ ದರ್ಶನವಾಗುವುದು. ಇಂದ್ರಿಯಗಳ ಸ್ರೋತದಿಂದ ಎಂದರೆ ಇಂದ್ರಿಯಗಳು ಹೊರಗೆ ಹರಿವುದರಿಂದ ಆಗುವುದು ಬೋಧ; ಅವುಗಳನ್ನು ಹಿಂತಿರುಗಿಸಿ ಒಳಗೆ ಹರಿಸುವುದರಿಂದ ಎಂದರೆ ಪ್ರತಿಸ್ರೋತದಿಂದ ಆಗುವುದು ಪ್ರತಿ ಬೋಧ. ಬೋಧವಿದಿತವಾಗುವುದು ಹೊರಗಿನ ಪ್ರಪಂಚ; ಪ್ರತಿಬೋಧ ವಿದಿತವಾಗುವುದು ಒಳಗಿನ ಆತ್ಮ ಎಂದರೆ ಅಂತರಾತ್ಮ ಎಂಬುದು ಕಠೋಪನಿಷತ್ತಿನ ಮಂತ್ರವಿದರ ಅಭಿಪ್ರಾಯ. ಇದೇ ಕೇನೋಪನಿಷತ್ತಿನ ಹೃದಯವಾದ 'ಪ್ರತಿಬೋಧವಿದಿತಂ ಮತಂ' ಎಂಬುದರ ಅರ್ಥವೆಂಬು ದನ್ನು ಷಡ್ಲಿಂಗಗಳಿಂದ ನಿರ್ಣಯಿಸಲಾಗುವುದು.

## ಕೇನೋಪನಿಷತ್ತಿನ 'ಉಪಕ್ರಮ'ದಿಂದ ತಾತ್ಪರ್ಯ ನಿರ್ಣಯ

ಕೇನೋಪನಿಷತ್ತಿನ ಮಂತ್ರಗಳಿಗೆ ಪ್ರತಿಪದಾರ್ಥವನ್ನೂ ಅವುಗಳಿಗೆ

ಶಂಕರಾದಿ ಆಚಾರ್ಯರ ಭಾಷ್ಯಾಧಾರಗಳನ್ನೂ, ಅವುಗಳ ಅರ್ಥವನ್ನೂ 'ಕೇನೋಪನಿಷತ್ ತಾತ್ಪರ್ಯ ನಿರ್ಣಯ' ಗ್ರಂಥದಲ್ಲಿ ಕೊಟ್ಟಿದೆ. ಅವುಗಳನ್ನು ಅವಶ್ಯವೆನಿಸಿದರೆ ಆ ಗ್ರಂಥದಲ್ಲಿ ನೋಡಬಹುದು; ಇಲ್ಲಿ ಮಂತ್ರಗಳನ್ನೂ ಅವುಗಳ ಪದ್ಯಾನುವಾದದೊಡನೆ ವಿವೇಚನೆ ಮಾಡಿದರೆ ಸಾಕೆನಿಸುತ್ತದೆ—

ಕೇನೇಷಿತಂ ಪತತಿ ಪ್ರೇಷಿತಂ ಮನಃ ।
ಕೇನ ಪ್ರಾಣಃ ಪ್ರಥಮಃ ಪ್ರೈತಿಯುಕ್ತಃ ।
ಕೇನೇಷಿತಾಂ ವಾಚಮಿಮಾಂ ವದಂತಿ ।
ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥ ೧ ॥

ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋಯದ್ ।
ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ ।
ಚಕ್ಷುಷಶ್ಚಕ್ಷುರತಿಮುಚ್ಯ ಧೀರಾಃ ।
ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ ॥ ೨ ॥

ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನೋ ಮನಃ ।
ನ ವಿದ್ಮೋ ನ ವಿಜಾನೀಮೋ ಯಥೈತದನುಶಿಷ್ಯಾತ್ ॥೩॥

ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ ।
ಇತಿ ಶುಶ್ರುಮ ಪೂರ್ವೇಷಾಂ ಯೇನಸ್ತದ್ ವ್ಯಾಚಚಕ್ಷಿರೇ
॥ ೪ ॥

ಪದ್ಯಾನುವಾದ—

ಯಾರಿಚ್ಛೆಯಿಂ ಮನವು ವಿಷಯಗಳೊಳಿರಗುವುದು ?।
ಯಾರ ಯೋಜನೆಯಿಂದೆ ಮೊದಲುಸಿರು ಚಲಿಸುವುದು ?।
ಯಾರಿಚ್ಛೆಯಿಂ ಜನರು ಮಾತುಗಳನಾಡುವರು ?।
ಯಾರದೋ ಕಿವಿ ಕಣ್ಣ ನಿಯಮಿಸುವ ದೈವಮದು ? ॥ ೧ ॥

ಅದು ಕಿವಿಯ ಒಳಕಿವಿಯು ; ಅದು ಮನದ ಒಳಮನವು |
ಅದು ವಾಕ್ಕಿನೊಳವಾಕ್ಕು ; ಅದು ಜೀವದೊಳಜೀವ |
ಅದು ಕಣ್ಣಿನೊಳಕಣ್ಣು—ಮ್ಮುತಿಹೊಂದಿ ಲೌಕಿಕಕೆ |
ಇದಂ ತ್ಯಜಿಸಿ ಧೀರರ್ ಪಡೆವರಮೃತತ್ವಮಂ || ೨ ||

ಅದರ ಬಳಿ ಸಾರವವು ಮನಕಣ್ಣು ವಾಕ್ಕುಗಳು |
ಅದನರಿಯುವೆನೆ, ಎಂತು ಶಿಷ್ಯರ್ಗೆ ಬೋಧಿಪೆವು || ೩ ||

ವಿದಿತಕಿಂ ಬೇರೆಯುದವಿದಿತಕಿಂ ಮೇಲಿಸದು |
ಇವಸರಿದ ಹಿರಿಯರಿಂ ನೆರೆಯರಿದೆವಿಂತಿದನು || ೪ ||

ಮೊದಲನೆಯ ಈ ನಾಲ್ಕು ಮಂತ್ರಗಳಿಂದ ಕೇನೋಪನಿಷತ್ತಿನ ಉಪಕ್ರಮವಾಗಿದೆ. ಗ್ರಂಥಕಾರನ ಉದ್ದೇಶವು ಗ್ರಂಥದ ಉಪಕ್ರಮ ದಿಂದಲೇ ಗೊತ್ತಾಗುವುದು. ಮೇಲೆ ಕಂಡ ಕೇನೋಪನಿಷತ್ತಿನ ಉಪಕ್ರಮ ದಲ್ಲಿ ಜ್ಞಾನಕರ್ಮ ಭಕ್ತ್ಯುಪಾಸನೆಗಳ ವಿಷಯವಾಗಲೀ ಗುರೂಪದೇಶದ ವಿಷಯವಾಗಲೀ ಇಲ್ಲ. ಹೊರಗಿನ ವಸ್ತುಗಳು ಇಂದ್ರಿಯಗಳಿಂದಾಗುವ ಬೋಧದಿಂದ ವಿದಿತವಾಗುವುವಾದರೂ, ನಮಗೆ ಅಂತರಾತ್ಮನಾದ ಪರಮಾತ್ಮ ತತ್ತ್ವವು ಇಂದ್ರಿಯ ಬೋಧವಿದಿತವಲ್ಲ. ಮುಂದೆ ಪರಮಾತ್ಮತತ್ತ್ವವು ಪ್ರತಿ ಬೋಧವಿದಿತವೆಂದು ಹೇಳುವುದಕ್ಕೆ ಮುನ್ನುಡಿಯಾಗಿ ಅದು ಬೋಧವಿದಿತ ವಲ್ಲವೆಂದು ಉಪಕ್ರಮದಲ್ಲಿಯೇ ಹೇಳಿದೆ. ಕಣ್ಣು, ಕಿವಿ ಮೊದಲಾದ ಇಂದ್ರಿ ಯಗಳು ಕರಣಗಳಾದುದರಿಂದ ಕಣ್ಣಿಗೆ ಕಣ್ಣಾಗಿ, ಜೀವಕ್ಕೆ ಒಳಜೀವವಾಗಿ ರುವ ಕರ್ತೃವಾದ ಪರಮಾತ್ಮತತ್ತ್ವವು ಇಂದ್ರಿಯಗಳ ಬೋಧದಿಂದ ವಿದಿತ ವಾಗದು—

ಪ್ರಣತೆಯೂ ಇದೆ, ಬತ್ತಿಯೂ ಇದೆ ಜ್ಯೋತಿಯು ಬೆಳಗುವಡೆ, ತೈಲ ವಿಲ್ಲದೆ ಪ್ರಭೆಯುಳ್ಳಿಯುದೊ ?

ಈ ವಚನದಲ್ಲಿ ಸುಂದರವಾದ ಉಪಮಾನವಿದೆ. ದೇಹವೆಂಬುದೊಂದು ದೀಪದ ಕಂಬ, ಪಂಚೇಂದ್ರಿಯಗಳೇ ಬತ್ತಿಗಳು ; ಪರಮಚೈತನ್ಯವೆಂಬ

ತೈಲವಿಲ್ಲದೆ, ಪಂಚೇಂದ್ರಿಯಗಳೆಂಬ ಬತ್ತಿಗಳು ಉರಿಯಲಾರವು. ಪಂಚೇಂದ್ರಿಯಗಳಿಗೆ ಚೈತನ್ಯವನ್ನು ಕೊಡುವುದು ಪರಬ್ರಹ್ಮ. ಪಂಚೇಂದ್ರಿಯಗಳು ಪರಬ್ರಹ್ಮದಿಂದ ಚೈತನ್ಯವನ್ನು ಪಡೆಯುವುವಾದರೂ, ಅವು ಪರಬ್ರಹ್ಮವನ್ನು ಗ್ರಹಿಸಲಾರವು–ಎಂಬುದು ಮೇಲಿನ ಮಂತ್ರಗಳ ಅಭಿಪ್ರಾಯ.

ತನುವಿಂಗೆ ತನುರೂಪಾಗಿ, ತನುವಿಗಾಧಾರವಾದೆ. ಮನಕ್ಕೆ ಮನದ ರೂಪಾಗಿ ಮನಕ್ಕೆ ನೆನಹಿನ ಶಕ್ತಿಯನ್ನಿತ್ತು ಮನಕ್ಕಾಧಾರವಾದೆ. ಪ್ರಾಣಕ್ಕೆ ಪ್ರಾಣದ ರೂಪಾಗಿ ಪ್ರಾಣಕ್ಕಾಧಾರವಾದೆ ... ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಕಣ್ಗೆ ಕಾಂಬಡೆ ರೂಪಲ್ಲ ; ಕೈಗೆ ಸಿಲುಕುವಡೆ ದೇಹಿಯಲ್ಲ ; ನಡೆದಡೆ ಗಮನಿಯಲ್ಲ ; ನುಡಿದಡೆ ವಾಚಾಳನಲ್ಲ ; ನಿಂದಿಸಿದವಗೆ ಹಗೆಯಲ್ಲ ; ಗುಹೇಶ್ವರನ ನಿಲುವು ಮಾತಿನ ಮಾಲೆಗೆ ಸಿಲುಕುವುದೇ.

ಪರಬ್ರಹ್ಮವು ಹೀಗೆ ಇಂದ್ರಿಯಾತೀತವಾದುದೇ ಹೊರತು ಇಂದ್ರಿಯಗಮ್ಯವಲ್ಲವೆಂಬ ವಿಷಯವೇ ಕೇನೋಪನಿಷತ್ತಿನ ಉಪಕ್ರಮದಲ್ಲಿ ಹೇಳಿರುವಂತೆಯೇ, ಮತ್ತೆಮತ್ತೆ ಅದನ್ನೇ ಹೇಳುತ್ತಿರುವುದನ್ನು ಮುಂದಿನ ಐದು ಮಂತ್ರಗಳಲ್ಲಿ ಕಾಣಬರುವುದು.

## ಕೇನೋಪನಿಷತ್ತಿನಲ್ಲಿ 'ಅಭ್ಯಾಸ' ಎಂದರೆ ಪುನರುಕ್ತಿಯಿಂದ ತಾತ್ಪರ್ಯ ನಿರ್ಣಯ

ಯದ್ವಾಚಾ ನಭ್ಯುದಿತಂ ಯೇನ ವಾಗಭ್ಯುದ್ಯತೇ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೫ ॥

ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಂ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೬ ॥

ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಗ್ಂ ಷಿ ಪಶ್ಯತಿ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೭ ॥

ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಗ್ಂ ಶ್ರುತಂ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೮ ॥

ಯತ್ ಪ್ರಾಣೇನ ನ ಪ್ರಾಣಿತಿ ಯೇನ ಪ್ರಾಣಃ ಪ್ರಣೀಯತೇ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೯ ॥

ಪದ್ಯಾನುವಾದ—

ಅದ ಪೇಳಲರಿಯುದೆನೆ ವಾಕ್ ವಾಕ್‌ಗೆ ವಾಕ್ಯಕ್ತಿ ।
ಅದರಿನೆನೆ, ಅದೆ ಬೊಮ್ಮ; ಜನರುಪಾಸಿಪುದಲ್ಲ ॥ ೫ ॥

ಅದು ಸಿಗದು ಮನದ ಮನನಕ್ಕೆ ; ಮನದ ಮನನಂ ।
ಅದರಿನೆನೆ, ಅದೆ ಬೊಮ್ಮ; ಜನರುಪಾಸಿಪುದಲ್ಲ ॥ ೬ ॥

ಅದು ಕಣ್ಗೆ ಕಾಣಿಸದು ; ಕಣ್‌ನೋಟಮಂ ನೋಳ್ಪು ।
ದದರಿನೆನೆ, ಅದೆ ಬೊಮ್ಮ; ಜನರುಪಾಸಿಪುದಲ್ಲ ॥ ೭ ॥

ಅದು ಶ್ರೋತ್ರಕಶ್ರುತಮಾ ಶ್ರೋತ್ರಮೇ ಶ್ರುತಂ ।
ಅದರಿನೆನೆ, ಅದೆ ಬೊಮ್ಮ; ಜನರುಪಾಸಿಪುದಲ್ಲ ॥ ೮ ॥

ಅದುಸಿರಾಡದುಸಿರಿಂ, ಪ್ರೇರಣೆಯುಸಿರಾಟಕೆ ।
ಅದರಿನೆನೆ, ಅದೆ ಬೊಮ್ಮ; ಜನರುಪಾಸಿಪುದಲ್ಲ ॥ ೯ ॥

ನೋಡಲು ಚೈತನ್ಯವುಳ್ಳ ಕಣ್ಣು, ಕಲ್ಲನ್ನು ನೋಡಬಲ್ಲದು ; ಅಂತಹ ಚೈತನ್ಯವಿಲ್ಲದ ಕಲ್ಲು ಕಣ್ಣನ್ನು ನೋಡಲಾರದು. ಕಣ್ಣಿಗೆ ಇರುವ ಚೈತನ್ಯವು ಎಲ್ಲರಲ್ಲಿಯೂ ಅಂತರಾತ್ಮನಾಗಿರುವ ಪರಮಾತ್ಮನದು. ತನಗೆ ಚೈತನ್ಯ ದಾಯಕನಾದ ಪರಮಾತ್ಮನನ್ನು ಕಣ್ಣು ನೋಡಲಾರದು. ಹಾಗೆಯೇ

ಇಂದ್ರಿಯಗಳಿಗೆಲ್ಲ ಚೈತನ್ಯದಾಯಕನಾದ ಪರಮಾತ್ಮನನ್ನು ಇಂದ್ರಿಯಗಳು ಗ್ರಹಿಸಲಾರವು. ಹಿಂದೆ ಹೇಳಿದ ವಚನದಂತೆ ತನುವಿಗೆ ತನುವಿನ ರೂಪಾಗಿ, ಮನಕ್ಕೆ ಮನದ ರೂಪಾಗಿ, ಹಾಗೆಯೇ ಉಳಿದ ಆಯಾ ಇಂದ್ರಿಯಗಳಿಗೆ ಆಯಾ ಇಂದ್ರಿಯಗಳ ರೂಪಾಗಿ, ಆ ಇಂದ್ರಿಯಗಳಿಗೆಲ್ಲ ಆಧಾರವಾಗಿ, ಅವವುಗಳಿಗೆ ಅವವುಗಳು ಮಾಡುವ ಕಾರ್ಯಕ್ಕೆ ಚೈತನ್ಯರೂಪವಾಗಿ ಇರುವ ಪರಮಾತ್ಮನನ್ನು ಆ ಇಂದ್ರಿಯಗಳಿಂದ ನಾವು ಗ್ರಹಿಸಲಾರೆವು. ಏಕೆಂದರೆ ಮುಂದೆ ಹೇಳುವಂತೆ ಪ್ರತಿಬೋಧವಿದಿತವಾದ ಪರತತ್ತ್ವವು ಇಂದ್ರಿಯ ಬೋಧವಿದಿತವಲ್ಲ.

ಕಣ್ಣೊಳಗೆ ಕಣ್ಣಿರ್ದು ಕಾಣಲರಿಯರಯ್ಯಾ! ಕಿವಿಯೊಳಗೆ ಕಿವಿಯಿರ್ದು ಕೇಳಲರಿಯರಯ್ಯಾ, ಘ್ರಾಣದೊಳಗೆ ಘ್ರಾಣವಿರ್ದು ಆಘ್ರಾಣಿಸಲರಿಯರಯ್ಯಾ! ಜಿಹ್ವೆಯೊಳಗೆ ಜಿಹ್ವೆಯಿರ್ದು ರುಚಿಸಲರಿಯರಯ್ಯಾ! ಪ್ರಾಣದೊಳಗೆ ಪ್ರಾಣವಿರ್ದು ಪ್ರಾಣದ ಪರಿಯನರಿಯರಯ್ಯಾ! ಕಾಯದೊಳಗೆ ಕಾಯವಿರ್ದು ಬಿಡದು ಬೇರಾಗದು, ಕೂಡಲ ಸಂಗಮದೇವಾ ನೀವಿಕ್ಕಿದ ಅಣಕದ ತೊಡಕಿನ ಭೇದವ ಭೇದಿಸ ಬಾರದಯ್ಯಾ!

'ಬೋಧ'—ಎಂದರೆ ಇಂದ್ರಿಯಗಳ ಮೂಲಕ ಆಗುವ ಹೊರಗಿನ ವಸ್ತುಗಳ ಅರಿವು. ಇಂದ್ರಿಯಾತೀತವಾದ ಪರಬ್ರಹ್ಮದ ಅರಿವು ಪ್ರತಿಬೋಧವಿದಿತವೇ ಹೊರತು ಬೋಧವಿದಿತವಲ್ಲ. ಅಧ್ಯಾತ್ಮಯೋಗದಲ್ಲಿ ಅಂತಃಚಕ್ಷುವಿನಿಂದ ಆಗುವ ಪ್ರತಿಬೋಧದಿಂದ ವಿದಿತವಾಗುವುದು ಇಂದ್ರಿಯಾತೀತವಾದ ಪರಮಾತ್ಮನ ಸಮ್ಯಗ್ದರ್ಶನವೆಂಬುದನ್ನು ಹೇಳುವುದಕ್ಕೆ ಪ್ರಸ್ತಾವನಾರೂಪವಾಗಿ ಪರಬ್ರಹ್ಮವು ಇಂದ್ರಿಯಾತೀತವೆಂಬುದನ್ನು ಮತ್ತೆ ಮತ್ತೆ ಹೇಳಿರುವುದರಲ್ಲಿರುವ 'ಅಭ್ಯಾಸ' ಎಂದರೆ ಪುನರುಕ್ತಿಯಿಂದ ಉಪನಿಷತ್ತಿನ ಅಭಿಪ್ರಾಯವೇನೆಂಬುದು ಸೂಚಿತವಾಗುತ್ತದೆ. ಗಂಗೆಯನ್ನು ಹಿಂತಿರುಗಿಸುವಂತಹ ಭಗೀರಥ ಪ್ರಯತ್ನದಿಂದ, ಸ್ವಾಭಾವಿಕವಾಗಿ ಹೊರಮುಖವಾಗಿ ಸ್ರೋತವಾಗುವ ಇಂದ್ರಿಯಪ್ರವಾಹವನ್ನು, ಧ್ಯಾನಯೋಗದಲ್ಲಿ ಒಳಮುಖಕ್ಕೆ ಹರಿವಂತೆ ಪ್ರತಿಸ್ರೋತಮಾಡಿದಾಗ "ಬೋಧ"ವಾಗುವುದರ ಬದಲು ಪ್ರತಿಬೋಧವಾಗಿ ಅಂತರಾತ್ಮನ ಸಮ್ಯಗ್ದರ್ಶನವಾಗುವುದೆಂಬುದು ಕೇನೋ

ಪನಿಷತ್ತಿನ ಅಭಿಪ್ರಾಯ ಎನ್ನುವುದು, ಪರಬ್ರಹ್ಮವು ಇಂದ್ರಿಯಾತೀತನೆಂದು ಮತ್ತೆ ಮತ್ತೆ ಹೇಳುವುದೆಂಬ "ಅಭ್ಯಾಸ"ದಿಂದಲೂ ಸಿದ್ಧವಾಗುತ್ತದೆ.

## ಉಪನಿಷತ್ತಿನಲ್ಲಿ ಅಪೂರ್ವತೆ ಫಲಗಳಿಂದ ತಾತ್ಪರ್ಯ ನಿರ್ಣಯ

ಗ್ರಂಥಕರ್ತನು ಗ್ರಂಥದಲ್ಲಿ ಹೇಳಬಯಸುವುದು ಗ್ರಂಥಾರಂಭದಲ್ಲಿಯೂ, ಮುಕ್ತಾಯದಲ್ಲಿಯೂ, ಇವೆರಡರ ಮಧ್ಯೆ ಮತ್ತೆ ಮತ್ತೆ ಹೇಳುವುದರಲ್ಲಿಯೂ ವ್ಯಕ್ತವಾಗುವುದಲ್ಲದೆ, ಅವನು ಹೇಳುವುದರಲ್ಲಿನ 'ಅಪೂರ್ವತೆ'ಯಿಂದಲೂ, ಗುರಿಯಿಟ್ಟಿರುವ ಫಲದಿಂದಲೂ ಸೂಚಿತವಾಗುವುದು. ಕೇನೋಪನಿಷತ್ತಿನಲ್ಲಿ 'ಅಪೂರ್ವತೆ' ಇರುವ ಮತ್ತು ಫಲವನ್ನು ಹೇಳುವ ಭಾಗವನ್ನು ಈ ಕೆಳಗೆ ಕೊಟ್ಟು ಅದರ ವಿವೇಚನೆಯನ್ನು ಮಾಡಲಾಗುವುದು—

ಯದಿ ಮನ್ಯಸೇ ಸುವೇದೇತಿ ದಭ್ರಮೇವಾಪಿ ನೂನಂ ।
ತ್ವಂ ವೇತ್ಥ ಬ್ರಹ್ಮಣೋ ರೂಪಂ ಯದಸ್ಯ ತ್ವಂ ।
ಯದಸ್ಯ ದೇವೇಷ್ವಥ ನು ಮೀಮಾಂಸ್ಯಮೇವ ತೇ ।
ಮನ್ಯೇ ವಿದಿತಂ ॥ ೨-೧ ॥

ನಾಹಂ ಮನ್ಯೇ ಸುವೇದೇತಿ ನೋ ನ ವೇದೇತಿ ವೇದ ಚ ।
ಯೋ ನಸ್ತದ್ವೇದ ತದ್ವೇದ, ನೋ ನ ವೇದೇತಿ ವೇದ ಚ ॥ ೨-೨ ॥

ಯಸ್ಯಾಮತಂ ತಸ್ಯ ಮತಂ, ಮತಂ ಯಸ್ಯ ನ ವೇದ ಸಃ ।
ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಂ ॥ ೨-೩ ॥

ಪ್ರತಿಬೋಧವಿದಿತಂ ಮತಮಮೃತತ್ವಂ ಹಿ ವಿಂದತೇ ।
ಆತ್ಮನಾ ವಿಂದತೇ ವೀರ್ಯಂ ವಿದ್ಯಯಾ ವಿಂದತೇಽಮೃತಂ ॥ ೨-೪ ॥

ಇಹಚೇದವೇದೀದಥ ಸತ್ಯಮಸ್ತಿ ।
ನ ಚೇದಿಹಾವೇದೀನ್ಮಹತೀ ವಿನಷ್ಟಿಃ ।
ಭೂತೇಷು ಭೂತೇಷು ವಿಚಿತ್ಯ ಧೀರಾಃ ।
ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ ॥ ೨-೫ ॥

ಪದ್ಯಾನುವಾದ

ಅರಿದಿರುವೆ ಚೆನ್ನಾಗಿ-ಎನುವೆಯಾದೊಡೆ, ನೀನು।
ಅರಿದಿಹ ಬಹುಸ್ವಲ್ಪ; ಅಧಿದೈವದಧ್ಯಾತ್ಮ ।
ದರಿವಿನದು ಮೀಮಾಂಸೆಗೈಯ್ಯುವುದು ನಿನ್ನೊಳೆನೆ ।
ಗುರುವರನು, ಶಿಷ್ಯನೆಂದ-ಅರಿದಿಹೆನು ಬಲ್ಲೆ ॥ ೨-೧ ॥

ಅರಿದೆನೆನೆ ಚೆನ್ನಾಗಿ ; ಅರಿಯೆನೆನೆ ಅರಿತಿರುವೆ ।
'ಅರಿಯೆನೆನೆ, ಅರಿತಿರುವೆ'-ಎಂಬವು ಬಲ್ಲವಂ ॥ ೨-೨ ॥

ಅರಿಯದವನರಿತಿಹಂ, ಅರಿದವನರಿಯನದಂ ।
ಅರಿದವಗೆ ತಿಳಿಯದದು, ಅರಿಯದವ ತಿಳಿದಿಹಂ ॥ ೨-೩ ॥

ಅರಿಯೆ ಪ್ರತಿಬೋಧದೆ ಪಡೆವನಮೃತತ್ವಮಂ ।
ದೊರೆಗುವಾತ್ಮನಿಂ ವೀರ್ಯಮಮೃತಂ ವಿದ್ಯೆಯಿಂ ॥ ೨-೪ ॥

ಇಲ್ಲಿಯೇ ತಿಳಿಯಲಿದನಾಗುವುದು ಸತ್ಯಮೆನೆ ।
ಇಲ್ಲಿಯೇ ತಿಳಿಯದಿರೆ ಬಹು ನಷ್ಟವಾಗುವುದು ।
ಭೂತಭೂತಗಳೊಳರೆ ಧೀರರರಿಯುತ್ತದಂ ।
ಭೌತಿಕವಿದಂ ತ್ಯಜಿಸಿ ಪಡೆವರಮೃತತ್ವಮಂ ॥ ೨-೫ ॥

'ಬಲ್ಲೆ, ಬಲ್ಲೆ—ಎನ್ನುವುದು ಯಾವಾಗ ? ಉದಾಹರಣೆಗಾಗಿ ನಾವು ಓದು ಹಣ್ಣನ್ನು ಬಲ್ಲೆವೆನ್ನುವೆವು—ಏಕೆಂದರೆ, ಅದು ನಮ್ಮ ಕಣ್ಣಿಗೆ ಕಾಣಿಸಿಕೊಂಡಿರುವುದು ; ಅದರ ವಾಸನೆಯನ್ನು ನಮ್ಮ ಮೂಗು

ಗ್ರಹಿಸಿರುವುದು; ಅದು ಮಾಗಿರುವುದನ್ನು ಸ್ಪರ್ಶದಿಂದ ತಿಳಿದಿರುವೆವು; ನಮ್ಮ ನಾಲಿಗೆಯು ಅದರ ರುಚಿಯನ್ನು ನೋಡಿರುವುದು. ಹೀಗೆಲ್ಲ ಇಂದ್ರಿಯ ಗೋಚರವಾದುದಕ್ಕೆ ನಾವು ಬಲ್ಲೆವೆನ್ನುವೆವು—

ಏಕಾದಶೇಂದ್ರಿಯೈರ್ಯುಕ್ತ್ಯಾ ಶಾಸ್ತ್ರೇಣಪ್ಯವಗಮ್ಯತೇ।
ಯಾವತ್ ಕಿಂಚಿತ್ ಭವೇದೇತದಿದಂ ಶಬ್ದೋದಿತಂ ಜಗತ್॥

ಚಕ್ಷುರಾದಿ ದಶೇಂದ್ರಿಯಗಳಿಂದಲಾಗಲೀ ಮನಸ್ಸೆಂಬ ಹನ್ನೊಂದನೆಯ ಇಂದ್ರಿಯದಿಂದಲಾಗಲೀ ಯಾವುದನ್ನು ಗ್ರಹಿಸುತ್ತೇವೆಯೋ ಅದೇ 'ಇದಂ' ಎಂಬ ಶಬ್ದದಿಂದ ಹೇಳಲ್ಪಡುವ ಜಗತ್. "ಪೂರ್ಣಮಿದಂ ಪೂರ್ಣಮದಃ" ಎಂಬಲ್ಲಿನ 'ಅದಃ' ಶಬ್ದದಿಂದ ಹೇಳಲ್ಪಡುವ ಪರಬ್ರಹ್ಮವು ಎಲ್ಲರ ಅಂತರಾತ್ಮವಾಗಿದ್ದರೂ ಅದನ್ನು ಯಾವ ಇಂದ್ರಿಯದಿಂದಲಾಗಲೀ ಶಾಸ್ತ್ರಯುಕ್ತಿಗಳಿಂದಲಾಗಲೀ ಅರಿಯಲಾಗವುದಿಲ್ಲ. ಆದುದರಿಂದ ಅಂತರಾತ್ಮವಾದ ಪರಬ್ರಹ್ಮವನ್ನು ಬಲ್ಲೆನೆನ್ನುವುದಾದರೆ ಸರ್ವಜ್ಞನ ವಚನಗಳಿಂದಲೇ ಉತ್ತರವನ್ನು ಕೊಡಬೇಕಾಗುವುದು—

ಬಲ್ಲೆನೆನ್ನುವ ಮಾತು ಎಲ್ಲವೂ ಹುಸಿ ಕಾಣೋ, ಬಲ್ಲೊಡೆ ಬಲ್ಲೆನೆನಬೇಡ, ಸುಮ್ಮನಿರಬಲ್ಲವನೆ ಬಲ್ಲ ಸರ್ವಜ್ಞ.

ಬೊಮ್ಮನನು ಬಲ್ಲಡೆ ಗುಮ್ಮನಂತಿರಬೇಕು ಬೊಮ್ಮನನರಿದು ಉಸುರಿದೊಡೆ ಕಳಹೋಗಿ ಕೆಮ್ಮಿದಂತಕ್ಕು ಸರ್ವಜ್ಞ.

ನಾನು ಬ್ರಹ್ಮವನ್ನು ಬಲ್ಲೆನು ಎಂದರೆ ನನಗೆ ಬ್ರಹ್ಮವು ಇಂದ್ರಿಯಗಮ್ಯವಾಯಿತೆಂದಾಗುವುದು; ಆದರೆ ಅದು ಇಂದ್ರಿಯಗಮ್ಯವಲ್ಲ; ಆದುದರಿಂದ ಅರಿದೆನೆನ್ನುವನಿಗೆ ತಿಳಿದಿಲ್ಲವೆಂದಾಯಿತು. "ಅರಿದವನರಿಯನದಂ" ಎಂಬ ಮಾತು ಈಗ ಅರ್ಥವಾಗುವುದು. ನನ್ನ ಜ್ಞಾನೇಂದ್ರಿಯಗಳಿಗೆ ಪರಮಾತ್ಮನು ನಿಲುಕಿಲ್ಲವೆನ್ನುವವನು ತಿಳಿದವನು; ಆದುದರಿಂದ "ಅರಿಯದವ ತಿಳಿದಿಹಂ" ಎಂಬುದೂ ಅರ್ಥವಾಗುವುದು. ನಮಗೆ ಆಗುವ ಅರಿವು ಹೊರಗೆ ಹರಿವ ಇಂದ್ರಿಯಗಳ ಬೋಧದಿಂದ ಆಗುವುದು ಅರ್ಥಾತ್ ಹೊರಜಗತ್ತು ಬೋಧವಿದಿತವಾಗುವುದು; ಅಂತರಾತ್ಮನ ಅರಿವು ಹೊರಗಡೆಗೆ

ಹರಿವ ಇಂದ್ರಿಯಸ್ರೋತದಿಂದ ಆಗುವುದಿಲ್ಲ. ಹಿಂದೆ ಕಠೋಪನಿಷತ್ತಿನ "ಪರಾಂಚಿಖಾನಿ" ಎಂದು ಮೊದಲಾಗುವ ಮಂತ್ರದ ಮತ್ತು ಅದರ ಶಾಂಕರಭಾಷ್ಯದ ಆಧಾರದಿಂದ ವಿವರಿಸಿದಂತೆ ಹೊರಗೆ ಹರಿವ ಮನಸ್ಸನ್ನು ಧ್ಯಾನಯೋಗದಲ್ಲಿ ಒಳಮುಖ ಮಾಡಿದಾಗ ಅಂತರಾತ್ಮನ ಅರಿವಾಗುವುದು ಆಗ ಮನಸ್ಸಿನ ಸ್ರೋತವು ಎಂದರೆ ಪ್ರವಾಹವು ಪ್ರತಿಸ್ರೋತವಾಗಿರುವುದು. ಇಂದ್ರಿಯಗಳೆಂಬ ಕುದರೆಗಳು ಮನಸ್ಸೆಂಬ ಸಾರಥಿಯಿಂದ ಸ್ವಾಭಾವಿಕವಾಗಿ ಹೊರಗೆ ಹರಿದಾಗ ಆಗುವ ಬೋಧದಿಂದ ವಿದಿತವಾಗುವುದು ಹೊರಜಗತ್ತು; ಅರ್ಥಾತ್ ಹೊರಜಗತ್ತು ಬೋಧವಿದಿತವಾದುದು. ಧ್ಯಾನಯೋಗದಲ್ಲಿ ಮನಸ್ಸನ್ನು ಒಳಮುಖಮಾಡಿ, ಅದನ್ನು ಹರಿಸಿದಾಗ ಆಗುವುದು ಪ್ರತಿಬೋಧ ; ಇಂದ್ರಿಯ ಪ್ರತಿಸ್ರೋತದಿಂದ ಆಗುವ ಪ್ರತಿಬೋಧದಿಂದಾಗುವುದು ಅಂತರಾತ್ಮನ ಸಮ್ಯಗ್ದರ್ಶನ. "ಪ್ರತಿಬೋಧವಿದಿತಂ ಮತಂ'' ಎಂಬುದು ಈಗ ಅರ್ಥವಾಗುವುದು. ಶಾಂಕರಭಾಷ್ಯದಂತೆ 'ಮತಂ' ಎಂದರೆ ಸಮ್ಯಗ್ ದರ್ಶನ. ಅಂತರಾತ್ಮನ ಸಮ್ಯಗ್ದರ್ಶನವು ಆಗುವುದು ಪ್ರತಿಬೋಧದಿಂದಲೆಂಬುದು ಕೇನೋಪನಿಷತ್ತಿನ ಅಭಿಪ್ರಾಯ ಒಗಟಿನ ರೂಪದಲ್ಲಿ ಹೇಳಿರುವ ಈ ಮಂತ್ರಗಳಲ್ಲಿರುವ "ಅಪೂರ್ವತೆ"ಯಿಂದಲೂ ಇದು ಸಿದ್ಧವಾಗುತ್ತದೆ. ಉಪನಿಷತ್ತಿನ ಮುಖ್ಯಾಭಿಪ್ರಾಯವು ಅಧ್ಯಯನಮಾಡುವವರ ಮನಸ್ಸಿಗೆ ಹಿಡಿಯಲೆಂಬ ತವಕದಿಂದ ಅಪೂರ್ವ ರೀತಿಯಲ್ಲಿ ಅದನ್ನು ಹೇಳಿದೆ.

ಉಪನಿಷತ್ತಿನ ಗುರಿಯು ಮುಮುಕ್ಷುವು ಮೋಕ್ಷವೆಂಬ "ಫಲ"ವನ್ನು ಪಡೆಯಲೆಂಬುದು, "ಅಮೃತತ್ವಂ ಹಿ ವಿಂದತೇ'' ಎಂಬ ಪದಗಳಿಂದ ವ್ಯಕ್ತವಾಗುತ್ತದೆ. ಪರಮಾತ್ಮ ಸಾಕ್ಷಾತ್ಕಾರವೆಂಬ ಮೋಕ್ಷವು ಹೇಗೆ ದೊರೆಯುತ್ತದೆಂಬುದನ್ನು ಅನೇಕ ಉಪನಿಷತ್ತುಗಳು ಹೇಳುತ್ತವೆ. ಇಂದ್ರಿಯಗಳನ್ನು ಹೊರಮುಖವಾಗಿ ಕೊರೆದಿರುವುದರಿಂದ ಹೊರಗೆ ಹರಿವ ಇಂದ್ರಿಯಗಳು ಅಂತರಾತ್ಮನಾದ ಪರಮಾತ್ಮನನ್ನು ನೋಡಲಾರವೆನ್ನುವ "ಪರಾಂಚಿಖಾನಿ" ಎಂದು ಮೊದಲಾಗುವ ಕಠೋಪನಿಷತ್ತಿನ ಮಂತ್ರದಲ್ಲಿಯೇ "ಆವೃತ್ತಚಕ್ಷು''ವಾದ ಯಾವನಾದರೊಬ್ಬ ಧೀರನು ಅಂತರಾತ್ಮನ ದರ್ಶನ ಮಾಡಬಲ್ಲನೆಂದು ಹೇಳಿದೆ. 'ಆವೃತ್ತ ಚಕ್ಷುಃ-ಆವೃತ್ತಂ

ನ್ಯಾವೃತ್ತಂ, ಚಕ್ಷುಃ–ಚಕ್ಷುರಾದಿಕಂ ಇಂದ್ರಿಯ ಜಾತಂ'' ಎಂದು ಮೊದಲಾಗಿ ಶ್ರೀ ಶಂಕರಾಚಾರ್ಯರ ಭಾಷ್ಯದಲ್ಲಿ ಹೇಳಿದಂತೆ ಆವೃತ್ತ ಚಕ್ಷುವೆಂದರೆ ಹಿಂತಿರುಗಿಸಿದ ಚಕ್ಷುರಾದಿ ಇಂದ್ರಿಯಗಳುಳ್ಳವನೆಂದು ಅರ್ಥ. ಅಂತಹ ಯಾವನೋ ಒಬ್ಬ ಧೀರನು ಅಂತರಾತ್ಮನನ್ನು ನೋಡಬಲ್ಲನಂತೆ. "ಪ್ರತಿಸ್ರೋತಃ ಪ್ರವರ್ತನಮಿವಧೀರಃ" ಎಂದು ಶಾಂಕರಭಾಷ್ಯದಲ್ಲಿ ಹೇಳಿದಂತೆ, ಧೀರನು ಇಂದ್ರಿಯ ಸ್ರೋತವನ್ನು ಪ್ರತಿಸ್ರೋತವನ್ನಾಗಿಮಾಡ ಬಲ್ಲವನಾಗಿರಬೇಕು. ಇಂದ್ರಿಯ ಸ್ರೋತದಿಂದ ಹೊರಜಗತ್ತು ಬೋಧ ವಿದಿತವಾಗುವಂತೆ, ಯೋಗದಲ್ಲಿ ಇಂದ್ರಿಯ ಪ್ರತಿಸ್ರೋತವಾದಾಗ ಅಂತ ರಾತ್ಮನಾದ ಪರಮಾತ್ಮನ ಸಮ್ಯಗ್‌ದರ್ಶನವಾಗಿ ಅಮೃತತ್ವವು ದೊರೆ ಯುವುದು ಎಂಬುದೇ ಈ ಉಪನಿಷತ್ತಿನ ಗುರಿ ಎಂಬುದು ಮೋಕ್ಷವೆಂಬ "ಫಲ''ದ ದೃಷ್ಟಿಯಿಂದಲೂ ಸಿದ್ಧಾಂತವಾಗುವುದು.

ಕಠೋಪನಿಷತ್ತಿನಲ್ಲಿಯೇ ಮತ್ತೊಂದು ಕಡೆ "ಅಧ್ಯಾತ್ಮಯೋಗಾಧಿ ಗಮೇನ ದೇವಂ ಮತ್ವಾ ಧೀರೋ ಹರ್ಷ ಶೋಕೌ ಜಹಾತಿ" ಎಂದರೆ ಅಧ್ಯಾತ್ಮಯೋಗದಿಂದ ಪರಮಾತ್ಮನನ್ನು ತಿಳಿದುಕೊಂಡು ಧೀರನು ಹರ್ಷ ಶೋಕಗಳಿಂದ ಬಿಡುಗಡೆ ಹೊಂದುತ್ತಾನೆಂದು ಹೇಳಿದೆ. ಅಧ್ಯಾತ್ಮ ಯೋಗಾಧಿಗಮೇನ ವಿಷಯೇಭ್ಯಃ ಪ್ರತಿಸಂಹೃತ್ಯ ಚೇತಸ ಆತ್ಮನಿ ಸಮಾಧಾನಂ ಅಧ್ಯಾತ್ಮಯೋಗಃ'' ಎಂದು ಶಾಂಕರಭಾಷ್ಯದಲ್ಲಿ ಹೇಳಿದೆ. ಇದರಿಂದಲೂ ಹೊರಗಿನ ವಿಷಯಗಳಿಂದ ಇಂದ್ರಿಯಗಳನ್ನು ಹಿಂತಿರುಗಿಸುವುದೇ ಅಧ್ಯಾತ್ಮಯೋಗವೆಂಬುದು ಸ್ಪಷ್ಟ. "ತೇಧ್ಯಾನ ಯೋಗಾನುಗತಾ ಅಪಶ್ಯನ್ ದೇವಾತ್ಮ ಶಕ್ತಿಂ ಸ್ವಗುಣೈರ್ನಿಗೂಢಾಂ" ಎಂಬ ಶ್ವೇತಾಶ್ವತರ ಶ್ರುತಿಯಲ್ಲಿಯೂ ಧ್ಯಾನಯೋಗದಲ್ಲಿಯೇ ಶಕ್ತಿ ವಿಶಿಷ್ಟಶಿವನದರ್ಶನವಾಗುವುದೆಂದು ಹೇಳಿದೆ. ವಚನೋಪನಿಷತ್ತಿನಲ್ಲಿ ಹೇಳಿದಂತೆ—

ಮನಸ್ಸು ಬಹಿರ್ಮುಖವಾದರೆ ಮಾಯಾಪ್ರಪಂಚ; ಮನಸ್ಸು ಅಂತರ್ಮುಖ ವಾದರೆ ಅವಿರಳಜ್ಞಾನಿ; ಮನವುಭಯದಲ್ಲಿ ನಿಂತರೆ ಮುಕ್ತ; ಮನ ಲಯ ವಾದರೆ ಸೌರಾಷ್ಟ್ರ ಸೋಮಲಿಂಗದಲ್ಲಿ ಅಭೇದ.

## "ಅರ್ಥವಾದ"ದಿಂದ ತಾತ್ಪರ್ಯ ನಿರ್ಣಯ

ಕೇನೋಪನಿಷತ್ತಿನ ಮೂರು ನಾಲ್ಕನೆಯ ಅಧ್ಯಾಯಗಳಲ್ಲಿ ಒಂದು ಸುಂದರವಾದ ಕಥೆಯಿಂದ ಅದು ನೇರವಾಗಿ ಉಪನಿಷತ್ತಿನ ವಿಷಯವನ್ನು ಹೇಳದಿದ್ದರೂ ಅದರ ಉದ್ದೇಶವನ್ನು ಸಮರ್ಥಿಸುತ್ತದೆಂದು "ಅರ್ಥವಾದ" ದೃಷ್ಟಿಯಿಂದ ಹೇಳಬಹುದು. ಸರಳವಾದ ಕಥೆಯಾದುದರಿಂದ ಮೂಲ ಮಂತ್ರಗಳನ್ನು ಉಲ್ಲೇಖಿಸುವ ಅವಶ್ಯವಿಲ್ಲ. ಅಸುರರನ್ನು ಸೋಲಿಸಿದ ದೇವತೆಗಳು ಸ್ವಶಕ್ತಿಯಿಂದ ತಾವು ಗೆದ್ದುದಾಗಿ ಅಹಂಭಾವಪಟ್ಟುಕೊಂಡ ರಂತೆ. ಬ್ರಹ್ಮವು ಯಕ್ಷರೂಪದಲ್ಲಿ ಬಂದು ಒಂದು ಹುಲ್ಲುಕಡ್ಡಿಯನ್ನು ಅಗ್ನಿ ವಾಯುಗಳ ಮುಂದೆ ಇಟ್ಟಿತು. ಅಗ್ನಿಯು ಅದನ್ನು ಸುಡಲಾಗ ಲಿಲ್ಲ. ವಾಯುವು ಅದನ್ನು ಚಲಿಸಲಾಗಲಿಲ್ಲ. ಇಂದ್ರನು ಯಕ್ಷವನ್ನು ಸಮೀಪಿಸಿದಾಗ ಅದು ಮಾಯವಾಯಿತು. ಆದರೆ ಉಮಾದೇವಿಯು ಬಂದು ಇಂದ್ರನಿಗೆ ಬ್ರಹ್ಮದ ಶಕ್ತಿಯಿಂದಲೇ ಅವರು ಗೆದ್ದುದೆಂದು ಹೇಳಿ ಅವರ ಅಹಂಭಾವವನ್ನು ತೊಲಗಿಸಿದಳಂತೆ. ಇಷ್ಟೇ ಕಥೆ ಅಗ್ನಿ, ವಾಯು ಗಳಿಗೆ ದೊರಕದೆ ಇಂದ್ರನಿಗೆ ಉಮೆಯಿಂದ ಪರಮಾತ್ಮನ ಅರಿವು ಏಕಾಯಿತು?—ಎಂಬ ಪ್ರಶ್ನೆಯು ಏಳುವುದು. ಮಹರ್ಷಿ ಅರವಿಂದರು ಅವರ ಕೇನೋಪನಿಷತ್ ಗ್ರಂಥದಲ್ಲಿ ಹೇಳಿದಂತೆ ಇಂದ್ರನು ಮನಸ್ಸಿಗೆ ಅಧಿದೇವತೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ-"ಮನಸೈವಾನು ದ್ರಷ್ಟವ್ಯಂ ನೇಹ ನಾನಾಸ್ತಿ ಕಿಂಚನ" ಎಂದು ಹೇಳಿದೆ. ಇಹದ ನಾನತ್ವವು ಹೋಗಿ ಪರಾತ್ಪರದ ಏಕತ್ವವನನುಭವವಾಗವುದು ಮನಸ್ಸಿಗೆ ಮಾತ್ರ. ಆದರೆ ಮನಸ್ಸಿಗೆ ಹೀಗೆ ಪರಾನುಭವವಾಗಬೇಕಾದರೂ ಅದು ಯೋಗದ ಸಂಬಂಧಪಡಬೇಕು. ಲಲಿತಾಸಹಸ್ರನಾಮದಲ್ಲಿ ಹೇಳಿದಂತೆ ಉಮೆಯು— "ಮಹಾಯೋಗೀಶ್ವರೀಶ್ವರೀ; ಮನೋಮಯಿ, ಬಹಿರ್ಮುಖ ದುರ್ಲಭಾ, ಅಂತರ್ಮುಖ ಸಮಾರಾಧ್ಯಾ, ಯೋಗಾನಂದಾ, ಮುನಿ ಮಾನಸಹಂಸಿಕಾ" ಆಗಿದ್ದಾಳೆ. ಮನಸ್ಸಿಗೆ ಅಧಿದೇವತೆಯಾದ ಇಂದ್ರನಿಗೆ ಮಹಾಯೋಗೀಶ್ವರೀ, ಬಹಿರ್ಮುಖ ದುರ್ಲಭಾ, ಅಂತರ್ಮುಖ ಸಮಾ ರಾಧ್ಯಾ ಎನಿಸಿದ ಉಮೆಯು ದೊರೆತುದರಿಂದ ಪರಮಾತ್ಮನ ಅರಿವಾಯಿತು-

ಅರ್ಥಾತ್ ಬಹಿರ್ಮುಖವಾದ ಮನಸ್ಸಿಗೆ ಆಗುವ ಬೋಧದಿಂದ ವಿದಿತವಾಗದ ಪರಮಾತ್ಮತತ್ತ್ವವು ಅದೇ ಮನಸ್ಸು ಯೋಗದಲ್ಲಿ ಅಂತರ್ಮುಖವಾಗಿದ್ದಾಗ ಆಗುವ ಪ್ರತಿಬೋಧದಿಂದ ವಿದಿತವಾಗುವುದೆಂಬುದು ಮೇಲಿನ ಕಥೆಯ ಅಭಿಪ್ರಾಯವೆಂದು "ಅರ್ಥವಾದ" ದೃಷ್ಟಿಯಿಂದಲೂ ಹೇಳಬೇಕಾಗುವುದು.

## ಕೇನೋಪನಿಷತ್ತಿನ 'ಉಪಸಂಹಾರ'ದಿಂದ ಅದರ ತಾತ್ಪರ್ಯ ನಿರ್ಣಯ

ಮೇಲೆ ಹೇಳಿದ ಸರಳವಾದ ಕಥೆ ಕೇನೋಪನಿಷತ್ತಿನ ಮೂರನೆಯ ಅಧ್ಯಾಯದಲ್ಲಿಯೂ, ನಾಲ್ಕನೆಯ ಅಧ್ಯಾಯದ ಮೊದಲ ಮೂರು ಮಂತ್ರಗಳಲ್ಲಿಯೂ ಉಕ್ತವಾಗಿದೆ. ಉಪನಿಷತ್ತು ಕೆಳಗೆ ಕಾಣುವ ಆರು ಮಂತ್ರಗಳಿಂದ ಮುಕ್ತಾಯವಾಗುತ್ತದೆ—

ತಸ್ಯೈಷ ಆದೇಶೋ ಯದೇತದ್ ವಿದ್ಯುತೋ ವ್ಯದ್ಯುತದಾ
ಇತೀನ್ನ್ಯಮೀಮಿಷದಾ ಇತ್ಯಧಿದೈವತಂ ॥ ೪–೪ ॥

ಅಥಾಧ್ಯಾತ್ಮಂ ಯದೇತದ್ ಗಚ್ಛತೀವ ಚ ಮನೋಽನೇನ
ಚೈತದುಪಸ್ಮರತ್ಯಭೀಕ್ಷ್ಣಂ ಸಂಕಲ್ಪಃ ॥ ೪–೫ ॥

ತದ್ಧ ತದ್ವನಂ ನಾಮ ತದ್ವನಮಿತ್ಯುಪಾಸಿತವ್ಯಂ ಸ ಯ ಏತದೇವಂ
ವೇದಾಭಿ ಹೈನಗ್ಂ ಸರ್ವಾಣಿ ಭೂತಾನಿ ಸಂವಾಂಛಂತಿ ॥ ೪-೬ ॥

ಉಪನಿಷದಂ ಭೋಃ ಬ್ರೂಹೀತ್ಯುಕ್ತಾ ತ
ಉಪನಿಷದ್ ಬ್ರಾಹ್ಮೀಂ ವಾವ ತ ಉಪನಿಷದಮಬ್ರೂಮೇತಿ
॥ ೪.೭ ॥

ತಸ್ಯೈ ತಪೋದಮಃ ಕರ್ಮೇತಿ ಪ್ರತಿಷ್ಠಾ
ವೇದಾಃ ಸರ್ವಾಂಗಾನಿ ಸತ್ಯಮಾಯತನಂ ॥ ೪-೮ ॥

ಯೋ ವಾ ಏತಾಮೇವಂ ವೇದಾಪಹತ್ಯ ಪಾಪ್ಮಾನಮನಂತೇ
ಸ್ವರ್ಗೇಲೋಕೇ ಜ್ಯೇಯೇ ಪ್ರತಿತಿಷ್ಠತಿ ಪ್ರತಿತಿಷ್ಠತಿ ॥ ೪-೯ ॥

ಪದ್ಯಾನುವಾದ—

ಸುಳಿಯುವುದು ಸರಸರನೆ ಕಣ್ಣವೆಯು ಮಿಟುಕಿಪೊಲ್ ।
ಥಳಥಳಿಪ ಮಿಂಚನೊಲಿದಧಿದೈವವಾದೇಶ ॥ ೪-೪ ॥

ಪರಮನಂ ಬಳಿ ಸಾರುವೊಲಿದೆ ತಾಂ ಮನಮನಲ್ ।
ಪರಮಾತ್ಮ ವಿಷಯದೊಳ್ ಸಂಕಲ್ಪಮಂಗೈದು ।
ನಿರುತಮಾ ಪರಮಾತ್ಮನಂ ಬಿಡದೆ ಮನಮುಪ ।
ಸ್ಮರಣೆಯಂಗೈವುದಿದೆ ಅಧ್ಯಾತ್ಮದಾದೇಶ ॥ ೪-೫ ॥

ತದ್ವನಂ ಪೆಸರಿದಕೆ ಉಪಾಸಿಸುವುದಿವನಂತೆ ।
ತದ್ವನಮಿದೆಂದರಿಯೆ ಕೇವ್ಮನವನೆಲ್ಲರಿಂ ॥ ೪-೬ ॥

ಉಪನಿಷತ್ತಂ ಪೇಳ್ವುದೆನೆ ಶಿಷ್ಯ,—ಗುರುವರನು ।
ಉಪನಿಷದ್ ಬ್ರಾಹ್ಮಿಯಂ ಪೇಳ್ದವೆಂದರುಪಿದಂ ॥ ೪-೭ ॥

ಅದು ಸುಪ್ರತಿಷ್ಠಂ ಕರ್ಮ-ದಮ-ತಪಗಳೊಳ್ ।
ಅದಕೆ ವೇದಂಗಗಳಂಗಗಳ್ ಸತ್ಯಮಾಶ್ರಯಂ ॥ ೪-೮ ॥

ಇಂತು ತಿಳಿದವಗಳಿಯೆ ಪಾಪಂಗಳೆಲ್ಲಮುಮ ।
ನಂತ ಸುಸ್ವರ್ಗದೊಳ್ ಪ್ರತಿಷ್ಠಿತನಾಗುವಂ ॥ ೪-೯ ॥

ಯೋಗವನ್ನು ಮಾಡುವಾಗ ಅನುಭವವಾಗುವ ಮಿಂಚಿ ಮಿಣುಗಿ ಬೆಳಗುವ ದೃಶ್ಯಗಳ ವಿಷಯವಾಗಿ ನಿಜಗುಣಶಿವಯೋಗಿಗಳು ಹೇಳುವುದನ್ನು ತುಲನೆಗಾಗಿ ಇಲ್ಲಿ ಕೊಟ್ಟಿದೆ---

ಪವಳದ ಬಳ್ಳಿ, ಮಿಂಚಿನ ಮಾಲೆ, ಮಿಸುನಿಯ ರವೆ, ರನ್ನದೀವಿಗೆ, ತಾರಕಾಜಾಲ, ರವಿಸೋಮಶಿಖಿಯ ನೆರವಿಯಂತೆ ಪಲವು ಬಣ್ಣವು ತೋರುತಿಹ ಬಿಂದುವನು ತ್ರಿಕೂಟದೊಳು.

ಇದನ್ನು ಮೇಲಿನ ಳನೆಯ ಮಂತ್ರವಿದರೊಡನೆ ಹೋಲಿಸಿ—

ಸುಳಿವುದದು ಸರಸರನೆ ಕಣ್ಣಿವೆಯು ಮಿಟುಕಿಪೊಲ್ |
ಥಳಥಳನೆ ಮಿಂಚಿನೊಲ್-ಇದಧಿದೆ ವದಾವೇಶ ||

ಅಲ್ಲಮಪ್ರಭುವಿನ ಅನುಭವನಿದು—

ಮಿಂಚನಬಳ್ಳಿಯ ಸಂಚವ ಕಂಡಡೆ ಎನಗಿದು ಸೋಜಿಗವಾಯಿತ್ತು ಗುಹೇಶ್ವರಾ.

ಯೋಗಿಗೆ ಆಗುವ ಅನುಭವವನ್ನು ಶ್ವೇತಾಶ್ವತರೋಪನಿಷತ್ತಿನಲ್ಲಿ ಹೀಗೆ ಹೇಳಿದೆ—

ನೀಹಾರ ಧೂಮಾರ್ಕಾನಿಲಾನಲಾನಾಂ, ಖದ್ಯೋತ ವಿದ್ಯುತ್ ಸ್ಫಟಿಕ ಶಶೀನಾಂ |
ಏತಾನಿ ರೂಪಾಣಿ ಪುರಸ್ಸರಾಣಿ ಬ್ರಹ್ಮಣ್ಯಭಿವ್ಯಕ್ತಿಕರಾಣಿ ಯೋಗೇ ||

ಇದನ್ನು ಹೀಗೆ ಕನ್ನಡಿಸಬಹುದು —

ಪರಮಾತ್ಮಾಭಿವ್ಯಕ್ತಿಯ |
ದುರಿತೋರ್ಪವೊಲ್ ಸ್ಫುರಿಪುದು ಯೋಗಿಗೆ ಧೂಮಂ |
ವರವಿದ್ಯುತ್ ಖದ್ಯೋತ ಶ |
ಶಿರವಿಸ್ಫುಟಿಕಾನಿಲಾನಲಂ, ನೀಹಾರಂ ||

ಪರಮಾತ್ಮಾಭಿವ್ಯಕ್ತಿಯಾಗುವ ಮೊದಲು ತೋರುವ ಆಧಿದೈವಾನುಭವವಿದು. ಪರಮಾತ್ಮಾಭಿವ್ಯಕ್ತಿಯಾದ ಅನಂತರ ಆಗುವ ಆಧ್ಯಾತ್ಮಾನುಭವವನ್ನು ಮುಂದಿನ ಮಂತ್ರದಲ್ಲಿ ಹೇಳಿದೆ—

ನಿರುತಂ ಪರಮಾತ್ಮನಂ ಬಿಡದೆ ಮನಮುಪ |
ಸ್ಮರಣೆಯಂ ಗೈವುದಿದೆ ಆಧ್ಯಾತ್ಮದಾದೇಶ ||

ಸ್ವಾಭಾವಿಕವಾಗಿ ಹೊರಮುಖವಾಗಿ ಹರಿವ ಇಂದ್ರಿಯಸ್ರೋತದಿಂದಾಗುವ ಬೋಧದಿಂದ ಹೊರಜಗತ್ತು ವಿದಿತವಾಗುತ್ತದಷ್ಟೆ. ಹೊರಮುಖವಾಗಿ ಹರಿವ ಇಂದ್ರಿಯಗಳ ಸ್ರೋತವನ್ನು ಒಳಮುಖಮಾಡಿ ಪ್ರತಿಸ್ರೋತವಾಗುವಂತೆ ಮಾಡುವುದು ಯೋಗದಲ್ಲಿಯೇ ಸಾಧ್ಯ. ಅಂತಹ ಯೋಗದಲ್ಲಿ ಇಂದ್ರಿಯ ಪ್ರತಿಸ್ರೋತದಿಂದಾಗುವ ಪ್ರತಿಬೋಧವಿದಿತವಾದ ಪರಮಾತ್ಮಾಭಿವ್ಯಕ್ತಿಯನ್ನು ಕೇನೋಪನಿಷತ್ತು ಅದರ ಉಪಸಂಹಾರದಲ್ಲಿ ಹೇಳುತ್ತಿದೆ. ಯೋಗದಲ್ಲಿ ಇಂದ್ರಿಯಗಳನ್ನು ಒಳಮುಖವಾಗಿ ಹರಿಸುವುದರಿಂದಾಗುವ ಪ್ರತಿಬೋಧದಿಂದ ಅಮೃತತ್ತ್ವವು ದೊರೆವುದೆಂಬುದು ಕೇನೋಪನಿಷತ್ತಿನ ತಾತ್ಪರ್ಯವೆಂಬುದು ಅದರ ಉಪಸಂಹಾರದಿಂದಲೂ ವ್ಯಕ್ತವಾಗುತ್ತದೆ.

## "ಉಪಪತ್ತಿ" ಮತ್ತು ಇತರ ಷಡ್ಲಿಂಗಗಳಿಂದ ತಾತ್ಪರ್ಯ ನಿರ್ಣಯ

ಉಪಪತ್ತಿ ಎಂದರೆ ಗ್ರಂಥೋಕ್ತ ವಿಷಯದ ಉಪಪಾದನೆ (line of argument). ಗ್ರಂಥದಲ್ಲಿನ ಉಪಪಾದನೆಯ ಸಮೀಕ್ಷಣದಲ್ಲಿ ಷಡ್ಲಿಂಗಗಳೆಲ್ಲದರ ದೃಷ್ಟಿಯಿಂದ ತಾತ್ಪರ್ಯವೇನೆಂಬುದನ್ನು ಅವಲೋಕಿಸಬೇಕಾಗುವುದು. ಇದನ್ನು ಮಾಡುವಾಗ ನನ್ನ "ಕೇನೋಪನಿಷತ್ ತಾತ್ಪರ್ಯ" ಗ್ರಂಥದ ಕೆಲವು ಮಾತುಗಳಿಲ್ಲಿ ಸೂಕ್ತೋಕ್ತವಾಗುವುವು—"ಇಂದ್ರಿಯಾತೀತವಾದುದನ್ನು ಅರಿಯುವ ಬಗೆ ಹೇಗೆಂಬುದನ್ನು ತಿಳಿಸುವುದೇ ಕೇನೋಪನಿಷತ್ತಿನ ಉದ್ದೇಶ. ಶ್ರೋತ್ರಾದಿ ಇಂದ್ರಿಯಗಳಿಗೆ

ಅವವುಗಳ ಕಾರ್ಯಮಾಡಲು ಶಕ್ತಿಯನ್ನು ಪರಾತ್ಪರವು ಕೊಡುವುದಾದರೂ "ನ ಚಕ್ಷುರ್ಗಚ್ಛತಿ, ನ ವಾಗ್ಗಚ್ಛತಿ, ನೋ ಮನಃ" ಎಂದರೆ ಅದು ಇಂದ್ರಿಯ ಗಮ್ಯವಲ್ಲವೆಂದು ಹೇಳುವುದರಿಂದ ಕೇನೋಪನಿಷತ್ತು "ಉಪಕ್ರಮ"ವಾಗುವುದು. ಮತ್ತು ಪ್ರತಿಯೊಂದು ಇಂದ್ರಿಯವನ್ನು ಕುರಿತು ಬೇರೆ ಬೇರೆಯಾಗಿ ಹೇಳಿ ಆಯಾ ಇಂದ್ರಿಯಕ್ಕೆ ಪರ.ತ್ತ್ವವು ಶಕ್ತಿದಾಯಕ ವಾಗಿದ್ದರೂ ಅದನ್ನು ಆ ಇಂದ್ರಿಯದ ಮೂಲಕ ತಿಳಿಯಲಾರೆವೆಂಬುದನ್ನು ಮತ್ತೆ ಮತ್ತೆ ತಿಳಿಸಿ, ಅಭ್ಯಾಸ ಅಥವಾ ಪುನರುಕ್ತಿಯಿಂದಲೂ, ಅದೇ ಮಾತನ್ನು ಸ್ಥಾಪಿಸುತ್ತದೆ. 'ತಿಳಿದವರಿಗೆ ತಿಳಿಯದು, ತಿಳಿಯದವರಿಗೆ ತಿಳಿದಿದೆ' ಎಂದು "ಅಪೂರ್ವ" ರೀತಿಯಲ್ಲಿ ಹೇಳಿರುವುದರಲ್ಲಿಯೂ ಹಿಂದೆ ತೋರಿಸಿದಂತೆ ಇಂದ್ರಿಯಗಮ್ಯ ಬೋಧಕ್ಕೂ ಇಂದ್ರಿಯಾತೀತವಾದ ಬೋಧಕ್ಕೂ ತಾರತಮ್ಯವನ್ನು ತೋರಿಸಿದೆ. ಇಂದ್ರಿಯಾತೀತವಾದ ಪರಾತ್ಪರವನ್ನು ಪಡೆವುದೆಂಬ "ಫಲ"ದಲ್ಲಿಯೂ ಇದೇ ಸರಣಿಯು ಕಂಡು ಬರುವುದು. "ಅರ್ಥವಾದ"ವೆನ್ನಬಹುದಾದರೂ, ಆನುಷಂಗಿಕವಾಗಿ ಹೇಳಿರುವ ಕಥೆಯಿಂದಲೇ ಉಪನಿಷತ್ತು "ಉಪಸಂಹಾರ" ಎಂದರೆ ಕೊನೆಯಾಗುವುದರಿಂದ, ಈ ಕಥೆಯಲ್ಲಿ ಇಂದ್ರಿಯಗಳ ಅಧಿದೇವತೆಗಳಿಗೂ ಬ್ರಹ್ಮವನ್ನರಿಯಲಾಗಲಿಲ್ಲವೆಂದಮೇಲೆ, ಅದು ಇಂದ್ರಿಯಗಳಿಗೆ ಗೋಚರವಾ ಗದೆಂಬ ಭಾವನೆಯು ಬರುವುದೆಂದು ಹಿಂದೆಯೇ ಹೇಳಿದೆ. ಈ ಉಪನಿಷತ್ತಿನ ಮೊದಲಿಂದ ಕೊನೆಯವರೆಗಿನ ವಾದಸರಣಿಯಲ್ಲಿ ಇಂದ್ರಿಯ ಗಮ್ಯವಾದ ಜ್ಞಾನಕ್ಕೂ ಇಂದ್ರಿಯಾತೀತವಾದ ಜ್ಞಾನಕ್ಕೂ ಇರುವ ವ್ಯತ್ಯಾಸದ "ಉಪಪಾದನೆ" ಇದೆ....ಹೀಗೆ ಉಪಕ್ರಮೋಪಸಂಹಾರಾದಿ ಷಡ್ಲಿಂಗಗ ಳಿಂದಲೂ ಇಂದ್ರಿಯಗಳಿಂದ ಆಗುವ ಬೋಧಕ್ಕೂ, ಇಂದ್ರಿಯಾತೀತ ವಾದುದನ್ನು ಅವಭಾಸಮಾಡುವ ಪ್ರತಿಬೋಧಕ್ಕೂ ಇರುವ ವ್ಯತ್ಯಾಸವನ್ನು ಉಪನಿಷತ್ತಿನಲ್ಲಿ ಒತ್ತಿ ಹೇಳಿರುವುದು ಎದ್ದು ಕಾಣುವುದು. ಪರಬ್ರಹ್ಮವು ಬೋಧವಿದಿತವಲ್ಲ, ಅದು ಪ್ರತಿಬೋಧವಿದಿತವೆಂದು ಹೇಳುವುದರಲ್ಲಿಯೇ ಈ ಉಪನಿಷತ್ತಿನ ತಾತ್ಪರ್ಯವಿದೆಯೆಂದಾಯಿತು......ಇಂದ್ರಿಯಗಳು ಹರಿಯುವುದು ಹೊರಮುಖವಾಗಿಯಾದುದರಿಂದ ಹೊರಗಿರುವ ವ್ಯಕ್ತನೆ ನಿಸಿದ ಅಪರವಸ್ತುಗಳು ಅವುಗಳಿಗೆ ವಿಷಯವಾಗುವುವು. ಇದೇ ಬೋಧ;

ದರಿಂದಾಗುವುದು ಅಪರಜ್ಞಾನ. ಅಕ್ಷರವೂ ಪರವೂ ಎನಿಸಿದ ಆತ್ಮತತ್ತ್ವವು ನಮ್ಮೊಳಗಿದೆ. ಅದನ್ನರಿಯಲು ಹೊರಗಡೆ ಹರಿವ ಇಂದ್ರಿಯಗಳನು ಹಿಂತಿರುಗಿಸಿ ಒಳಮುಖಮಾಡಿ ಹರಿಯಿಸಬೇಕು ; ಇಂದ್ರಿಗಳ ಸ್ರೋತ್ತ ವನ್ನು ತಿರುಗಿಸಿ ಪ್ರತಿಸ್ರೋತವನ್ನಾಗಿಸಬೇಕು ; ಇಂದ್ರಿಯಗಳನ್ನು ಅವುಗಳ ಸ್ವಭಾವಿಕವಾದ ವೃತ್ತಿಯಿಂದ ಬಿಡಿಸಿ ವ್ಯಗ್ರವಾದ ಚಿತ್ತವನ್ನು ಧ್ಯಾನಯೋಗದಲ್ಲಿ ಹಿಂತಿರುಗಿಸಿ ಧ್ಯಾನಾಸಕ್ತನಾದಾಗ-ನೋಡಿದ ನೋಟ, ತೋರಿದ ತೋರಿಕೆ, ಹೊಳೆದ ಹೊಳಪು, ಅರಿದ ಅರಿವು, ಆದ ಅನುಭವವು ಹೇಳಲಾಗದುದು ಕೇಳಲಾಗದುದು ; ಇದೇ "ಪ್ರತಿಬೋಧವಿದಿತ" ವೆನ್ನುವುದು"

## ಶಿವಯೋಗ

ಯೋಗಿಯು ಇಷ್ಟದೈವಾನುಸಾರವಾಗಿ ಶಿವಯೋಗದಿಂದಲೋ ಅಥವಾ ನಾರಯಣಾನುಧ್ಯಾನದಿಂದಲೋ, ಇಷ್ಟದೈವದ ಸಮ್ಯಗ್‌ದರ್ಶನವು ಪ್ರತಿಬೋಧವಿದಿತವಾಗುವುದು. ಕೇನೋಪನಿಷತ್ತಿನಲ್ಲಿ ಹೇಳಿರುವುದು ಶಿವ ಯೋಗವೇ ಎನ್ನಲು ಆಧಾರವಿದೆ. ಮನಸ್ಸಿನ ಅಧಿದೈವವಾದ ಇಂದ್ರನಿಗೆ ಜ್ಞಾನುಭವವಾದುದು ಯೋಗೇಶ್ವರೀ ಎನಿಸಿದ ಉಮಾಹೈಮವತಿಯಿಂದ. ಶ್ರೀ ಶಂಕರಾಚಾರ್ಯಭಾಷ್ಯದಲ್ಲಿ 'ಉಮೈವ ಹಿಮವತೋ ದುಹಿತಾ ಹೈಮವತೀ ನಿತ್ಯಮೇವ ಸರ್ವಜ್ಞೇನೇಶ್ವರೇಣ ಸಹವರ್ತತ ಇತಿ ಜ್ಞಾತುಂ ಸಮರ್ಥಾ. ಇತಿ ಕೃತ್ವಾ ತಾಂ ಉಪಜಗಾಮ,' ಎಂದು ಹೇಳಿದೆ. ಹಿಮವಂತನ ಮಗಳಾದ ಉಮಾಹೈಮವತಿಯು ಸರ್ವಜ್ಞನಾದ ಈಶ್ವರ ನೊಡನೆ ಸದಾ ಇರುವಳಾದುದರಿಂದ ಅವಳು ಆತನ ಸ್ವರೂಪವನ್ನು ಬಲ್ಲವಳು ಎಂದು ತಿಳಿದು ಇಂದ್ರನು ಆಕೆಯನ್ನು ಸಮೀಪಿಸಿದನು-ಎಂಬುದು ಉಪನಿಷತ್ತಿನಲ್ಲಿ ಹೇಳಿರುವುದರ ಭಾಷ್ಯದಲ್ಲಿನ ವಿವರಣೆ. ಪರಶಿವಬ್ರಹ್ಮದ ಸಮ್ಯಗ್ದರ್ಶನವೇ ಕೇನೋಪನಿಷತ್ತಿನ ಪ್ರಕಾರ ಯೋಗಿಗೆ ಲಕ್ಷ್ಯವೆಂಬುದು ಇದರಿಂದ ಸ್ಪಷ್ಟ.

ಕೇನೋಪನಿಷತ್ತಿನಲ್ಲಿ ಉಕ್ತವಾಗಿರುವ ಯೋಗದಲ್ಲಿ ಮೊದಲು

ವಿವರವು ವುಡ್‌ರಾಫ್‌ರ 'Introduction to Tantra Sastra' ಗ್ರಂಥದಿಂದ (ಪುಟ 135-138) ತಿಳಿಯಬಹುದು.[1] ಶ್ರೀ ಸರ್ಪಭೂಷಣ ಶಿವಯೋಗಿಗಳ ಕೃತಿಯ ಮೇಲೆ ಈ ಆಧಾರಗಳು ಸಾಕಾದಷ್ಟು ಬೆಳಕನ್ನು ಬೀರುವುವು. ಅವರು ಹೇಳುವಂತೆ, ಶಿವಯೋಗಿಯು ಜೀವಾತ್ಮನು ಸೌಷುಮ್ನ ರಂಧ್ರದಿ ತೂರಿ, ಧರೆಗಡಿಯೂರಿ ಸಲಿಲವ ಹಾರಿ, ದಹನನಿಗೇರಿ, ಮರತನ ಮೀರಿ, ಗಗನವ ತೂರಿ, ಬ್ರಹ್ಮದಿ ಸೇರಿ, ಅಮೃತವ ಪೀರಿ ಸುಖಿಸುವ ಯೋಗ ಮಾರ್ಗ ನಿರ್ಯೋಗಮೊಳಿಹ ಶಿವಯೋಗಿಗೆ ನಮಿಸುವೆನು" ಎಂದು ಈ ವಿಷಯವನ್ನು ಮುಕ್ತಾಯಗೊಳಿಸಬಹುದು.

ಹರಿವ ಮನ ವಾಯುವನೊಂದು ಹುರಿಯ ಮಾಡಿ, ಮನವ ಸ್ಥಿರಗೊಳಿಸಿ, ಸಗುಣಧ್ಯಾನದಲ್ಲಿ ಮನವ ಸವಿದು, ನಿರ್ಗುಣದಲ್ಲಿ ನಿಂದು, ಆ ನಿರ್ಗುಣಧ್ಯಾನ ಬಲಿದು, ಸಗುಣನಿರ್ಗುಣದಲ್ಲಿ ಅಡಗಿ, ಆ ನಿರ್ಗುಣವಾದ ನಿಜದಲ್ಲಿ ಮನೋಲಯವಾದುದೇ ..... ರಾಜಯೋಗ.

ದಶದಳಕಮಲದಲ್ಲಿ ಶಶಿಕಳೆ ಪಸರಿಸಲು, ಶಶಿಕಳೆಯೊಳಗೆ ರವಿಯ ಬೆಳಗು ನೋಡಾ. ರವಿ ಶಶಿ ಏಕರಸಮಯವಾಗಿ ಓಂಕಾರ ಒಂದಾದ ನಾದಃ ಆದು ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ. ಅಜ್ಞೇಯದಲ್ಲಿ ಕಂಡು ಕೂಡಿ ಸುಖಿಸುತಿರ್ದೆನಯ್ಯಾ. ಆ ನಾದ ಆ ಬೆಳಗಿನ ಕಳೆ ಶೂನ್ಯದಲ್ಲಿ ಅಡಗಲು, ನಾನು ನೀನಾದೆನು, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

---

1. As kundalini reaches Swadistana . the Prithvi or earth chakra is dissolved . When Devi reaches Manipura the Varuna Vija is dissolved in fire ; Kundalini next reaches Anahatachakra ; the Vija Tejus dissappears in Vayu. Kundalini then ascends to Vishudha Chakra, the Vija of Vayu 'yang' is dissolved in Akasha ; Devi reaches Agna Chakra . Akasha . is merged in Manas Chakra and mind itself in the body of Kundalini . Kundalini of her own motion unites with Parama Siva.

# ವೇದದಿಂದ ವಚನದವರೆಗೆ ಸಿಂಹಾವಲೋಕನ

ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯಮಾಮೃತಾತ್ ॥
ಎಂದು ಋಗ್ವೇದದ ದಶಮಮಂಡಲದಲ್ಲಿ ಮಂತ್ರದ್ರಷ್ಟರಾದ ಋಷಿಪುಂಗವರು ಹುಟ್ಟುಸಾವುಗಳಿಂದ ಕೂಡಿದ ಸಂಸಾರಬಂಧನದಿಂದ ಬಿಡುಗಡೆ ಹೊಂದಿ, ಮೋಕ್ಷಕ್ಕಾಗಿ ತ್ರಿಮೂರ್ತಿಗಳಿಗೂ ಕಾರಣವಾದ[1] ಪರಶಿವ ಬ್ರಹ್ಮವನ್ನು ಪ್ರಾರ್ಥಿಸಿರುದು ಭಾರತೀಯಸನಾತನ ಧರ್ಮದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಲರ್ಹವಾದ ವಿಷಯವಾಗಿದೆ. ಏಕೆಂದರೆ ಮೊದಲನೆಯದಾಗಿ ಆವರೆಗೂ ಅವರು ಇಂದ್ರಾದಿ ಅನೇಕದೇವತೆಗಳನ್ನು ಪ್ರಾರ್ಥಿಸುತ್ತಿದ್ದರು. "ಏಕಂ ಸದ್ ವಿಪ್ರಾ ಬಹುಧಾ ವದಂತಿ" ಎಂದರೆ "ದೇವನೊಬ್ಬ ನಾಮ ಹಲವು" ಎಂಬ ಕಲ್ಪನೆ ಬೆಳೆದು, ಇಂದ್ರಾದಿ ದೇವತೆಗಳೆಲ್ಲರಿಗೂ ಕಾರಣವಾದ ದೈವದ ಕಲ್ಪನೆಯು ಬಂದುದು ಪ್ರಮುಖ ವಿಷಯವೆ. ಎರಡನೆಯದಾಗಿ ಆದುವರೆಗೂ ಅವರು ಪ್ರಾರ್ಥಿಸುತ್ತಿದ್ದುದು ತಮ್ಮ ಪಶುಧನಧಾನ್ಯಾಭಿವೃದ್ಧಿ, ರಾಜ್ಯವಿಸ್ತರಣ, ಶತ್ರುನಿಗ್ರಹಾದಿ ಅಶಾಶ್ವತ ಫಲಪ್ರದಕ್ಕಾಗಿ ; ಈ ಮಂತ್ರದಲ್ಲಿಯಾದರೋ ಸಂಸಾರಬಂಧನದಿಂದ ಕಳಚಿಕೊಂಡು ಶಾಶ್ವತವಾದ ಮೋಕ್ಷಕ್ಕಾಗಿ ಪ್ರಾರ್ಥನೆಯಿದೆ. ಅಲ್ಲದೆ ಋಗ್ವೇದದ ಈ ದಶಮಂಡಲದಲ್ಲಿಯೇ ಉಪನಿಷತ್ತಿಗೂ ತಳಹದಿಯೆನಿಸುವ ನಾಸದೀಯ ಸೂಕ್ತವಿರುವುದು.[2] ಸೂರ್ಯ ಚಂದ್ರ

---

1. ತ್ರ್ಯಂಬಕಂ-ತ್ರಯಾಣಾಂ ಬ್ರಹ್ಮ ವಿಷ್ಣುರುದ್ರಾಣಾಂ ಅಂಬಕಂ ಪಿತರಂ—ಸಾಯಣಭಾಷ್ಯ.

2. ನಾಸದಾಸೀನ್ನೋಸದಾಸೀತ್ತದಾನೀಂ ನಾಸಿದ್ರಜೋ ನೋ ವ್ಯೋಮಾಪರೋಯತ್.... ನ ಮೃತ್ಯು ರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ ಪ್ರಕೇತಃ । ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಽಽಸ ॥

ಹಗಲು, ರಾತ್ರಿ, ಭೂಮಿ, ಆಕಾಶ ಮೊದಲಾದವುಗಳ ಸೃಷ್ಟಿಯಾಗುವುದರ ಮೊದಲು ಸದಸತ್ತುಗಳ ಕಲ್ಪನೆಗೊಳಗಾಗದ "ಆಭು" ಎಂದರೆ ಬಟ್ಟ ಬಯಲೇ ಆದ ಪರಬ್ರಹ್ಮದ ಕಲ್ಪನೆಯು ಈ ಸೂಕ್ತದಲ್ಲಿ ಮೊದಲು ಕಂಡು ಬರುವುದು. "ಯದಾತಮಃ"[1] ಎಂದು ಮೊದಲಾಗಿರುವ ಶ್ವೇತಾಶ್ವತರ ಶ್ರುತಿಯಲ್ಲಿ ಈ ನಾಸದೀಯ ಸೂಕ್ತದಲ್ಲಿ ನಿರ್ದೇಶಿಸಲ್ಪಟ್ಟ ಪರಬ್ರಹ್ಮವು ಶಿವನೇ ಎಂಬುದು ಸ್ಪಷ್ಟ ಮಾಡಲ್ಪಟ್ಟಿದೆ. ಈ ನಾಸದೀಯ ಸೂಕ್ತ ದಲ್ಲಿಯೇ 'ಆನೀದವಾತಂ ಸ್ವಧಯಾ" ಎಂದರೆ ಸ್ವಶಕ್ತಿಯಿಂದ ಆ ಪರಶಿವಬ್ರಹ್ಮವು ಸ್ಫುರಿಸುತ್ತಿದ್ದಿತು ಎಂದು ಹೇಳಿದೆ. ಹೀಗೆ ಪರಶಿವ ಬ್ರಹ್ಮವು ಶಕ್ತಿಯುತವಾದುದನ್ನು ನಾಸದೀಯ ಸೂಕ್ತದ ಈ ಭಾಗದಲ್ಲಿ ಹೇಳಿದೆಯೆಂಬುದು ಅದರ ಸಾಯಣ ಭಾಷ್ಯ[2]ದಿಂದ ಸ್ಪಷ್ಟವಾಗುತ್ತದೆ. "ತದೇಕಂ" ಎಂದರೆ ಅದು ಒಂದೆಯೆಂದು ನಾಸದೀಯ ಸೂಕ್ತದಲ್ಲಿಯೇ ಹೇಳಿರುವುವಲ್ಲದೆ, ಅದರಲ್ಲಿ 'ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ' ಎಂದರೆ, ಅದರ ಹೊರತು ಮತ್ತೇನು ಇರಲಿಲ್ಲವೆಂದು ಹೇಳಿದೆ. ಇದರಿಂದ ನಾಸದೀಯ ಸೂಕ್ತದಲ್ಲಿ ಹೇಳಿದ ಪರಶಿವಬ್ರಹ್ಮವು ಶಕ್ತಿವಿಶಿಷ್ಟವೂ ಅದ್ವೈತವೂ ಆಗಿದೆ ಯೆಂದಾಯಿಂತು.

ಈ ಮಂತ್ರದಲ್ಲಿ "ತುಚ್ಛೇನಾಭ್ವಪಿಹಿತಂ" ಎಂದು ಹೇಳಿರುವುದು ಗಮನಾರ್ಹವಿಷಯ. "ಬೃಹತ್ವಾತ್" ಎಂದರೆ ಬಹುದೊಡ್ಡದು ಎಂಬ ಕಲ್ಪನೆಯಿಂದ ರೂಪಿಸಲ್ಪಟ್ಟ "ಬ್ರಹ್ಮ" ಎಂಬ ಪಾರಿಭಾಷಿಕ ಪದವು ನಾಸದೀಯ ಸೂಕ್ತದ ಹೊತ್ತಿಗೆ ರೂಪಿಸಲ್ಪಟ್ಟಂತೆ ಕಂಡುಬರುವುದಿಲ್ಲ. ಸದಸತ್ತುಗಳಿಗೆ ಆಚೆಯಿದ್ದುದೆಂದು ಹೇಳಲ್ಪಟ್ಟದು ಇಲ್ಲಿ "ಆಭು"

---

1. ಯದಾ ತಮಸ್ತನ್ನದಿವಾ ನ ರಾತ್ರಿಃ ನ ಸನ್ನ ಚಾ ಸಚ್ಛಿವ ಏವ ಕೇವಲಃ| ತದಕ್ಷರಂ ತತ್ ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ ||

2 ಸ್ವಧಾ ಮಾಯಾ ತಯಾ ತದ್ ಬ್ರಹ್ಮೈಕಮವಿಭಾಗಾಪನ್ನ ಮಾಸೀತ್ ||

ಎಂದು ಕರೆಯಲ್ಪಟ್ಟಿದೆ. ಈ ಸೂಕ್ತವನ್ನು ಇಂಗ್ಲೀಷಿಗೆ ಭಾಷಾಂತರಿಸು ವಾಗ "void" ಎಂಬ ಪದವನ್ನು ಉಪಯೋಗಿಸಿದ್ದಾರೆ. ಮುಂದೆ ಬಸವಾದಿ ಪ್ರಮಥರ ಕಾಲದಲ್ಲಿ ಅಂಗ, ಲಿಂಗ 'ಸಮರಸ' ಮೊದಲಾದ ಪದಗಳನ್ನು ರೂಪಿಸಿಕೊಂಡಾಗ ಬ್ರಹ್ಮ ಪದದ ಬದಲು ರೂಪಿಸಿಕೊಂಡ "ಬಯಲು" ಎಂಬ ಪದವೂ ಈ "ಆಭು'' ಪದಕ್ಕೆ ಸಮಾನಾರ್ಥವುಳ್ಳ ದಾಗಿದೆ. "ತುಚ್ಛ"ವೆಂದರೆ ಮಾಯೆಯೆಂದು ಪಂಚದಶಿಯಲ್ಲಿ ಅರ್ಥ ಮಾಡಿವೆ. ತುಚ್ಛೇನ ಆಭು ಅಪಿಹಿತಂ' ಎಂದರೆ ಪರಬ್ರಹ್ಮವು ಮಾಯೆಯಿಂದ ಮುಚ್ಚಲ್ಪಟ್ಟಿದೆಯೆಂದು ಹೇಳಿದಂತಾಯಿತು. ಮಾಯೆ ಯೆಂದರೆ ಪರಶಿವಶಕ್ತಿ ; ಅದರ ಪರಿಣಾಮವಾಗಿ ಮನೋಹರವಾಗಿ ಆಗಿ ರುವ ಈ ಜಗತ್ತಿನಲ್ಲಿಯೂ ಮಾನವ ದೇಹದಲ್ಲಿಯೂ ಅಪಿಹಿತವಾಗಿರುವುದು ಪರಬ್ರಹ್ಮವು ಈ ವಿಷಯವನ್ನು 'ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿ ಹಿತಂ ಮುಖಂ' ಎಂಬ ಈಶದ ಶ್ರುತಿಯಲ್ಲಿಯೂ "ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮನಿಷ್ಕಲಂ" ಎಂಬ ಮುಂಡಕ ಶ್ರುತಿ ಯಲ್ಲಿಯೂ ಕಾಣಬಹುದು. "ಕಾಮಸ್ತದಗ್ರೇ" ಎಂದು ಮೊದಲಾಗುವ ನಾಸದೀಯ ಸೂಕ್ತದ ಶ್ರುತಿಯಲ್ಲಿ ಕಾಮ ಎಂದರೆ ಇಚ್ಛಾಶಕ್ತಿಯೇ ಸೃಷ್ಟಿಗೆ ಬೀಜವಾಯಿತು ಎಂದು ಹೇಳಿರುವುದರಲ್ಲಿ ಇಚ್ಛಾಶಕ್ತಿಯ ಆವಿರ್ಭಾವವನ್ನು ಹೇಳಿದೆ. ಜ್ಞಾನಶಕ್ತಿಯ ಆವಿರ್ಭಾವವನ್ನು ಹೇಳುವ "ತಪಸಸ್ತನ್ಮಹಿನಾಜಾಯತೈಕಂ" ಎಂದು ಹೇಳುವ ನಾಸದೀಯ ಸೂಕ್ತದ ಋಕ್ಕಿನ ಸಾಯಣಭಾಷ್ಯದಲ್ಲಿ[1] ಮಾಯಾಸಹಿತನಾದ ಪರಮೇಶ್ವರನು ಜಗತ್ತೆಲ್ಲವನ್ನೂ ಸೃಷ್ಟಿಸಿ ಅದರಲ್ಲಿ ಅನುಪ್ರವೇಶಮಾಡಿ ಭೋಕ್ತೃ ಭೋಗ್ಯಾದಿ ರೂಪವಾಗಿ ವಿಭಾಗಿಸಿದನು ಎಂದು ಮಂತ್ರದ ಅರ್ಥವನ್ನು ವಿವರಿಸಿದೆ. ಈ ನಿಲುವು ಶ್ವೇತಾಶ್ವತರದಲ್ಲಿಯೂ ಅನಂತರ ಶಿವಮಹಾಪುರಾಣದಲ್ಲಿಯೂ ಸ್ಪಷ್ಟೀಕರಿಸಲ್ಪಟ್ಟು ವೀರಶೈವರ ಸಿದ್ಧಾಂತ

---

1. ಏವಂ ಮಾಯಾ ಸಹಿತಃ ಪರಮೇಶ್ವರಃ ಸರ್ವಂ ಜಗತ್ ಸೃಷ್ಟ್ವಾ ಸ್ವಯಂ ಚಾನು ಪ್ರವಿಶ್ಯ ಭೋಕ್ತೃಭೋಗ್ಯಾದಿರೂಪೇಣ ವಿಭಾಗಂ ಕೃತ ವಾನಿತ್ಯರ್ಥಃ

ಶಿಖಾಮಣಿಯ ನಿಲುವಿನ ವೈಶಿಷ್ಟ್ಯವಾಗಿದೆ. ಈ ನಿಲುವು ನಾಸದೀಯ ಸೂಕ್ತದಲ್ಲಿ ಇದೆಯೆಂಬುದು ಗಮನಾರ್ಹವಾಗಿದೆ. ವಿಸ್ತಾರವಾಗಿ ಇದುವರೆಗೆ ಹೇಳಿರುವ ವಿಷಯಗಳ ಸಾರಾಂಶವು ಇದೇ ಆಗಿದೆ.

## ಅಂದಿನ ವರ್ಣಲಿಂಗ ತಾರತಮ್ಯರಹಿತ ಸಮಾಜ

ಈ ಸುವರ್ಣಯುಗವು ಇತರ ವಿಷಯಗಳಲ್ಲಿಯೂ ಆದರ್ಶವಾಗಿದ್ದಿತು ಜಾತಿಭೇದ ಸ್ತ್ರೀಪುರುಷತಾರತಮ್ಯ ಮೊದಲಾದ ತಾರತಮ್ಯಗಳಿಲ್ಲದ ಕಾಲವದು. ದೇವರಿಗೂ, ಭಕ್ತರಿಗೂ ಮಧ್ಯೆ ದಳ್ಳಾಳಿಗಳಂತೆ ವರ್ತಿಸುವ ಸಂಪ್ರದಾಯಶರಣರೂ, ಕರ್ಮಠರೂ ಆದ ಪುರೋಹಿತವರ್ಗವು ಇನ್ನೂ ಏರ್ಪಟ್ಟಿರಲಿಲ್ಲ. ಅಷ್ಟೇ ಏಕೆ ? ವೇದವ್ಯಾಸರೇ ಮೊದಲಾದವರು ಯಾರ ಹೊಟ್ಟೆಯಲ್ಲಿ ಹುಟ್ಟಿದವರು ಎಂಬುದನ್ನು ಗಮನಿಸಬಾರದೆಂಬುದು, ನದಿಯ ಮೂಲ ಋಷಿಯ ಮೂಲ ಎಣಿಸಬಾರದೆಂಬ ನಾಣ್ನುಡಿಯಲ್ಲಿ ಜನಜನಿತವಾಗಿದೆ. ದಾಸಸ್ತ್ರೀಯ ಪುತ್ರನಾದ ಕವಷನು ಋಗ್ವೇದದ ಐದು ಸೂಕ್ತಗಳಿಗೆ ಋಷಿ. ಭಲಂದನ, ವತ್ಸ. ಸಂಕೀಲ ಎಂಬುವ ಋಷಿಗಳು ವೈಶ್ಯರು. ಘೋಷಾ ಎಂಬ ಸ್ತ್ರೀಯು ಋಗ್ವೇದದ ೧೦ನೆಯ ಮಂಡಲದ ೩೯-೪೦ ಮತ್ತು ೪೧ನೆಯ ಸೂಕ್ತಗಳ ನಿರ್ಮಾತೃಯಾಗಿದ್ದಾಳೆ ಮಂತ್ರದ್ರಷ್ಟರಾದ ಸ್ತ್ರೀಯರಿಗೆ 'ಋಷಿಕಾ' ಎಂದು ಹೆಸರು. ಇವರಲ್ಲಿ ಮೂರು ಪಂಗಡಗಳು ಎಂದು ಬೃಹದ್ದೇವತೆಯಲ್ಲಿ[1] ಹೇಳಿದೆ. ಅದರಲ್ಲಿ ಹೇಳಿದಂತೆ ಘೋಷಾ ಮೊದಲಾದವರು ಮೊದಲಗುಂಪಿನವರು. ಹೀಗೆ ಜಾತಿ, ಲಿಂಗ ತಾರತಮ್ಯಗಳು ಇಲ್ಲದೆ ಪ್ರತಿಯೊಬ್ಬರಿಗೂ ಅದು ಅವರವರ ಯೋಗ್ಯತೆಯ ಮೇಲೆ ಗೌರವ ಸಲ್ಲುತ್ತಿದ್ದ ಕಾಲವಾಗಿತ್ತು. ಪ್ರತಿಭಾಶಾಲಿಗಳಾದ ಋಗ್ವೇದ ಋಷಿಗಳ ತೇಜಸ್ಸಿನಿಂದ ಬೆಳಗಿದ ಕಾಲವದು ಮುಂದಿನ ಕಾಲದವರಿಗೆ ಆದರ್ಶವಾಗಿದೆ.

---

1. ಘೋಷಾ ಗೋಧಾ ವಿಶ್ವವಾರಾ ಅಪಲೋಪ ನಿಷನ್ನಿಷತ್ |
ಬ್ರಹ್ಮ ಜಾಯಾ ಜುಹುರ್ನಾಮ ಅಗಸ್ತ್ಯಸ್ಯ ಸ್ವಸಾ ದಿತಿಃ ||-ಬೃಹದ್ದೇವತೆ

## ಬ್ರಾಹ್ಮಣಗಳ ಕಾಲದ ಅಂಧತಮಸ್ಸು

ಕಾಲಚಕ್ರ ಉರುಳಿ ಅರಿವು ಬೆಳಗಿದಕಾಲವು ಮುಗಿದು ಅಂಧಕಾರದ ಕಾಲವು ಬಂದಿತು ಅಂಧಶ್ರದ್ಧೆಯ ಪೌರೋಹಿತರ ಕಾಲವದು ಬ್ರಾಹ್ಮಣಗಳ ಕಾಲ ರಾನಡೆಯುವರ "ಉಪನಿಷತ್ ರಹಸ್ಯ" ಗ್ರಂಥದಲ್ಲಿ ಹೇಳಿದಂತೆ—"ಋಗ್ವೇದ ಸೂಕ್ತಗಳಲ್ಲಿ ಕಂಡುಬರುವ ಆ ನಿರ್ಮಲ ಭಾವವು ಬ್ರಾಹ್ಮಣ ಕಾಲದಲ್ಲಿ ಆದೆಂತು ಮಲಿನವಾಯಿತೆಂಬುದು ತಿಳಿಯದ ಮಾತು. ಬ್ರಾಹ್ಮಣ ಗ್ರಂಥಗಳು ಅರ್ಥವಿಹೀನವಿಧಿವಿಧಾನಗಳ ಮೊಟ್ಟೆಯನ್ನು ಶುದ್ಧ ವೇದಸೂಕ್ತಗಳ ಮೇಲೆ ಹೇರಿ, ಯಜಮಾನನ ಗೌರವ ವಿಹೀನ ಜೀವನಕ್ರಮುವನ್ನು ಎತ್ತಿಹಿಡಿಯಲಿಕ್ಕೆ ವೇದಮಂತ್ರಗಳ ಉಪಯೋಗವನ್ನು ಮಾಡಿರುವುವು. ಯಜಮಾನನ ಜೀವನಕ್ರಮಕ್ಕೆ ಮಂತ್ರಗಳು ಪ್ರತ್ಯಕ್ಷ ಉಪಯುಕ್ತವಿರುವವೆಂದು ತೋರಿಸುವ ಭರದಲ್ಲಿ ಬ್ರಾಹ್ಮಣ ಗ್ರಂಥಗಳು, ದಂತಕಥೆ, ವೇದವ್ಯಾಖ್ಯಾನ, ವ್ಯುತ್ಪತ್ತಿಶಾಸ್ತ್ರ, ತತ್ತ್ವಶಾಸ್ತ್ರಗಳಲ್ಲಿಯ ಕಲ್ಪನೆ ಮುಂತಾದುವುಗಳನ್ನು ಕಲೆಸಿಬಿಡುವುದನ್ನು ನೋಡಿದರೆ ಚಮತ್ಕಾರವೆನಿಸುವುದು. ನಾನಾಬಗೆಯ ಯಜ್ಞವಿಧಿಗಳನ್ನು ಕಲ್ಪಿಸುವುದಕ್ಕೆ ಇಷ್ಟೊಂದು ಬುದ್ಧಿಸಾಮರ್ಥ್ಯವನ್ನು ವೆಚ್ಚಮಾಡಿರುವುದನ್ನು ನೋಡಿದರೆ ಬ್ರಾಹ್ಮಣಕಾಲದ ಜನರ ಬಗ್ಗೆ ಕನಿಕರವುಂಟಾಗುವುದು."

## ಗೀತೋಪನಿಷತ್ತುಗಳ ಕಾಲದಲ್ಲಿ ಬೆಳಕು ಹರಿಯಿತು

ಕಾಲಚಕ್ರ ಉರುಳಿ ತಮಸ್ಸುಹರಿದು ಬೆಳಗಾಯಿತು. ಧರ್ಮಗ್ಲಾನಿಯನ್ನು ಪರಿಹರಿಸಲು ದೇವಾಂಶಪುರುಷರ ಅವತಾರವಾಗಿ ಉಪನಿಷತ್ತುಗಳ ಮತ್ತು ಭಗವದ್ಗೀತೆಯ ಉದಯವಾಯಿತು. ಸಹಸ್ರಾರು ಪ್ರಾಣಿಗಳ ವಧೆಯಿಂದಲೂ, ನೀತಿಬಾಹಿರ ಕ್ರಿಯೆಗಳಿಂದಲೂ ಕೂಡಿದ ಅಶ್ವಮೇಧಾದಿ ಯಜ್ಞಯಾಗಗಳು ವಿವೇಚನೆಯುಳ್ಳ ಜನರ ಕಣ್ಣನ್ನು ತೆರೆಯಿಸಿದವು. ಭವಸಾಗರವನ್ನು ದಾಟಲು ಯಜ್ಞಯಾಗಾದಿಗಳೆಂಬ ಒಡಕುದೋಣಿಗಳನ್ನು ನಂಬಬಾರದೆಂದೂ[1] ಹಾಗೆ ನಂಬುತ್ತ, ತಾವೇ

---

1. ಪ್ಲವಾ ಹ್ಯೇತೇಽದೃಢಾಯಜ್ಞ ರೂಪಾಃ

ಪಂಡಿತರೆಂದು ತಿಳಿದ ಜನರು ದಡ್ಡರೆಂದೂ[1] ಮುಂಡಕೋಪಪನಿಷ್ತು ಸಾರುತ್ತದೆ. ಛಾಂದೋಗ್ಯೋಪನಿಷತ್ತಿನ "ಶಾವ ಉದ್ಗೀಥ"ದಲ್ಲಿ ಯಜ್ಞ ಯಾಗಮಾಡುವ ಋತ್ವಿಜರನ್ನು ನಾಯಿಗಳಿಗೆ ಹೋಲಿಸಿದೆ. ಭಗವದ್ಗೀತೆ ಯಲ್ಲಿ[2] ಅಶಾಶ್ವತ ಸ್ವರ್ಗಸುಖ ಕಾಮಿಗಳಾಗಿ ವೇದದ ಪೂರ್ವ ಭಾಗದಲ್ಲಿ ಹೇಳುವ ಯಜ್ಞಗಳನ್ನು ಮಾಡುವವರು ದಡ್ಡರೆಂದು ಹೀಯಾಳಿ ಸಿದೆ. ಇಹಪರ ಫಲಗಳನ್ನು ಕೊಡುವುವೆಂಬ ಆಸೆಯಿಂದ ಮಾಡುವ ಯಜ್ಞಯಾಗಾದಿಕರ್ಮವನ್ನು ನಿಂದಿಸಿದಮಾತ್ರಕ್ಕೆ ಕರ್ತವ್ಯ ಕರ್ಮಗಳನ್ನು ಮಾಡದೆ ಕರ್ಮಸಂನ್ಯಾಸಿಯಾಗಬೇಕೆಂಬುದು ಗೀತೋಪನಿಷತ್ತು ಗಳ ನಿಲುವಲ್ಲ. ನಿಷ್ಕಾಮಕರ್ಮವನ್ನು ಮಾಡುವವನು ನಿಜವಾದ ಸಂನ್ಯಾಸಿಯೇ ಹೊರತು ಅಗ್ನಿಕಾರ್ಯವನ್ನಾಗಲೀ, ಇತರ ಎಂದರೆ ವ್ಯವ ಹಾರಿಕ ಕ್ರಿಯೆಗಳನ್ನಾಗಲೀ ಬಿಟ್ಟವನು ನಿಜವಾದ ಸಂನ್ಯಾಸಿಯಲ್ಲವೆಂದು ಗೀತೆಯಲ್ಲಿ ಹೇಳಿದೆ.[3] ಕರ್ಮಮಾಡುವುದರಿಂದಾಗುವ ಬಂಧನವನ್ನು ತಪ್ಪಿಸಿ ಕೊಳ್ಳುವ ಉಪಾಯವು ಕರ್ಮದ ಫಲದಲ್ಲಿ ಆಸೆಯಿಡದೆ ಕರ್ಮ ಮಾಡು ವುದೇ ಆಗಿದೆ. ಹಿಂದೆಯೇ ವಿಸ್ತಾರವಾಗಿ ನಿರೂಪಿಸಿದಂತೆ ಕರ್ಮದ ಬಂಧನ ವಾಗದಂತಹ ಕರ್ಮಾಚರಣೆಯನ್ನೂ ಅದಕ್ಕೆ ತಕ್ಕ ಅರಿವನ್ನೂ ಮೊದಲೆರಡು ಮಂತ್ರಗಳಲ್ಲಿಯೇ ದಶೋಪನಿಷತ್ತುಗಳಿಗೂ ಮೊದಲನೆಯದಾಗಿ ಎಣಿ ಸಲ್ಪಟ್ಟಿರುವ ಈಶೋಪನಿಷತ್ತು ಹೇಳುವುದು. ಚರಾಚರಾತ್ಮಕವಾದ ಜಗತ್ತೆಲ್ಲ ಈಶಾವಾಸ್ಯವಾಗಿದೆಯೆಂದ ಮೇಲೆ ಎಲ್ಲವೂ ಈಶನದೆ ಎಂದರೆ ಶಿವನದೆ; ತನ್ನದು, ಪರರದು, ಎಂಬ ಭಾವನೆಗೆ ಕಾರಣವೇ ಇಲ್ಲ, ಆದುದ ರಿಂದ ಶಿವನ ಪ್ರಸಾದವೆಂದು ಎಲ್ಲವನ್ನೂ ಭೋಗಿಸಬೇಕು ಆಸೆಯನ್ನು

---

1. ಅಂಧೇನೈವ ನೀಯಮಾನಾ ಯಥಾಂಧಾಃ

2. ಅವಿಪಶ್ಚಿತಃ ವೇದವಾದ ರತಾಃ ಪಾರ್ಥನಾನ್ಯದಸ್ತೀತಿವಾದಿನಃ ಕಾಮಾತ್ಮಾನಃ ಸ್ವರ್ಗಪರಾಃ—(ಭ.ಗೀ. ೨-೪೨)

3. ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ।
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ॥
(ಭ. ಗೀ. ೬-೧)

ತೊರೆಯಬೇಕು—ಎಂದು ಮೊದಲನೆಯ ಮಂತ್ರವು ಹೇಳುವುದು.[1] ಕರ್ಮದ ಫಲದಲ್ಲಿ ಆಸೆಯನ್ನು ತೊರೆಯುವುದರಿಂದ ಕರ್ಮಬಂಧನವಾಗುವುದಿಲ್ಲ. ಕರ್ಮಬಂಧನವಾಗದಂತೆ ಯಾವಜ್ಜೀವವೂ ಕರ್ಮವನ್ನು ಮಾಡಬೇಕೆಂದು ಈಶದ ಎರಡನೆಯ ಮಂತ್ರದಲ್ಲಿ ಹೇಳಿರುವುದೇ[2] ಮೊದಲನೆಯ ಮಂತ್ರದಲ್ಲಿ ಹೇಳಿರುವ ಅರಿವಿಗೆ ತಕ್ಕ ಆಚರಣೆ ಕರ್ಮಬಂಧನವಾಗದಂತೆ ಹೀಗೆ ಕುಶಲತೆಯಿಂದ ಮಾಡುವ ಕರ್ಮಕ್ಕೆ ಭಗವದ್ಗೀತೆಯಲ್ಲಿ 'ಯೋಗ'ವೆಂದು ಹೆಸರು. ಮುಂದೆ ಬಸವಾದಿ ಪ್ರಮಥರು ಹೀಗೆ ಕರ್ಮಫಲದಲ್ಲಿ ಆಸೆಯಿಡದೆ ಮಾಡುವ ಕರ್ಮಕ್ಕೆ "ಕಾಯಕ" ಎಂದು ಕರೆದರು. ಹೀಗಿರುವ ಗೀತೆಯಲ್ಲಿನ "ಯೋಗ"ಕ್ಕೂ ಬಸವಾದಿ ಪ್ರಮಥರ "ಕಾಯಕ"ದ ಕಲ್ಪನೆಗೂ, ಹಾಗೂ ಮಹಾತ್ಮ ಗಾಂಧಿಯವರ "ಅನಾಸಕ್ತಿಯೋಗ"ಕ್ಕೂ ಈಶಾವಾಸ್ಯೋಪನಿಷತ್ತಿನ ಮೊದಲೆರಡು ಮಂತ್ರಗಳೇ ಮೂಲವಾಗಿವೆ.

## ಶಕ್ತಿವಿಶಿಷ್ಟ ಶಿವನ ಕಲ್ಪನೆ

ಇಂದ್ರಾದಿ ದೇವತೆಗಳನ್ನು ಫಲಾಪೇಕ್ಷಿಗಳಾಗಿ ಪ್ರಾರ್ಥಿಸುವುದಕೆ ಬದಲು ಎಲ್ಲಕ್ಕೂ ಮೂಲವಾದ ಪರತತ್ತ್ವವೊಂದನ್ನು ಮೋಕ್ಷಾರ್ಥಿಗಳಾಗಿ ಪ್ರಾರ್ಥಿಸುವುದಕ್ಕೆ ಋಗ್ವೇದದ ತ್ರ್ಯಂಬಕ ಶಿವನ ಕಲ್ಪನೆಯು ಉಪನಿಷತ್ ಕಾಲದಲ್ಲಿ ಪ್ರಬಲವಾಯಿತು. ಅಂದಿನ ತ್ರ್ಯಂಬಕನೇ ಈಶಾವಾಸ್ಯೋಪನಿಷತ್ತಿನ ಈಶನು; ಈಶ ಶಬ್ದದ ರೂಢಿಯ ಅರ್ಥ ಶಿವನೆಂಬುದೇ ಆಗಿದೆ. "ತುಚ್ಛೇನಾಭ್ವಪಿಹಿತಂ" ಎಂದು ನಾಸದೀಯ ಸೂಕ್ತದಲ್ಲಿ ಹೇಳಿರುವುದರ ಭಾವನೆಯೇ ಮುಂಡಕೋಪನಿಷತ್ತಿನ "ಹಿರಣ್ಮಯೇನ ಪಾತ್ರೇಣ

---

1. ಈಶಾವಾಸ್ಯ ಮಿದಗ್ಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ |
ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಸ್ವಿದ್ ಧನಂ || ಈಶ-೧.
2. ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಗ್ಂ ಸಮಾಃ |
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ||-ಈಶ-೨
3. ಯೋಗಃ ಕರ್ಮ ಸುಕೌಶಲಂ.

ಸತ್ಯಸ್ಯಾಪಿಹಿತಂ ಮುಖಂ” ಎಂಬುದರಲ್ಲಿದೆಯೆಂದು ಹಿಂದೆಯೇ ಹೇಳಲಾಯಿತು. ಇಂದ್ರಿಯಗಳಿಗೂ, ಇಂದ್ರಾದಿ ದೇವತೆಗಳಿಗೂ ಶಕ್ತಿದಾಯಕವಾದ ಶಕ್ತಿವಿಶಿಷ್ಟ ಪರಶಿವನ ಕಲ್ಪನೆಯು ಕೇನೋಪನಿಷತ್ತಿನಲ್ಲಿ ಕಂಡುಬರುವುದು. ಇಂದ ನಿಗೂ, ಅವನ ಮೂಲಕ ಇತರ ದೇವತೆಗಳಿಗೂ “ತೇನ ವಿನಾ ತೃಣಮಪಿ ನ ಚಲತಿ” ಎಂದರೆ ಪರಶಿವನ ಶಕ್ತಿಯಿಂದಲ್ಲದೆ ಒಂದು ಹುಲ್ಲುಕಡ್ಡಿಯೂ ಅಲುಗಾಡಲಾರದು—ಎಂಬ ಅರಿವು ಆದುದು ಪರಶಿವಶಕ್ತಿಯಾದ ಉಮೆಯಿಂದಲೆಂಬುದು ಕೇನದ ಶಾಂಕರಭಾಷ್ಯದಿಂದ[1] ತಿಳಿದು ಬರುವುದು. ಹಳೆಯ ಉಪನಿಷತ್ತುಗಳ ಸಾರಸರ್ವಸ್ವವೆನಿಸಿದ ಶ್ವೇತಾಶ್ವತರದ ಶಿವನ ಮತ್ತು ಋಗ್ವೇದದಲ್ಲಿನ (೭-೫೯-೧೨) ತ್ರ್ಯಂಬಕ ಶಿವನ ಕಲ್ಪನೆಯನ್ನೂ ಅದರಲ್ಲಿನ ನಾಸದೀಯ ಸೂಕ್ತದ ಶಕ್ತಿವಿಶಿಷ್ಟಶಿವನ ಆಧ್ಯಾತ್ಮಿಕ ಕಲ್ಪನೆಯನ್ನೂ ಹಿಂದೆ ವಿಸ್ತಾರವಾಗಿ ವಿವೇಚಿಸಿದೆ. ಅದು ವೀರಶೈವದ ಆಧಿದೈವಿಕ ಮತ್ತು ಆಧ್ಯಾತ್ಮಿಕ ಕಲ್ಪನೆಗೆ ಮೂಲವಾಗಿರುವುದು.

## ಗೀತೋಪನಿಷತ್ತುಗಳ ಕಾಲದಲ್ಲಿ ವರ್ಣಲಿಂಗ ತಾರತಮ್ಯವಿಲ್ಲದ ಸಮಾಜ

ಬಸವೇಶ್ವರರು ಮಾಡಿದ ಸುಧಾರಣೆಗಳಲ್ಲಿ ಮುಖ್ಯವಾದುದು ಸ್ತ್ರೀ ಪುರುಷರಲ್ಲಿ ತಾರತಮ್ಯ, ಜಾತಿಜಾತಿಗಳಲ್ಲಿ ತಾರತಮ್ಯ, ಮೊದಲಾದ ತಾರತಮ್ಯಗಳನ್ನು ತೊಡೆದುಹಾಕಿದುದು. ಹೀಗೆ ಮಾಡಿದ ಸುಧಾರಣೆಗಳು ವೇದಗಳ ಕಾಲದಲ್ಲಿಯೂ ಉಪನಿಷತ್ತುಗಳ ಕಾಲದಲ್ಲಿಯೂ ಇದ್ದ ಪರಿಸ್ಥಿತಿಯನ್ನು ಮತ್ತೆ ನಡವಳಿಕೆಗೆ ತಂದುದೇ ಆಗಿದೆ—ಎಂಬುದು ಗಮನಾರ್ಹ. ಏಕೆಂದರೆ ವೇದಗಳ ಕಾಲದಂತೆಯೇ ಉಪನಿಷತ್ತುಗಳ ಕಾಲದಲ್ಲಿಯೂ ಈ ತೆರದ ವ್ಯತ್ಯಾಸಗಳಿರಲಿಲ್ಲ. ರಾನಡೆಯವರ ಉಪನಿಷದ್ ರಹಸ್ಯದಲ್ಲಿ ಹೇಳಿದಂತೆ-“ಎಲ್ಲ ಉಪನಿಷತ್ತುಗಳಲ್ಲಿಯ ಬೇರೆ ಬೇರೆ ಕಥೆಗಳನ್ನು ನೋಡಿ

---

1. ಉಮೈವ ಹಿಮವತೋ ದುಹಿತಾ ಹೈಮವತೀ ನಿತ್ಯಮೇವ ಸರ್ವಜ್ಞೇನ ಈಶ್ವರೇಣ ಸಹವರ್ತತ ಇತಿ”—ಕೇನೋಪನಿಷತ್ ಶಾಂಕರ ಭಾಷ್ಯ.

ವರೆ, ಒಮ್ಮೆ ಬ್ರಾಹ್ಮಣರು ಇನ್ನೊಮ್ಮೆ ಕ್ಷತ್ರಿಯರು ತಮ್ಮ ತಮ್ಮ ಯೋಗ್ಯತೆಯ ಬಲದಿಂದ ಬುದ್ಧಿಯಲ್ಲಿ ಮತ್ತು ಅಧ್ಯಾತ್ಮದಲ್ಲಿ ಮುಂದಾಳು ತನವನ್ನು ವಹಿಸುತ್ತಿದ್ದರು ಎಂಬುದು ಸ್ಪಷ್ಟವಿದೆ. ಬ್ರಾಹ್ಮಣ ಅಥವಾ ಕ್ಷತ್ರಿಯ ಇವುಗಳಲ್ಲಿ ಯಾವುದೇ ಒಂದು ವರ್ಣಕ್ಕೆ ಅಧ್ಯಾತ್ಮಜ್ಞಾನದ ಗುತ್ತಿಗೆ ಕೊಟ್ಟಿತ್ತೆಂದು ಅಥವಾ ಶ್ರೇಷ್ಠತ್ವದ ತಾಮ್ರಪಟವು ಬರೆದುಕೊಡ ಲ್ಪಟ್ಟಿತ್ತೆಂದು ಹೇಳುವುದು ಹಾಸ್ಯಾಸ್ಪದವಾಗುವುದು. ಅರ್ವಾಚೀನ ಕಾಲ ದಲ್ಲಿರುವಂತೆಯೇ ಅಧ್ಯಾತ್ಮಜ್ಞಾನದಲ್ಲಿ ಮುಂದೆ ಹೋಗುವ ಅಧಿಕಾರವು ಅವನವನ ಯೋಗ್ಯತೆಯ ಮೇಲೆ ಸಮಾಜದಲ್ಲಿಯ ಪ್ರತಿಯೊಂದು ಉಚ್ಚ ನೀಚವ್ಯಕ್ತಿಗೂ ಇತ್ತೆಂದು ಹೇಳಬಹುದು." ಯಾಜ್ಞವಲ್ಕ್ಯನಂತಹ ಅಪ್ರತಿಮ ಬ್ರಹ್ಮಜ್ಞಾನಿಯ ಮೇಲೆ ಪ್ರಶ್ನರೂಪವಾದ ಬಾಣಗಳನ್ನು ಬಿಟ್ಟು ಅವನನ್ನು ಹಣ್ಣು ಮಾಡಲೆತ್ನಿಸಿದ ಗಾರ್ಗಿಯಂತಹ ಸ್ತ್ರೀರತ್ನಗಳು ಉಪನಿಷತ್ ಕಾಲ ದಲ್ಲಿದ್ದರು— ಎಂದಮೇಲೆ ಮೋಕ್ಷದಾಯಕವಾದ ಅಧ್ಯಾತ್ಮವಿದ್ಯೆಗೆ ಸ್ತ್ರೀಯರು ಅನರ್ಹರೆಂಬ ಭಾವನೆಯ ಸುಳಿವೇ ಆಗ ಇರಲಿಲ್ಲವೆಂಬುದು ಸ್ಪಷ್ಟ.

## ಗೃಹಸ್ಥರೂ ಸಂನ್ಯಾಸಿಗಳಂತೆ ಮೋಕ್ಷಾರ್ಹರು

ಸಂನ್ಯಾಸಿಗಳಂತೆಯೇ ಗೃಹಸ್ಥರು ಮೋಕ್ಷವನ್ನು ಪಡೆಯಬಹುದೆಂಬ ನಿಲುವಿಗೆ ಪ್ರಥಮತಃ ಉಪನಿಷತ್ ಕಾಲದಲ್ಲಿ ಅಡ್ಡಿ ಬಂದಿತೆಂಬುದು ಸಾಮಾನ್ಯ ಭಾವನೆಯಾಗಿದೆ. ಆದರೆ, ಸಂನ್ಯಾಸದಿಂದ ಮೋಕ್ಷವಾಗುವು ದೆಂಬುದು ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿದ್ದರೂ ಜನಕನಂತೆ ಗೃಹಸ್ಥರು ನಿಷ್ಕಾಮಕರ್ಮವನ್ನು ಮಾಡುವುದರಿಂದ ಮೋಕ್ಷ ಪಡೆವರೆಂಬುದರಲ್ಲಿಯೂ ಆ ಕಾಲದಲ್ಲಿ ಸಂದೇಹವಿರಲಿಲ್ಲ. ಮಹಾನ್ ಗೃಹಸ್ಥಾಶ್ರಮಿಯಾದ ಶೌನಕನು ಅಂಗಿರಸನಿಂದ ಮೋಕ್ಷದಾಯಕವಾದ ಬ್ರಹ್ಮವಿದ್ಯೆಯ ಉಪದೇಶವನ್ನು ಪಡೆದುದು ಮುಂಡಕೋಪನಿಷತ್ತಿನಿಂದ ತಿಳಿದುಬರುತ್ತದೆ.[1] ಯಾಜ್ಞವಲ್ಕ್ಯನ

1. ಶೌನಕೋ ಹ ವೈ ಮಹಾಶಾಲೋಽಂಗೀರಸಂ ವಿಧಿವದುಪಸನ್ನ ಪ್ರಪಚ್ಛ... ತಸ್ಮೈ ಸಹೋವಾಚ... ಪರಾ ಯಯಾ ತದಕ್ಷರಮಧಿಗಮ್ಯತೇ
—ಮುಂಡಕ ೧-೩, ೪, ೫.

ಮೈತ್ರೇಯಿಯರು ಪತಿಪತ್ನಿಯರು ; ಇವರು ಬ್ರಹ್ಮವಿದ್ಯಾಪರಿಣತರಾಗಿದ್ದರು. ಯಾಜ್ಞವಲ್ಕ್ಯಾದಿಗಳು ಬ್ರಹ್ಮವಿದ್ಯೆಯ ವಿಷಯವಾಗಿ ಚರ್ಚೆಯಾದ ಮೇಲೆ ಜನಕಾದಿಗಳು ಕೊಟ್ಟ ಧನವನ್ನು ಸ್ವೀಕರಿಸುತ್ತಿದ್ದರು. ತೈತ್ತಿರೀಯೋಪನಿಷತ್ತಿನಲ್ಲಿ ಪ್ರಜಾಸಂತತಿಯ ಧಾರೆಯನ್ನು ಹರಿಯಬೇಡವೆಂದು ಹೇಳಿದೆ.[1] ಆದುದರಿಂದ ಜನಕಾದಿಗಳಂತೆ ಗೃಹಸ್ಥಾಶ್ರಮದಲ್ಲಿಯೇ ಮೋಕ್ಷವನ್ನು ಸಂಪಾದಿಸಬಹುದೆಂಬ ಬಸವೇಶ್ವರರ ನಿಲುವಿಗೆ ಉಪನಿಷತ್ತುಗಳ ಆಧಾರವಿದೆ. ಗೀತೆಯೂ ಈ ನಿಲುವನ್ನೇ ಸಮರ್ಥಿಸುತ್ತದೆ.[2]

## ಧರ್ಮದ ಅಧಃಪತನ

ಉಪನಿಷತ್ತುಗಳ ಉದಾತ್ತತತ್ತ್ವವು ಅರಣ್ಯದ ತಪೋವನಗಳಲ್ಲಿನ ಪ್ರಶಾಂತ ವಾತಾವರಣದಲ್ಲಿಯೋ ಅಥವಾ ಜನಕರಾಜನಂತಹ ರಾಜ ಮಹಾರಾಜರ ರಾಜಾಸ್ಥಾನಗಳಲ್ಲಿನ ವಿವೇಚನೆಗಳಲ್ಲಿಯೋ ತಾಂಡವವಾಡುತ್ತಿದ್ದಿತಾದರೂ, ಅಧೋಗತಿಯಲ್ಲಿದ್ದ ಜನಸಾಮಾನ್ಯರನ್ನು ಮುಟ್ಟುತ್ತಿರಲಿಲ್ಲ.[3] ಅಂಧಶ್ರದ್ಧೆಯಲ್ಲಿಯೇ ಮುಳುಗಿದ್ದ ಪುರೋಹಿತವರ್ಗವು, ನೀತಿಬಾಹಿರವೂ, ಹಿಂಸಾಕೃತ್ಯವೂ ಆದ ಅಶ್ವಮೇಧಾದಿ ಯಜ್ಞಯಾಗಗಳನ್ನು ಮಾಡುವುದರಲ್ಲಿ ಹಿರಿಮೆಯಿರುವುದೆಂದು ರಾಜಾಧಿರಾಜರು ಭಾವಿಸುವಂತೆ ಮಾಡಿದ್ದವೆಂದರೆ ಜನಸಾಮಾನ್ಯರ ಮಾತೇನು ? ವರ್ಣಾಶ್ರಮ ಧರ್ಮದ ಕಟ್ಟುನಿಟ್ಟುಗಳು ಬಿಗಿಯಾಗುತ್ತಿದ್ದವು. ಯಜ್ಞಯಾಗಾದಿಗಳನ್ನು ಮಾಡುವುದರಿಂದ 'ಅದೃಷ್ಟ'ವೆಂಬ ಶಕ್ತಿಯು ಹುಟ್ಟಿ, ದೇವತೆಗಳು ಫಲ ಕೊಡುವಂತೆ ಅದು ಬಲಾತ್ಕರಿಸು

---

1. ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ.

2. ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ.

3. It is obvious that the ideas of the authors of the Upanishads, the rarified mental atmosphere in which they moved were confined to a small body of the elect.. They were entirely beyond the comprehension of the vast mass of the people.—(Discovery of India by J. Nehru : Page-82.)

ವುದೆಂಬ ನಂಬುಗೆಯನ್ನು ಹುಟ್ಟಿಸಿದ್ದರಿಂದಮೇಲೆ ಪುರೋಹಿತರ ಹಿಡಿತದಲ್ಲಿ ದೇವತೆಗಳೂ ಸಿಕ್ಕಿದಂತಾಗಿದ್ದಿತು; ಇನ್ನು ಸಾಮಾನ್ಯಜನರ ಪಾಡೇನು? 'ವಷಟ್' ಶಬ್ದವನ್ನು, ಮಂತ್ರಗಳನ್ನು ಸರಿಯಾಗಿ ಉಚ್ಚರಿಸುವುದಕ್ಕಿಂತ ಮೆಲ್ಲನೆ ಉಚ್ಚರಿಸಿದರೆ ಯಜ್ಞವನ್ನು ಮಾಡಿಸುವವನಿಗೆ ಕೇಡಾಗುತ್ತೆಂದೂ ಹೆಚ್ಚು ಗಟ್ಟಿಗೆ ಉಚ್ಚರಿಸುವುದರಿಂದ ಮೇಲಾಗುತ್ತೆಂದೂ ಐತರೇಯ ಬ್ರಾಹ್ಮಣ ೩-೭ರಲ್ಲಿ ಹೇಳಿದೆಯೆಂದಮೇಲೆ, ಜನರು ಪುರೋಹಿತನನ್ನು ದೇವತೆಗಿಂತಲೂ ಮೊದಲು ತೃಪ್ತಿಪಡಿಸಬೇಕಾಗಿತ್ತೆಂದು ಹೇಳುವುದೇನು?[1] ಪುರಾತನ ಸಂಸ್ಕೃತದ ಮಂತ್ರಗಳು ಪುರೋಹಿತರಿಗೇ ಅರ್ಥವಾಗುತ್ತಿದ್ದುದು ಸಂದೇಹ ಎಂದಮೇಲೆ, ಸಾಮಾನ್ಯಜನರ ಪಾಡು, ಕುರುಡರು ಎಳೆದೊಯ್ಯುತ್ತಿದ್ದ ಕಡೆಗೆ ಹೋಗುತ್ತಿದ್ದ ಕುರುಡರಂತೆ ಎಂದು ಮುಂಡಕೋಪನಿಷತ್ತಿನಲ್ಲಿ ಹೇಳಿದಂತೆಯೇ ಆಗಿದ್ದಿತು.

## ಧರ್ಮೋದ್ಧಾರಕ್ಕಾಗಿ ಬೌದ್ಧಾವತಾರ

ಇಂತಹ ಅಂಧಕಾರವನ್ನು ತೊಲಗಿಸಲು ಬೌದ್ಧಾವತಾರವೆಂಬ ಸೂರ್ಯೋದಯುವಾಯಿತು. ಅಂಧಶ್ರದ್ಧೆಯ ಕಟ್ಟುಗಳಿಂದ ಪಾರಾದ ಜನಸಾಮಾನ್ಯವು ಶ್ರೀಮನ್ನಾರಾಯಣನೇ ಬುದ್ಧನ ರೂಪದಲ್ಲಿ ಅವತಾರಮಾಡಿದನೆಂದು ಭಾವಿಸಿದುದರಲ್ಲಿ ಆಶ್ಚರ್ಯವಿಲ್ಲ. ಅಸತ್ತೇ ಮೊದಲು ಇದ್ದುದು[2]

---

1. Just as in Medieval Church, a priest was believed to have been able, if he out of spite so wished it, to turn the service of God into the service of the Devil by performing portions of holy prayer or ritual in reverse order, even so the Aitereya Brahmana (iii-7) tells us that by his manner of uttering the call 'Vashat', the priest can have power to bring prosperity or ruin upon the sacrificer.—(Philosophy Vol. II, Page–60 by Belvelker, M.A., Ph.D., and R. D. Ranade, M.A.,)

2. ಅಸದ್ವಾ ಇದಮಗ್ರ ಆಸೀತ್

ಎಂದು ಮೊದಲಾಗುವ ತೈತ್ತಿರೀಯ ಉಪನಿಷತ್ತಿನ ಉದ್ಗಾರದ ವಿಸ್ತೃತ ಭಾವನೆಯೇ ಬುದ್ಧದೇವನ 'ಸರ್ವಂ ಶೂನ್ಯಂ' ಎಂಬ ಸಿದ್ಧಾಂತದ ಮೂಲವಾಗಿರಬೇಕು. ಲೋಕಮಾನ್ಯ ತಿಲಕರು ಗೀತಾರಹಸ್ಯದಲ್ಲಿ ಹೇಳಿದಂತೆ— "ಯಜ್ಞ ಯಾಗಾದಿ ಕರ್ಮಗಳಿಂದ ಈ ಭವಚಕ್ರದಿಂದ ಮುಕ್ತತೆಯಾಗುವುದಿಲ್ಲವೆಂದು ಉಪನಿಷತ್ಕಾರರು ಹೇಳಿಯೇ ಇರುವರು. ಬುದ್ಧನು ಇದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ, ಇವೆಲ್ಲ ಕರ್ಮಗಳು ಹಿಂಸಾತ್ಮಕವಾಗಿರುವ ಕಾರಣ, ಸರ್ವಥೈವ ತ್ಯಾಜ್ಯ ಮತ್ತು ನಿಷಿದ್ಧವಾಗಿರುತ್ತವೆಂದು ಹೇಳಿರುವನು. ವೈರಾಗ್ಯಯುಕ್ತ ಸಂನ್ಯಾಸದಿಂದಲೇ ಶಾಶ್ವತ ಶಾಂತಿಯೂ, ಸುಖವೂ ಪ್ರಾಪ್ತವಾಗುತ್ತವೆಂದು ಬುದ್ಧನು ನಿಶ್ಚಯಿಸಿದ್ದಾನೆ." ಬೌದ್ಧ ಧರ್ಮಕ್ಕೆ ವೈದಿಕಧರ್ಮವೇ ಹಿನ್ನೆಲೆಯೆಂಬಾಯಿತು; ಆದರೆ ಹಿಂಸಾತ್ಮಕ ಯಜ್ಞ ಯಾಗಾದಿಗಳನ್ನೂ, ವರ್ಣವರ್ಣಗಳಲ್ಲಿ ತಾರತಮ್ಯವನ್ನೂ, ತೋರಿಸುತ್ತಾ ಉತ್ತಮ ಧರ್ಮದವರೆನಿಸಿಕೊಂಡಿದ್ದವರ ಸ್ವೇಚ್ಛಾಚರಣೆಯನ್ನು ಖಂಡಿಸಿ ಉತ್ತಮಾಂಶಗಳನ್ನು ಆರಿಸಿಕೊಂಡಿದ್ದರಿಂದ ಅದು ಜನಪ್ರಿಯವಾಗಿ ಭಾರತದಲ್ಲೆಲ್ಲ ವ್ಯಾಪಿಸಿದುದಲ್ಲದೆ ಚೀಣಾ, ಜಪಾನ್ ದೇಶಗಳಲ್ಲೆಲ್ಲ ಹರಡಿತು. ಬೌದ್ಧರಂತೆ ಯಜ್ಞಯಾಗಾದಿಗಳನ್ನು ಅವರಿಗಿಂತ ಹಿಂದಿನಿಂದಲೂ ವಿರೋಧಿಸಿದವರು ಜೈನರು. ಬುದ್ಧನು, ಇತರರು ಕೊಂದ ಪ್ರಾಣಿಗಳ ಮಾಂಸವನ್ನು ತಿನ್ನುತ್ತಲಿದ್ದನು; ಆದರೆ ಜೈನರು ಇದನ್ನೊಪ್ಪರು. ಜೈನ ಸಂನ್ಯಾಸಿಗಳು ಕಾಯಕ್ಲೇಶಮಯವಾದ ತಪಸ್ಸನ್ನಾಚರಿಸುತ್ತಿದ್ದರು. ಇದನ್ನು ಬೌದ್ಧರು ಒಪ್ಪುತ್ತಿರಲಿಲ್ಲ. ಜೈನರು ಆತ್ಮನ ಅಸ್ತಿತ್ವವನ್ನು ಒಪ್ಪುವರಾದರೆ ಬೌದ್ಧರು ಅನಾತ್ಮವಾದಿಗಳು. ಈ ವ್ಯತ್ಯಾಸಗಳೇನೇ ಇರಲಿ ಜೈನ ಬೌದ್ಧ ಧರ್ಮಗಳು, ಯಜ್ಞ ಯಾಗಾದಿಗಳು ಪ್ರಬಲವಾಗುವುದನ್ನು, ವೀರಶೈವರಿಗಿಂತ ಮೊದಲು ತಡೆದವು ಈ ವಿಷಯದಲ್ಲಿ ಪಾಶುಪತ ಶೈವಧರ್ಮವು ಮಾಡಿದ ಪ್ರಯತ್ನವು ಪ್ರತ್ಯೇಕ ಉಲ್ಲೇಖಾರ್ಹವಾಗಿದೆ.

## ಶ್ರೀ ಶಂಕರಾದಿ ಆಚಾರ್ಯರಿಂದ ಹಿಂದೂಧರ್ಮೋದ್ಧಾರ

ಜೈನಧರ್ಮದ ನಿರೀಶ್ವರವಾದವು ಭಾರತೀಯರ ಮನೋಧರ್ಮಕ್ಕೆ ಸರಿಹೊಂದದೆ ಅದರ ಆಕರ್ಷಣೆಯು ಕಡಮೆಯಾಗುತ್ತ ಬಂದಿತಾದರೂ

ಅಹಿಂಸೆಯೇ ಮುಖ್ಯವಾದ ತಳಹದಿಯಾಗುಳ್ಳ ಆ ಧರ್ಮವು ಬೌದ್ಧಧರ್ಮದಂತೆ ಅಳಿದುಹೋಗಲಿಲ್ಲ. ನಿರೀಶ್ವರಧರ್ಮವಾದ ಬೌದ್ಧಮತವು ಆಕರ್ಷಿಸಿದುದು ಮೇಧಾವಿಗಳನ್ನು. ಆದರೆ ಶ್ರೀ ಶಂಕರಾಚಾರ್ಯರ ಸಿದ್ಧಾಂತವು ಬೌದ್ಧರ ತರ್ಕವನ್ನೆಲ್ಲ ಬಳಸಿಕೊಂಡಿದ್ದುದಲ್ಲದೆ ಬೌದ್ಧರು ಕಟ್ಟಿದ ನಿರೀಶ್ವರ ಬೌದ್ಧಿಕ ಭವ್ಯಭವನದಲ್ಲಿ ಪರಮಾತ್ಮತತ್ತ್ವವನ್ನು ಪ್ರತಿಷ್ಠಿಸಿ ಅದಕ್ಕೆ ಜೀವಕಳೆಯನ್ನು ಕೊಟ್ಟಿತು. ಶ್ರೀಕಂಠಶಿವಾಚಾರ್ಯರು ರಾಮಾನುಜಾಚಾರ್ಯರು, ಮಧ್ವಾಚಾರ್ಯರು ಪರಮೇಶ್ವರನಲ್ಲಿ ನಂಬಿಕೆ ಹುಟ್ಟಿಸಿ ಭಕ್ತಿಪಂಥವನ್ನು ಸ್ಥಾಪಿಸಿದರು. ಬುದ್ಧಿಪ್ರಾಧಾನ್ಯವುಳ್ಳ ಜನರು ಶಂಕರಾಚಾರ್ಯರ ಸಿದ್ಧಾಂತದಿಂದ ಆಕರ್ಷಿತರಾದಂತೆಯೇ ಸಾಮಾನ್ಯ ಜನರಿಗೆ ಭಕ್ತಿಯಿಂದ ಅರ್ಚಿಸಲು ದೇವರೊಬ್ಬನಿರುವನೆಂದೂ ಇಷ್ಟಪ್ರಾಪ್ತಿ ಅನಿಷ್ಟ ನಿವೃತ್ತಿಗಾಗಿ ಅವನನ್ನು ಪ್ರಾರ್ಥಿಸಬಹುದೆಂದೂ ನಂಬಿಕೆ ಹುಟ್ಟಿತು. ಬ್ರಾಹ್ಮಣರು ಮಾಂಸಾಹಾರವನ್ನು ತೆಗೆದುಕೊಳ್ಳುವುದು ಮತ್ತು ಇತರ ವರ್ಣದವರನ್ನು ಲಗ್ನವಾಗುವುದು ಮೊದಲಾದ ಕಾರಣಗಳಿಂದ ಜಾತಿಯ ಕಟ್ಟು ಸಡಿಲವಾಗಿ ಹೋಗಿತ್ತು. ಹರ್ಡೀಕರ್ ಮಂಜಪ್ಪನವರ 'ಶುದ್ಧಿ ಸಂಘಟನೆ' ಗ್ರಂಥದಲ್ಲಿ ಗಮನಿಸಿರುವಂತೆ: "ಸುಪ್ರಸಿದ್ಧ ಸಂಶೋಧಕ ರಾಜವಾಡೆಯವರು ಹೀಗೆ ಬರೆದಿದ್ದಾರೆ—ಪಾಣಿನಿಯ ಕಾಲದಲ್ಲಿ ಚತುರ್ವರ್ಣಗಳ ಸ್ಥಿತಿಯು ಬಳಕೆಯಲ್ಲಿದ್ದರೂ, ಎಷ್ಟೋ ಸಡಿಲಾಗಿದ್ದಿತು. ಜಾತಿಗಳು ಏರ್ಪಟ್ಟಿರಲಿಲ್ಲ. ಸ್ತ್ರೀಯಳು ಯಾವ ವರ್ಣದವಳಿದ್ದರೂ ಪುರುಷನ ವರ್ಣವೇ ಅವರ ಮಕ್ಕಳ ವರ್ಣವೆಂಬ ಪ್ರಾಚೀನ ರೀತಿಯೂ ಆಗಲೂ ಬಳಕೆಯಲ್ಲಿದ್ದಿತು. ಶೂದ್ರಳಿಗೆ ದ್ವಿಜರಿಂದ ಹುಟ್ಟಿದ ಸಂತತಿಯೂ ದ್ವಿಜರಲ್ಲಿ ಎಣಿಸಲ್ಪಡಲು, ಪ್ರಾರಂಭವಾದುದರಿಂದ ಸಮಾಜದಲ್ಲಿ ಬಹು ಗೊಂದಲವೆದ್ದಿತು" ಹಿಂದುಗಳಲ್ಲಿದ್ದ ಇಂತಹ ಅನೇಕ ನ್ಯೂನತೆಗಳನ್ನು ಪರಮತೀಯರ ನಿಂದನೆಯಿಂದ ನೊಂದ ಹಿಂದುಗಳು ಸರಿಪಡಿಸಿಕೊಂಡರು.*

---

1. It is easy to perceive that if the Brahmins of Gupta period ceased to continue to observe the long established custom of marrying wives from the three lower classes, it was not from any intention on their part to preserve the

ಇತ್ತ, ಬೌದ್ಧಮತದಲ್ಲಿ ತಾಂತ್ರಿಕಕರ್ಮಗಳು ಬೆರತುಹೋದುದು ಅದರ ಅಧಃಪತನಕ್ಕೆ ಮುಖ್ಯ ಕಾರಣವಾಯಿತು. ಹಿಂದುಗಳು ಎಚ್ಚೆತ್ತು ಸಂಘಟಿತರಾದುದು ಬೌದ್ಧ ಜೈನಧರ್ಮಗಳು ಇಳಿಮುಖವಾಗಿ, ಹಿಂದೂ ಧರ್ಮೋದ್ಧಾರವಾಗಲು ಉತ್ತೇಜನಕೊಟ್ಟಿತು.

## ಲಿಂಗಿ ಪಾಶುಪತ ಮಾಹೇಶ್ವರ ಧರ್ಮದ ಉಗಮ ಮತ್ತು ಪ್ರಗತಿ

ಶೈವಧರ್ಮವು ಶಿಲಾಯುಗಕ್ಕಿಂತಲೂ ಹಿಂದಿನದಾಗಿದ್ದು ಪ್ರಪಂಚದ ಎಲ್ಲ ಧರ್ಮಗಳಲ್ಲಿ ಅತ್ಯಂತ ಪುರಾತನಧರ್ಮವೆಂದು, ಮಹೆಂಜೋದಾರೋ ಹರಪ್ಪ ನಾಗರಿಕ ವಿಷಯವಾಗಿ ಬರೆಯುತ್ತ ಸರ್ ಜಾನ್ ಮಾರ್ಷಲರು ಹೇಳಿದ್ದಾರೆ; ಅಲ್ಲದೆ ಅಲ್ಲಿದೊರೆತಿರುವ ಸಣ್ಣ ಲಿಂಗಗಳನ್ನು ಕುರಿತು ಅವು ಇಂದೂ ಶೈವರು ಧರಿಸುತ್ತಿರುವಂತೆ ಧರಿಸುವ ಲಿಂಗಗಳೆಂದು ಉಲ್ಲೇಖಿಸಿದ್ದಾರೆ.[2] ಕೀಥರು ಇದನ್ನು ಸಮರ್ಥಿಸಿದ್ದಾರೆ. ಆಂಧ್ರ

---

purity of their blood, for it was already tainted and saturated with that of the other classes. It appears mainly an act of self preservation against the charge of sextual intemperance brought by the Jaina and Buddhist monks. It is also easy to perceive that if they discontinued the immemorial custom of eating flesh and drinking liquor, along with the employment of flesh eating people as cooks, it was not from any love of vegetarianism but mainly from a determined effort to avoid the charge of intemperance and cruelty to animals, brought against them by the Buddhists.—('Evolution of Castes' by R. Shama Sastry, B.A., M.R.A.S., reported in VI Mythic Society Journal. Page 15, as page 25).

2. *Prehistoric lingas in the Indus valley and Baluchistan*—Indeed the only explanation applicable to them all is that

ಹಿಸ್ಟಾರಿಕಲ್ ಸೊಸೈಟಿ ಜರ್ನಲ್ ೧ನೆಯ ವಾಲ್ಯುಂ ೧ನೇ ಭಾಗದ ೩೩ನೆಯ ಪುಟದಲ್ಲಿ ಮುದ್ರಿತವಾದ ಶ್ರೀಯುತ, R. ಸುಬ್ಬರಾಯ ಎಂ.ಎ., ಬಿ ಟಿ., ಯವರ ಲೇಖನದಲ್ಲಿ ಹೇಳಿರುವಂತೆ, ಅರ್ಧನಗ್ನ ಸ್ತ್ರೀಯರನ್ನುಳ್ಳ ಕೋಯ ಕಾಡುಜನರು ಲಿಂಗವನ್ನು ಧರಿಸುವರೆಂದವೋಲೆ ಆ ಪದ್ಧತಿಯು ಮೊಹೆಂಜೋದಾರೋ ನಾಗರಿಕತೆಯ ಕಾಲದಿಂದ ನಡೆದು ಬಂದುದಾಗಿರಬೇಕು. ಆರ್ಯರಿಗಿಂತಲೂ ಉತ್ತಮ ನಾಗರಿಕತೆಯುಳ್ಳವರೆಂದು ಈಗ ಕೆಲವು ವಿದ್ವಾಂಸರಿಂದ ನಿರ್ಧರಿಸಲ್ಪಟ್ಟಿರುವ ಮೊಹೆಂಜೋದಾರೋ, ದ್ರಾವಿಡ ಜನರಲ್ಲಿ ಪ್ರಚಲಿತವಾಗಿದ್ದ ಪದ್ಧತಿಯು, ಇಂದಿನಂತೆ ಅಂದೂ ಇದ್ದ ಕೆಲವರು ಕಾಡುಜನರ ವಂಶದವರಲ್ಲಿ ಉಳಿದುಬಂದಿರುವಂತೆ ಕಾಣುತ್ತದೆ. ನೀಲಗಿರಿಯಲ್ಲಿನ ಬಡಗರಲ್ಲಿ ಒಂದು ಪಂಗಡದವರಲ್ಲಿ ಹುಡುಗರಿಗೆ ಹನ್ನೆರಡನೆಯ ವಯಸ್ಸಿನಲ್ಲಿ ಲಿಂಗಧಾರಣೆಯನ್ನು ಮಾಡುವ ಪದ್ಧತಿಯಿದೆಯೆಂದೂ, ಜನಿವಾರವನ್ನೂ ಹಾಕಿಕೊಳ್ಳುವರೆಂದೂ ಲಿಂಗವನ್ನು ಕೊರಳಲ್ಲಿ ಧರಿಸುವರೆಂದೂ ವಿಮರ್ಶ ವಿಶಾರದ ಆಕುಲಯ್ಯ ದೀಕ್ಷಿತರ ಲೇಖನದಿಂದ ತಿಳಿದುಬರುತ್ತದೆ—(ವೀರಶೈವ ೧೪೯ ಸೆಪ್ಟೆಂಬರ್ ಸಂಚಿಕೆ) ವೀರಶೈವೇತರರಿಂದ ಪೂಜಿಸಲ್ಪಡುತ್ತಿರುವ ಅನೇಕ ದೇವ ದೇವಿಯರ ತಲೆಯಲ್ಲಿ ವಿರಾಜಿಸುವ ಲಿಂಗಗಳ ವಿಷಯವು ಪ್ರಸಿದ್ಧವಾಗಿದೆ.

ವೀರಶೈವ ತ್ರೈಮಾಸಿಕದ ೧೪೯ನೆಯ ಜೂನ್ ಸಂಚಿಕೆಯಲ್ಲಿ ಪ್ರಕಟವಾದ R. ಸೇನಗುಪ್ತರ ಲೇಖನದ ಅನುವಾದದಲ್ಲಿ ವೀರಶೈವರು ಹಸ್ತದಲ್ಲಿ ಪೂಜಿಸಲು ಧರಿಸುವಂತೆ ಹಸ್ತದಲ್ಲಿ ಲಿಂಗಗಳನ್ನು ಧರಿಸಿದ ಹರಿಹರಾದಿ ವಿಗ್ರಹಗಳ ವಿಷಯವೂ ಇತರ ದೇಹ ಭಾಗದಲ್ಲಿ ಲಿಂಗಗಳನ್ನು

---

they were sacred objects of some sort, the larger ones serving as aniconic agalmata for cult purposes, the smaller as amulets to be carried on the person, just as miniature lingas are commonly carried by Saivites today-"Mahonjo-Daro and the Indus civilization" Page-59.

ಧರಿಸಿದ ವಿಗ್ರಹಗಳ ವಿಷಯವೂ ಕಂಡುಬರುತ್ತದೆ. ಕ್ರಿ. ಶ. ಎರಡನೆಯ ಶತಮಾನದ್ದೆಂದು ನಿಶ್ಚಯಿಸಲ್ಪಟ್ಟ "ಅಭಿನಯದರ್ಪಣದಲ್ಲಿ, ಶಿವಲಿಂಗ ಹಸ್ತವೆಂಬ ಹಸ್ತಾಭಿನಯನವನ್ನು—"ವಾಮಾರ್ಧಹಸ್ತೇ ವಿನ್ಯಸ್ತ ಶಿಖರಶ್ಶಿವಲಿಂಗಕಃ" ಎಂದು ವರ್ಣಿಸಿದೆ. ಬಸವೇಶ್ವರ ಸ್ಮಾರಕ ಗ್ರಂಥದಲ್ಲಿ ಶ್ರೀಯುತ ಮರಿಯಪ್ಪ ಭಟ್ಟರು, ತಿರುವಲ್ಲುವರ್ ೨೦೦೦ ವರ್ಷದ ಹಿಂದೆ ಇದ್ದರೆಂದೂ, ಅವರ ಉದ್ಗಾರಗಳೂ ಬಸವೇಶ್ವರರ ಉದ್ಗಾರಗಳೂ ಒಂದೇ ತರಹದವೆಂದು ಉಲ್ಲೇಖಿಸಿದ್ದಾರೆ. ಮದರಾಸಿನಲ್ಲಿರುವ ತಿರುವಳ್ಳುವರ ದೇವಸ್ಥಾನದಲ್ಲಿ ವೀರಶೈವರೇ ಪೂಜಾರಿಗಳಾಗಿದ್ದಾರೆ. ಇಲ್ಲಿ ತಿರುವಳ್ಳುವರ ಪತ್ನಿ ವಾಸುಕಿಯ ವಿಗ್ರಹದ ತಲೆಯಮೇಲೆ ಸ್ಪಷ್ಟವಾದ ಲಿಂಗವಿರುವುದನ್ನು ಇಂದೂ ನೋಡಬಹುದು. ಲಿಂಗಧಾರಣೆಯು ಮಹೆಂಜೋದಾರೋ-ಹರಪ್ಪ ನಾಗರಿಕತೆಯ ಕಾಲದಿಂದ ಎಂದರೆ ಋಗ್ವೇದಕ್ಕಿಂತಲೂ ಹಿಂದಿನ ಕಾಲದಿಂದ ಪ್ರಚಲಿತವಾಗಿದ್ದು ಅಂದಿನಿಂದ ಇಂದಿನವರೆಗೂ ಪ್ರಚಲಿತವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ.

ಇಂದಿನ ವೀರಶೈವರ ಆಧಿಭೌತಿಕ ಆಧಿದೈವಿಕ ಆಧ್ಯಾತ್ಮಿಕ ಕಲ್ಪನೆಗಳು ಬೀಜರೂಪದಲ್ಲಿ ಮೊಹೆಂಜೋದಾರೋ ಹರಪ್ಪ ನಾಗರಿಕತೆಯ ಕಾಲದಲ್ಲಿಯೇ ಪ್ರಚಲಿತವಾಗಿದ್ದವೆಂಬುದನ್ನು ನನ್ನ 'ವೀರಶೈವದ ಉಗಮ ಮತ್ತು ಪ್ರಗತಿ' ಎಂಬ ಗ್ರಂಥದಲ್ಲಿ ವಿಸ್ತಾರವಾಗಿ ನಿರೂಪಿಸಿರುವುದರಿಂದ ಇಲ್ಲಿ ಅದು ಅನವಶ್ಯ. ದಿಕ್ಸೂಚಿಯಂತೆ ಅದರಲ್ಲಿನ ವಿಷಯಾನುಕ್ರಮಣಿಕೆಯ ಭಾಗವಿದನ್ನು ಇಲ್ಲಿ ಕೊಟ್ಟಿದೆ.—"ಮೊಹೆಂಜೋದಾರೋ—ಹರಪ್ಪ ನಾಗರಿಕತೆಯಲ್ಲಿ ವೀರಶೈವದ ಆಧಿದೈವಿಕ ಮೂಲ ಕಲ್ಪನೆ; ಶಿವನು ಯೋಗಾರೂಢನಾದ ದಕ್ಷಿಣಾಮೂರ್ತಿ ಎಂಬ ಕಲ್ಪನೆಯು ಅಂದಿನದೇ; ಮೂರು ಕಣ್ಣಿನವನೆಂದರೆ ಶಿವನೆಂದು ಆಗಲೇ ಪ್ರಸಿದ್ಧವಾಗಿದ್ದಿತು; ಶಿವನು—ಸ್ವಯಂಭು, ಅಷ್ಟತನು, ನಟರಾಜ, ತಾಂಡವನ್ ಎಂಬ ಕಲ್ಪನೆಗಳು ಆಗಿನವೇ; ಶಿವನು—ತ್ರಿಶೂಲಧಾರಿ, ಸರ್ಪಭೂಷಣ, ಪರಶುಧಾರಿ ಎಂಬ ಕಲ್ಪನೆಗಳು ಆಗಿನವೇ; ಶಿವನು ಅರ್ಧನಾರೀಶ್ವರ ಎಂಬ ಕಲ್ಪನೆಯು ಅಂದಿನದೇ, ಶಿವನು—ಪರಾತ್ಪರ, ಸರ್ವಜ್ಞ, ವರದ ಎಂಬ ಅಂದಿನ ಕಲ್ಪನೆ; ಶಿವನು ಊರ್ಧ್ವರೇತಸ್ಕ, ಪಶುಪತಿ ಎಂಬ ಅಂದಿನ ಕಲ್ಪನೆ; ಸೃಷ್ಟಿ

ಸ್ಥಿತಿಲಯಕಾರಣನೆಂಬ ಕಲ್ಪನೆಯ ಮೂಲ; ಚಂದ್ರಚೂಡ, ಧವಳ ಗಿರಿನಿವಾಸ ಎಂಬ ಕಲ್ಪನೆ, ವೃಷಭಪೂಜೆ; ವೀರಶೈವದ ಆಧ್ಯಾತ್ಮಿಕ ಕಲ್ಪನೆ ಮೊಹೆಂಜೋದಾರೋ ಹರಪ್ಪ ಜನರಲ್ಲಿ; ಸಚ್ಚಿದಾನಂದಾದ್ವಿತೀಯ ಶಿವನ ಕಲ್ಪನೆ; ಶಕ್ತಿವಿಶಿಷ್ಟ ಶಿವನ ಕಲ್ಪನೆ; ಶಿವಾದ್ವೈತ ಮೋಕ್ಷದ ಕಲ್ಪನೆ; ವೀರಶೈವರ ಆಧಿಭೌತಿಕ ಆಚರಣೆ; ಶಿವಯೋಗ, ಲಿಂಗಾರ್ಚನ ಲಿಂಗಧಾರಣ; ಲಿಂಗಧಾರಣೆಯು ಸಿಂಧೂನದಿಯ ತೀರದವರೆಗೆ ಹರಡಿ ಮೆಡಿಟರೇನಿಯನ್ ತೀರದವರೆಗೆ ಹರಿಯಿತು."—ಇದೇ ಮೊದಲಾದ ವಿಷಯಗಳನ್ನೆಲ್ಲ ಸಾಧಾರವಾಗಿ 'ವೀರಶೈವದ ಉಗಮ ಮತ್ತು ಪ್ರಗತಿ' ಗ್ರಂಥದಲ್ಲಿ ತೋರಿಸಿಕೊಟ್ಟಿರುವುದರಿಂದ ಆ ಗ್ರಂಥದಿಂದ ಇದೆಲ್ಲವನ್ನು ತಿಳಿಯಬಹುದು.

## ಆರ್ಯ ದ್ರಾವಿಡರ ಸಮ್ಮಿಲನ

ನಗರಗಳಲ್ಲಿ ವಾಸಮಾಡುತ್ತ ಉತ್ತಮ ನಾಗರಿಕತೆಯಿಂದ ಕೂಡಿದ ಮೊಹೆಂಜೋದಾರೋ – ಹರಪ್ಪ ಜನರ ಪ್ರಶಾಂತ ಜೀವನಸಾಗರವನ್ನು ಕದಡಿದುದು ಪಶುಪಾಲನೆಗಾಗಿ ದೇಶ ದೇಶಗಳಲ್ಲಿ ಅಲೆಯುತ್ತಿದ್ದ ಬಲಿಷ್ಠ ಜನಾಂಗವಾದ ಆರ್ಯರ ಆಕ್ರಮಣವೆಂಬ ಚಂಡಮಾರುತ. ಇದರಿಂದ ಮೊದಲೇನೋ ವಿದ್ವೇಷವಿಷವು ಹುಟ್ಟಿತು. ಎದುರಾಳಿಗಳ ಎದೆಯ ಮೇಲಿದ್ದ ಲಿಂಗವನ್ನು ನೋಡಿ ಆರ್ಯರು, ಅವರನ್ನು 'ಕಲ್ಲು ಕಟ್ಟಿದವರು' ಎನ್ನುವುದಕ್ಕಿಂತ ಮುಂದೆ ಹೋಗಿ 'ಶಿಶ್ನ ದೇವಾಃ' ಎಂದು ಕರೆದರು. ಆದರೆ ಈ ವಿದ್ವೇಷ ಬಹುಕಾಲ ನಿಲ್ಲಲಿಲ್ಲ. ಆರ್ಯ ದ್ರಾವಿಡ ಸಂಸ್ಕೃತಿಯ ಮಿಲನವಾಗಿ ಹಾಲು ಜೇನು ಸೇರಿದಂತೆ ಸುಸ್ವಾದಾಮೃತವು ಹುಟ್ಟಿತು. ಹೀಗಾಗಲು ಮೊದಲನೆಯ ಕಾರಣ, ಆರ್ಯರಲ್ಲಿದ್ದ ಗುಣ ಗ್ರಹಣ ಗುಣ; ಎರಡನೆಯ ಕಾರಣ ಆರ್ಯರಲ್ಲಿಯೇ ಒಂದು ಪಂಗಡದ ಜನರು ಯಜ್ಞ ಯಾಗಾದಿಗಳಲ್ಲಿ ಆಗುತ್ತಿದ್ದ, ನಿರ್ದಯನೀತಿರಹಿತಕ್ರಿಯೆಗಳಿಂದ ಬೇಸರಪಟ್ಟವರಾಗಿ ಮೊಹೆಂಜೋದಾರೋ ಜನರಾದ ದ್ರಾವಿಡರನ್ನು ಸೇರಿಕೊಂಡುದು.

## ಉಗ್ರಪಂಥದ ಲಿಂಗಧಾರೀ ಅಸುರ ವಿರೋಧಿಗಳು

ಛಾಂದೋಗ್ಯ ಉಪನಿಷತ್ತಿನಲ್ಲಿ "ಅಯಜಮಾನಮಾಹುರಾಸುರಃ" ಎಂದರೆ ಯಜ್ಞಮಾಡದಿರುವನನ್ನು ಆಸುರನು ಎನ್ನುತ್ತಾರೆ—ಎಂದು ಹೇಳಿದೆ. "ಅಯಜಮಾನಂ – ಅಯಜನ ಸ್ವಭಾವಂ" ಎಂಬ ವಿವರಣೆ ಇದರ ಶಾಂಕರ ಭಾಷ್ಯದಲ್ಲಿದೆ. ಸುರರು ಅದಿತಿಯ ಮಕ್ಕಳು; ಅಸುರರು ಅವಳ ಸಹೋದರಿದಿತಿಯ ಮಕ್ಕಳು ರಾವಣಾಸುರನು ಪೌಲಸ್ತ್ಯ ಬ್ರಹ್ಮನ ವಂಶದವನು; ಅವನು ಹೋದ ಕಡೆಯಲ್ಲೆಲ್ಲ ಲಿಂಗವನ್ನು ಒಯ್ಯುತ್ತಿದ್ದನೆಂದು ರಾಮಾಯಣದಲ್ಲಿ ಹೇಳಿದೆ.

ಯತ್ರ ಯತ್ರ ಚ ಯಾತಿಸ್ಮ ರಾವಣೋ ರಾಕ್ಷಸೋತ್ತಮಃ |
ಜಾಂಬೂನದಮಯಂ ಲಿಂಗಂ ತತ್ರ ತತ್ರ ಚ ನೀಯತೇ ||

ಸ್ಕಾಂದಪುರಾಣದ ಮಹೇಶ್ವರಖಂಡ ವಿಭಾಗದಲ್ಲಿ ಮಹಿಷಾಸುರ ಮರ್ಧನದ ಕಥೆಯಿದೆ. ಅದರಲ್ಲಿ ಹೇಳಿರುವಂತೆ ದೇವಿಯು "ಆದತ್ತ ಸಹಸಾ ಗೌರೀ ಲಿಂಗಂ ತಸ್ಯ ಗಳೇ ಸ್ಥಿತಂ" ಎಂದರೆ ಮಹಿಷಾಸುರನ ಕೊರಳಲ್ಲಿದ್ದ ಲಿಂಗವನ್ನು ಕೈಗೆ ತೆಗೆದುಕೊಂಡಳು. ಅದು ಅವಳ ಕೈಗೆ ಅಂಟಿಕೊಂಡಿತಂತೆ—ಆಗ ಋಷಿ ಗೌತಮನನ್ನು ವಿಚಾರಿಸಲು ಅವನು ತ್ರಿಪುರಾಸುರರ ಸಂಹಾರಕಾಲದಲ್ಲಿಯೂ, ಎಲ್ಲಿಯವರೆಗೆ ಆ ಅಸುರರ ಕೊರಳಲ್ಲಿ ಲಿಂಗವಿದ್ದಿತೋ ಅಲ್ಲಿಯವರೆಗೆ, ಅವರನ್ನು ಕೊಲ್ಲಲಾಗಲಿಲ್ಲವೆಂದು ಹೇಳಿದನಂತೆ.

ಪುರತ್ರಯಾವಾಸಾ ದೈತೇಯಾ ಲಿಂಗಧಾರಕಾಃ |
ಅಜಿತಾ ಶಂಭುನಾ ಪೂರ್ವಂ ಮುಕ್ತಲಿಂಗ ವಿದೂಷಿತಾಃ ||

ಪದ್ಮಪುರಾಣದ ಪಾತಾಳಖಂಡದ ೧೩ಳನೆಯ ಶ್ಲೋಕದಲ್ಲಿ "ಧಾರಯಂತಿ ತಥಾ ಲಿಂಗಂ ರಾಕ್ಷಸಾಃ ಕೇಚಿದುತ್ತಮಾಃ" ಎಂದು ಹೇಳಿರುವುದು ರಾಕ್ಷಸರಲ್ಲಿ ಲಿಂಗಧಾರಿಗಳಿದ್ದರು ಎಂಬುದನ್ನು ಸಮರ್ಥಿಸುತ್ತದೆ. ರಾಕ್ಷಸರು ಯಜ್ಞಧ್ವಂಸಿಗಳೆಂದು ರಾಮಾಯಣ ಮೊದಲಾದ ಗ್ರಂಥಗಳಿಂದ ತಿಳಿದು ಬರುವುದು. ಹೀಗೆ ಲಿಂಗಧಾರಿಗಳಾದ ಮೊಹೆಂಜೋದಾರೋ ನಿವಾಸಿಗಳ

ಧರ್ಮಕ್ಕೆ ಮಾರುಹೋಗಿ, ಅವರಂತೆ ಲಿಂಗಧಾರಿಗಳಾದ ರಾಕ್ಷಸರನ್ನೂ ಮೊಹೆಂಜೋದಾರೋ ನಿವಾಸಿಗಳನ್ನೂ ನೋಡಿ "ಶಿಶ್ನದೇವಾಃ" ಎಂದು ಋಗ್ವೇದ ಕಾಲದ ಆರ್ಯರು ಅವರನ್ನು ಹೀಯಾಳಿಸಿದುದು ಸ್ವಭಾವಿಕವೇ. ಆದರೆ ವಿದ್ವೇಷವು ಹೋಗಿ, ಸುಸ್ನೇಹವಾಗಿ ದ್ರಾವಿಡರ ಶಿವನೇ ಆರ್ಯರಿಗೂ ಸಂಪೂಜ್ಯನಾದ ಮೇಲೆ, ಆರ್ಯರೇ ಶಿಶ್ನದೇವಾಃ—ಎಂದರೆ ಅಬ್ರಹ್ಮಚಾರಿಗಳೆಂದು ತೇಲಿಸಿ ಅರ್ಥವನ್ನು ಹೇಳುವ ಕಾಲಬಂದಿತು. ಉದಾಹರಣೆಗೆ ಸಾಯಣರು ದುರ್ಗಾಚಾರ್ಯರನ್ನು ಅನುಸರಿಸಿ ಆ ಪದಕ್ಕೆ--"ಶಿಶ್ನೇನ ದೀವ್ಯಂತಿ ಕ್ರೀಡಂತಿ" ಎಂದರೆ ಶಿಶ್ನದಿಂದ ಕ್ರೀಡಿಸುವವರು ಎಂದು ಅರ್ಥ ಮಾಡಿದ್ದಾರೆ—ಆದರೆ ಇದು ಪ್ರೊ॥ ನೀಲಕಂಠಶಾಸ್ತ್ರಿಗಳು (Development of Religion in South India P.-50) ಹೇಳಿದಂತೆ ಆ ಪದಗಳ ಸ್ಪಷ್ಟ ಅರ್ಥಕ್ಕೆ ವಿರುದ್ಧವಾಗಿದೆ.

## ಸೌಮ್ಯಪಂಥದ ವ್ರಾತ್ಯ ವಿರೋಧಿಗಳು

ಯಜ್ಞಧ್ವಂಸ ಕಾರ್ಯವನ್ನು ಮಾಡುವ ಅಸುರರಂತೆ ಉಗ್ರಪಕ್ಷದವರಾಗಿರದೆ, ಯಜ್ಞಕಾರ್ಯವನ್ನು ಮಾಡಲೊಪ್ಪದ ಸೌಮ್ಯಪಕ್ಷದವರಾದ ಆರ್ಯರು ಯಜ್ಞವನ್ನು ಮಾಡಲು ಅಧಿಕಾರವನ್ನು ಕೊಡುವ ಯಜ್ಞೋಪವೀತವನ್ನು ಧರಿಸಲು ಬಸವೇಶ್ವರನಂತೆ ನಿರಾಕರಿಸಿದರು. ಇವರೇ ವ್ರಾತ್ಯರು. ಮನುಸ್ಮೃತಿಯಲ್ಲಿ 'ಸಾವಿತ್ರೀ ಪತಿತಾ ವ್ರಾತ್ಯಾ ಭವಂತ್ಯಾರ್ಯ ವಿಗರ್ಹಿತಾಃ' ಎಂದು ಹೇಳಿರುವುದು ಇದನ್ನು ಸಮರ್ಥಿಸುತ್ತದೆ. ಈ ವ್ರಾತ್ಯರು ಪ್ರಬಲಿಸಿ, ಅಥರ್ವಣ ವೇದದ ಕಾಲಕ್ಕೆ ರಾಜಪೂಜಿತರಾದರು. ಜ್ಞಾನಿಯಾದ ವ್ರಾತ್ಯನು ರಾಜನ ಮನೆಗೆ ಅತಿಥಿಯಾಗಿ ಬಂದರೆ, ಆತನನ್ನು ರಾಜನು ತನಗಿಂತ ದೊಡ್ಡವನಂತೆ ಗೌರವಿಸಬೇಕೆಂದೂ[1], ಗೃಹಸ್ಥನು ಅತಿಥಿಯಾಗಿಬಂದ ವ್ರಾತ್ಯನ ಅಪ್ಪಣೆಯಿಲ್ಲದೆ ಯಜ್ಞವನ್ನು ಮಾಡಬಾರದೆಂದೂ,

---

1. Let the king to whose house, the Vratya who possesses the knowledge comes as a guest, honour him as superior to himself.—(Atharva Veda. XV-X).

ಅಥರ್ವಣವೇದದಲ್ಲಿ ಹೇಳಿದೆ.[1] ಏಕೆಂದರೆ ಮೊಹೆಂಜೋದಾರೋ ಜನರು ಪೂಜಿಸುತ್ತಿದ್ದ ಪಶುಪತಿ ಶಿವನು ಋಗ್ವೇದದ ಕಾಲದಲ್ಲಿ ಶಿಶ್ನವೆಂದು ಹೀಯಾಳಿಸಲ್ಪಟ್ಟಿದ್ದರೂ, ಯಜುರ್ವೇದದ ಹೊತ್ತಿಗೆ ಸಂಪೂಜ್ಯನಾಗಿದ್ದನು. ಇಂದ್ರನು ಸರ್ವೋತ್ತಮನಾಗಿದ್ದಾಗ ಸಾಮಾನ್ಯ ದೈವವಾಗಿದ್ದ ರುದ್ರನಿಗೆ ಶಿವನ ಪಟ್ಟವು ಯಜುರ್ವೇದದಲ್ಲಿ ದೊರೆತು, "ಶಿವ ನಾಮಾಸಿ' ಎಂದು ಕರೆಯಲ್ಪಟ್ಟಿದ್ದಾನೆ. ಯಜುರ್ವೇದದ ಆರನೆಯ ಅಧ್ಯಾಯದಲ್ಲಿ ತ್ರಿಪುರ ಸಂಹಾರದ ವಿಷಯವು ಬಂದು ಶಿವೋತ್ಕರ್ಷವು ಸ್ಥಾಪಿಸಲ್ಪಟ್ಟಿದೆ. "ರುದ್ರಃ ಪಶೂನಾಮಧಿಪತಿರಿತಿ ವಯಂ ಬ್ರಹ್ಮಾದಯಃ ಸರ್ವೇ ಪಶವಃ ಅಸ್ಮಾಕಂ ತ್ವಮೇಕಂ ಪತಿರಿತಿ" ಎಂದು ಮೊದಲಾಗಿ ಹೇಳಿರುವುದರಲ್ಲಿ ಪಾಶುಪತಧರ್ಮದ ಮುಖ್ಯ ಅಂಶವು ಗ್ರಾಹ್ಯವಾಗಿದೆ. ಇನ್ನು ಪಶುಪಾಶ ಮತ್ತು ಪತಿಗಳ ವಿಷಯವು ಅಥರ್ವವೇದದಲ್ಲಿ ಬರುತ್ತದೆ. ಕರ್ಮಾರ್ಕರವರ "Religions of India" ಗ್ರಂಥದಲ್ಲಿ ಹೇಳಿದಂತೆ[2] ಮೊಹೆಂಜೋದಾರೋ ನಾಗರೀಕರ ಪಶುಪತಿಯು ಅಥರ್ವವೇದದ ಕಾಲದಲ್ಲಿ ಏಕವ್ರಾತ್ಯ

---

1. The man to whose house.... the Vratya possessing knowledge comes as a guest, should of his own accord rise to meet him and say 'Vratya give me permission, I shall sacrifice'. And if he gives permission he should sacrifice; if he does not permit him he should not sacrifice.-(Atharva XV-XII).

2. The cult of the Vratyas.... is represented in the Atharva Veda and later literature exhibits some connecting links with the healthy civilization of the Mohenjo-Daro times. This point has been greatly stressed in the recent work by Dr. Bhandarkar.

If this be so, then it definitely indicates some thing of a pre-Aryan institution which was only modified and made as their own by the Aryan in later times. In the hymn on Ekavratya, it is emphatically stated that the Ekavratya was the Supreme Being of the universe.

ನೆಂಬ ಹೆಸರಿನಿಂದ ಮಹಾ ದೇವನಾಗಿ ಸಂಪೂಜ್ಯನಾದನು; ಮಹೆಂಜೋದಾರೋ ನಾಗರಿಕರ ಸಂಪ್ರದಾಯಕ್ಕೂ, ವ್ರಾತ್ಯರ ಸಂಪ್ರದಾಯಕ್ಕೂ ಸಂಬಂಧವಿದೆಯೆಂಬ ವಿಷಯವು ಡಾ|| ಭಂಡಾರ್ಕರವರ ಇತ್ತೀಚಿನ ಗ್ರಂಥದಲ್ಲಿ ಪ್ರಾಮುಖ್ಯವಾಗಿ ಹೇಳಲ್ಪಟ್ಟದೆಯೆಂಬುದೂ, ಇದೇ ಧರ್ಮವು ಮುಂದೆ ಆರ್ಯರಿಂದ ಸ್ವಧರ್ಮವಾಗಿ ಮಾರ್ಪಡಿಸಲ್ಪಟ್ಟತೆಂಬುದೂ ಕರ್ಮಾರ್ಕರವರ ಅಭಿಪ್ರಾಯ ಕಸ್ತೂರಿ ಮಾಸಿಕದಲ್ಲಿನ "ಕ್ಷೇತ್ರರಾಜ ಕಾಶಿ-ಇಲ್ಲಿ ಭಾರತದ ಸಂಯುಕ್ತ ಸಂಸ್ಕೃತಿಯ ಬೀಜಾರೋಪವಾಯಿತು" ಎಂಬ ಲೇಖನದ ಈ ಭಾಗವು ಉಲ್ಲೇಖಾರ್ಹವಾಗಿದೆ :

"'ಗಂಗಾ ಕಣಿವೆಗೆ ಕಾಲಿಟ್ಟ ಆರ್ಯರಲ್ಲಿ ಕಾಶಿಗಳೇ ಮೊದಲಿಗರು. ಅದು ಭಾರತಮೊಳಗಿನ ಭಾರತವೆಂದು ವಿದ್ವಾಂಸರಿಂದ ಕರೆಸಿಕೊಳ್ಳುತ್ತಿದ್ದಿತು. ಅಲ್ಲಿ ಪ್ರವೇಶಿಸಿದ ಕಾಶಿಗಳು ವಿಜಿಗೀಷುಗಳಂತೆ ವರ್ತಿಸದೆ, ಸಮಾನ ನಾಗರಿಕರಂತೆ ವರ್ತಿಸತೊಡಗಿದರು. ಗಂಗಾ ಕಣಿವೆಯ ಅನುಪಮ ದೇಶವನ್ನಾಳುತ್ತಿದ್ದ ವ್ರಾತ್ಯರಾಜನ್ಯರು, ಜೀವನದಲ್ಲಿಯೂ, ವಿಚಾರದಲ್ಲಿಯೂ ಆರ್ಯರಿಗಿಂತ ಮಿಗಿಲಾಗಿದ್ದರು. ಅವರ ರಾಜ್ಯಭಾರ ಪದ್ಧತಿಯು ಬೌದ್ಧಿಕ ಹೆಚ್ಚಳಕ್ಕೆ ಸಾಕ್ಷ್ಯವಾಗಿದ್ದರೆ, ಅವರ ತಾತ್ತ್ವಿಕ ಹಾಗೂ ಪೌರಾಣಿಕ ವಿಶ್ವಕಲ್ಪನೆಗಳು, ಆರ್ಯಬ್ರಾಹ್ಮಣರಿಗೂ ಅವರಿಗೂ ಉಂಟಾದ ಸಾಮಾಜಿಕ ಮತ್ತು ರಾಜಕೀಯ ಸಂಪರ್ಕದಲ್ಲಿ ಪ್ರದರ್ಶಿತವಾಗಿತ್ತು. ಆರ್ಯಬ್ರಾಹ್ಮಣರು ವ್ರಾತ್ಯರಾಜನ್ಯರಿಂದ ಹಲವಾರು ವಿಷಯಗಳನ್ನು ಉತ್ಸಾಹದಿಂದ ಕಲಿತುಕೊಳ್ಳುವಂತಾಯಿತು' —ಎಂದು ನರೇಂದ್ರನಾಥಘೋಷರು ಬರೆದ್ದಾರೆ."

## ಭಾರತದ ಸನಾತನ ಧರ್ಮವನ್ನು ಸಂಸ್ಕರಿಸಿದ ಕ್ಷತ್ರಿಯ ರಾಜರು

ಬ್ರಾಹ್ಮಣರು ಪ್ರಾಜ್ಞರಾದರೂ ಬಹುಮಟ್ಟಿಗೆ ಸಂಪ್ರದಾಯಶರಣರಾಗಿದ್ದರೆಂದು ತೋರುವುದು. ಆದುದರಿಂದ ಧರ್ಮದ ಸಂಸ್ಕರಣವು ಬಹುಮಟ್ಟಿಗೆ ಕ್ಷತ್ರಿಯ ರಾಜರುಗಳಿಂದ ಆದಂತೆ ತೋರುವುದು. ಮಂತ್ರ ಬ್ರಾಹ್ಮಣಗಳೇ ವೇದವೆಂದು ಭಾವಿಸಲ್ಪಟ್ಟದ್ದ, ಮೀಮಾಂಸ ತ್ರೈಗುಣ್ಯರ

ಕಾಲದಲ್ಲಿ ಯಜ್ಞ ಯಾಗಾದಿಗಳನ್ನು ನಿಂದಿಸಿದ ಉಪನಿಷತ್ತುಗಳು ಧರ್ಮ ಸಂಸ್ಕರಣಕ್ಕೆ ಕಾರಣವಾದವಷ್ಟೆ. ಬ್ರಾಹ್ಮಣನಾದ ಅರುಣಿಯು ಕ್ಷತ್ರಿಯ ರಾಜನಾದ ಜೈವಲಿಯ ಬಳಿಗೆ ಬ್ರಹ್ಮವಿದ್ಯೆಯನ್ನು ಅರಿಯಲು ಹೋದಾಗ, ಅವನಿಗಿಂತಲೂ ಮೊದಲು ಬ್ರಾಹ್ಮಣರಿಗೆ ಬ್ರಹ್ಮವಿದ್ಯೆಯು ಲಭಿಸಿರಲಿಲ್ಲ ವೆಂದೂ, ಆದುದರಿಂದಲೇ ಸರ್ವಲೋಕಗಳಲ್ಲಿಯೂ ಕ್ಷತ್ರಕ್ಕೆ ಪ್ರಶಸ್ತಿಯಿದ್ದಿ ತೆಂದೂ[1] ಹೇಳಿರುವನು. ಇತ್ತೀಚೆಗೆ ಧರ್ಮಸಂಸ್ಕರಣವು ವ್ರಾತ್ಯರಾಜನ್ಯ ರಿಂದ ಆದುದು ಮೇಲಿನ ಆಧಾರದಿಂದ ತಿಳಿದುಬರುವುದು. ಅಷ್ಟೇಕೆ ಬೌದ್ಧ ಜೈನಧರ್ಮಗಳಾದರೋ ವ್ರಾತ್ಯರಾಜನ್ಯರಿಂದಲೇ ಸ್ಥಾಪಿಸಲ್ಪಟ್ಟವು. ಹರ್ಡೀಕರ್ ಮಂಜಪ್ಪನವರ "ಶುದ್ಧಿಸಂಘಟನೆ" ಗ್ರಂಥದಲ್ಲಿ ಗಮನಿಸಿರುವಂತೆ "ನಟನಾಮಕ ವ್ರಾತ್ಯ ಕ್ಷತ್ರಿಯರಲ್ಲಿ ಜಿನ ಮತ್ತು ಶಕನಾಮಕ ವ್ರಾತ್ಯ ಕ್ಷತ್ರಿಯರಲ್ಲಿ ಗೌತಮಬುದ್ಧ ಜನ್ಮವೆತ್ತಿ ವೇದ ಮತ್ತು ಚತುರ್ವರ್ಣಗಳ ವಿರೋಧವಾದ ಮತಗಳನ್ನು ಸ್ಥಾಪಿಸಿ, ವ್ರಾತ್ಯ ಮತ್ತು ಶೂದ್ರರಲ್ಲಿ ಐಕಮತ್ಯ ವನ್ನುಂಟುಮಾಡಿ, ಶುದ್ಧ ತ್ರೈವರ್ಣಿಕರನ್ನು ಹೀನಸ್ಥಿತಿಗೆ ತರಲಾರಂಭಿಸಿ ದರು ಎಂದು ಪ್ರಸಿದ್ಧ ಇತಿಹಾಸ ಸಂಶೋಧಕ ರಾಜವಾಡೆಯವರು ಬರೆದಿದ್ದಾರೆ." ವೇದಗಳು ತ್ರೈಗುಣ್ಯ ವಿಷಯವಾದವು ಆದುದರಿಂದ ನಿಸ್ತ್ರೈ ಗುಣನಾಗು—ಎಂದು ಹೇಳಿದ ಶ್ರೀಕೃಷ್ಣನು ಕ್ಷತ್ರಿಯನೇ. ವ್ರಾತ್ಯರು ಪ್ರಬಲಿಸಿ, ಯಜ್ಞಯಾಗಾದಿಗಳನ್ನು ಪ್ರೇರೇಪಿಸುತ್ತಿದ್ದ ತ್ರೈವರ್ಣಿಕರು ಹೀನಸ್ಥಿತಿಗೆ ಬರುತ್ತಿರಲು, ಸಂಪ್ರದಾಯಶರಣರಾದ ಸನಾತನ ಧರ್ಮಾನು ಯಾಯಿಗಳು ಎಚ್ಚೆತ್ತು, ವ್ರಾತ್ಯ ಧರ್ಮಾನುಸಾರವಾಗಿ ತಮ್ಮ ಧರ್ಮವನ್ನು ಸಂಸ್ಕರಿಸಿಕೊಂಡು, ವ್ರಾತ್ಯರನ್ನು ತಮ್ಮೊಳಗೆ ಸೇರಿಸಿಕೊಳ್ಳಲು 'ವ್ರಾತ್ಯ ಸ್ತೋಮ'ವೆಂಬ ಸಂಸ್ಕಾರವನ್ನು ಏರ್ಪಡಿಸಿಕೊಂಡರು. ಒಟ್ಟಿನಲ್ಲಿ ಹೇಳು ವುದೇನೆಂದರೆ ಮಹೆಂಜೋದಾರೋ ನಿವಾಸಿ ದ್ರಾವಿಡರ ಪಾಶುಪತಧರ್ಮವೂ

---

1. ನ ಪ್ರಾಕ್ತ್ವತ್ತಃ ಪುರಾ ವಿದ್ಯಾ ಬ್ರಾಹ್ಮಣಾನ್ ಗಚ್ಛತಿ, ತಸ್ಮಾದು ಸರ್ವೇಷು ಲೋಕೇಷು ಕ್ಷತ್ರಸ್ಯೈವ ಪ್ರಶಾಸನಮಭೂತ್-ಛಾಂದೋಗ್ಯ ೫-೩-೭.

2. ತ್ರೈಗುಣ್ಯ ವಿಷಯಾ ವೇದ ನಿಸ್ತ್ರೈಗುಣ್ಯೋಭವಾರ್ಜುನ-ಭ ಗೀ.

ವೈದಿಕಧರ್ಮಕ್ಕೆ ವಿರೋಧವಾಗಿ ಮೊದಲು ಮೊದಲು ಇದ್ದರೂ ಪರಗುಣ ಗ್ರಾಹಿಗಳಾದ ಆರ್ಯರಿಂದ ಸ್ವೀಕರಿಸಲ್ಪಟ್ಟು ಎರಡು ಧರ್ಮಗಳ ಸಮ್ಮಿಲನ ದಿಂದಾದ ಧರ್ಮವು ಹಾಲು ಜೇನು ಸೇರಿದಂತೆ ಸುಸ್ವಾದವಾಯಿತು.

## ಮಹಾಭಾರತ ಕಾಲದ ಲಿಂಗಿ ಬ್ರಾಹ್ಮಣರು

ರಾಮಾಯಣ ಕಾಲದಿಂದ ಮಹಾಭಾರತ ಕಾಲದೊಳಗೆ ಆದ ಧಾರ್ಮಿಕ ನಿಲುವಿನಲ್ಲಿ ಬದಲಾವಣೆ ಬೇಕಾದಷ್ಟು ಆಗಿದ್ದಿತು. ಶೂದ್ರನು ತಪಸ್ಸು ಮಾಡಿದರೆ ಅವನು ವಧಾರ್ಹನು ಎನ್ನುವ ಕಾಲ ರಾಮಾಯಣ ಕಾಲ. ಕಟುಕನಾದರೂ, ವ್ಯಾಪಾರಿಯಾದರೂ ಬ್ರಹ್ಮಜ್ಞಾನಿಯಾಗಿರಬಹುದೆಂಬ ಕಾಲ ಮಹಾಭಾರತದ ಕಾಲ. ಅವೈದಿಕವೆನಿಸಿದ್ದ ಪಾಶುಪತವು ಮಹಾ ಭಾರತದ ಕಾಲಕ್ಕೆ ಸನ್ಮಾನ್ಯವಾಗಿದ್ದಿತು. ಶ್ರೀ ಕೃಷ್ಣನೇ ಉಪಮನ್ಯು ಋಷಿಯಿಂದ ಪಾಶುಪತದೀಕ್ಷೆಯನ್ನು ಪಡೆದುದನ್ನು ಮಹಾಭಾರತವು ಹೇಳುತ್ತದೆ. ಧರ್ಮರಾಯನು ಭೀಷ್ಮನನ್ನು ಕುರಿತು—ದಾನಕ್ಕೆ ಲಿಂಗಿ ಬ್ರಾಹ್ಮಣರು ಸತ್ಪಾತ್ರರೋ, ಅಲಿಂಗಿ ಬ್ರಾಹ್ಮಣರು ಸತ್ಪಾತ್ರರೋ ಎಂಬ ಪ್ರಶ್ನೆಯನ್ನು ಕೇಳುತ್ತಾನೆ. ತಪಸ್ವಿಗಳಾದರೆ ಲಿಂಗಿಗಳಾಗಲೀ ಅಲಿಂಗಿ ಗಳಾಗಲೀ ದಾನಕ್ಕೆ ಸತ್ಪಾತ್ರರೆಂದು ಭೀಷ್ಮನು ಉತ್ತರ ಕೊಡುತ್ತಾನೆ.[1] ತಪಸ್ವಿಗಳು ಗೃಹಸ್ಥರಾಗಿಯೂ ಇರಬಹುದು, ಸಂನ್ಯಾಸಿಗಳಾಗಿಯೂ ಇರಬಹುದು. ಇಲ್ಲಿ ಲಿಂಗಿಗಳೆಂದರೆ ಕೆಲವರು ವಾದಿಸುವಂತೆ ಸಂನ್ಯಾಸಿಗಳಲ್ಲ; ಏಕೆಂದರೆ ಗೃಹಸ್ಥರು ದಾನಾರ್ಹರೇ ಹೊರತು ಸಂನ್ಯಾಸಿಗಳಲ್ಲ. "ಮುಂಡೋऽಪರಿಗ್ರಹಃ" ಎಂಬ ಆಧಾರವಿದೆ. ಆದುದರಿಂದ ಲಿಂಗಿ ಎಂದರೆ ಸಂನ್ಯಾಸಿಯೆಂದು ಅರ್ಥಮಾಡಿದರೆ ಸಂನ್ಯಾಸಿಗಳಿಗೆ ದಾನ

1. ಯುಧಿಷ್ಠಿರ—ಕಿಮಾಹುರ್ಭರತಶ್ರೇಷ್ಠ ಪಾತ್ರಂ ವಿಪ್ರಾಃ ಸನಾತನಾಃ |
ಬ್ರಾಹ್ಮಣಂ ಲಿಂಗಿನಂ ಚೈವ ಬ್ರಾಹ್ಮಣಂ ವಾಪ್ಯಲಿಂಗಿನಂ ||
ಭೀಷ್ಮ—ಸ್ವವೃತ್ತಿಮಭಿಪನ್ನಾಯ ಲಿಂಗಿನೇ ಚೇತರಾಯ ಚ |
ದೇಯಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ ||

ಪರಿಗ್ರಹವು ನಿಷಿದ್ಧವೆಂಬ ಸಾಮಾನ್ಯ ನಿಯಮವು ಧರ್ಮರಾಯನಿಗೆ ಗೊತ್ತಿರಲಿಲ್ಲವೆನ್ನಬೇಕಾದೀತು. ಲಿಂಗಿ ಪಾಶುಪತರು ಮಹಾಭಾರತ ಕಾಲದಲ್ಲಿನ ಪದ್ಧತಿಯಂತೆ ಪೂಜ್ಯರಾಗಿದ್ದರು; ಇದು ಬ್ರಹ್ಮಸೂತ್ರಕ್ಕೆ ವಿರುದ್ಧವಾಗಿದ್ದಿತು; ಆದುದರಿಂದ ಧರ್ಮರಾಯನಿಗೆ ಪ್ರಚಲಿತ ಪದ್ಧತಿಗೂ ಶಾಸ್ತ್ರಕ್ಕೂ ವಿರೋಧವಿದ್ದಾಗ ಪದ್ಧತಿಯನ್ನು ಅನುಸರಿಸಬೇಕೇ ಬೇಡವೇ ಎಂಬ ಹೆಚ್ಚು ತೊಡಕಿನ ಪ್ರಶ್ನೆಯು ಎದ್ದುದು ಮೇಲಿನ ವಿಚಾರಕ್ಕೆ ಕಾರಣವಾಯಿತು. ಪಾಶುಪತಸೂತ್ರದಂತೆ ಪಾಶುಪತರು ಲಿಂಗಧಾರಿಗಳು. ಮಹಾಭಾರತದ ಕಾಲದಲ್ಲಿ ಲಿಂಗಧಾರೀಬ್ರಾಹ್ಮಣರಿದ್ದುದು ಮೇಲಿನ ಆಧಾರದಿಂದ ಸಿದ್ಧವಾಗುತ್ತದೆ.

ವೀರಶೈವರ ತಾತ್ತ್ವಿಕ ವಿಚಾರವು ಇತರರ ತಾತ್ತ್ವಿಕ ವಿಚಾರಕ್ಕಿಂತ ಭಿನ್ನವಾಗಿರುವುದನ್ನು ಹಿಂದೆಯೇ ತೋರಿಸಿದೆ. ಮಹಾಭಾರತದಲ್ಲಿ ಹೇಳಲ್ಪಟ್ಟಿರುವ ವೀರಶೈವರ ತಾತ್ತ್ವಿಕ ವಿಚಾರವು ಕನ್ನಡನಾಡಿನ ಚರಿತ್ರೆಯ ಎರಡನೆಯ ಭಾಗದ ೨೦೧–೨೦೫ನೆಯ ಪುಟಗಳಲ್ಲಿ ಉಲ್ಲೇಖವಾಗಿದೆ. ಅದರ ಸ್ವಲ್ಪ ಭಾಗವಿದು:

“ಸಾಂಖ್ಯದಲ್ಲಿ ಮಹಾಭೂತಗಳೇ ಕಡೆಯ ತತ್ತ್ವಗಳು; ಅವು ತನ್ಮಾತ್ರೆಗಳಿಂದ ಬಂದವು; ‘ಕರಣ ಹಸಿಗೆ’ಯ ಪ್ರಕಾರ ಮಹಾಭೂತಗಳೇ ಮೊದಲನೆಯವು; ಅವುಗಳಿಂದಲೇ ಉಳಿದ ತತ್ತ್ವಗಳ ಉತ್ಪತ್ತಿ. ಮೇಲಾಗಿ ಸಾಂಖ್ಯದಲ್ಲಿ ಪ್ರಾಣವಾಯುಗಳು ತತ್ತ್ವಗಳೊಳಗೆ ಗಣಿಸಲ್ಪಡುವುದಿಲ್ಲ. ಕರಣಹಸಿಗೆಯಲ್ಲಿ ಅವು ತತ್ತ್ವಗಳಾಗಿವೆ. ಆದುದರಿಂದ ಸಾಂಖ್ಯರಿಗೂ ಕರಣಹಸಿಗೆಗೂ ಅಂತರವಿದೆ....ಮಹಾಭಾರತ ಪರ್ವ—೧೨ನೆ ಅಧ್ಯಾಯ, ೩೧೪ ಶ್ಲೋಕ, ೪ ಮತ್ತು ೧೪ ಇವುಗಳಲ್ಲಿ ತತ್ತ್ವಗಳ ಉತ್ಪತ್ತಿಯ ಬಗ್ಗೆ ವಿವೇಚನೆಯಿದೆ. ಅವುಗಳಲ್ಲಿ ಅಂತಃಕರಣ, ಬುದ್ಧೀಂದ್ರಿಯ, ಕರ್ಮೇಂದ್ರಿಯ ಮತ್ತು ತನ್ಮಾತ್ರೆಗಳು ಮಹಾಭೂತಗಳಿಂದಲೇ ಉದ್ಭವಿಸಿವೆಯೆಂದು ಉಲ್ಲೇಖವಿದೆ. ಮಹಾಭಾರತದ ಈ ವಿವೇಚನೆಗೂ ಕರಣಹಸಿಗೆಯ ವಿವೇಚನೆಗೂ ಮುಖ್ಯ ಮಾತಿನಲ್ಲಿ ಎಂದರೆ ಮಹಾಭೂತಗಳಿಂದ ಉಳಿದ ತತ್ತ್ವಗಳ ಉತ್ಪತ್ತಿ ಎಂಬುದರಲ್ಲಿ ಸರಿಬೀಳ

ವುದು. ಮಹಾಭಾರತದಲ್ಲಿಯೇ ಮತ್ತೊಂದು ಕಡೆಗೆ ಪ್ರಾಣವಾಯುಗಳನ್ನು ತತ್ತ್ವಗಳಲ್ಲಿ ಗಣಿಸಿರುವರೆಂದು ಡಾ॥ ಆರ್ಥರ್ ಬೆಂಡೀಲ್ ಕೀತ್ ಅವರು ತಮ್ಮ ಸಾಂಖ್ಯದರ್ಶನ ಎಂಬ ಪುಸ್ತಕದಲ್ಲಿ ಹೇಳಿರುವರು. ಇದರ ಮೇಲಿಂದ, ಕರಣಹಸಿಗೆಯಲ್ಲಿನ ಅನೇಕ ಮಾತು, ಮಹಾಭಾರತದಲ್ಲಿಯವುಗಳಿಗೆ ಸರಿಬೀಳುವುದರಿಂದ ವೀರಶೈವರು ತಮ್ಮ ತತ್ತ್ವಜ್ಞಾನವೆಂದು ತಿಳಿಯುವ ಕರಣಹಸಿಗೆಯ ತತ್ತ್ವವಿವೇಚನೆಯು ಮಹಾಭಾರತಕಾಲದಷ್ಟು ಹಳೆಯ ದೆಂಬುದನ್ನು ಒಪ್ಪಿಕೊಳ್ಳಬೇಕಾಗುವುದು....ಈ ಪ್ರಕಾರದ ಶೈವರು ಮಹಾಭಾರತದ ಕಾಲದಲ್ಲಿ ಇದ್ದರೆಂಬುದು ಕಂಡುಬರುವುದು. 'ವೇದಗಳನ್ನು ತ್ಯಜಿಸಿ, ಮುಖತಲೆಗಳನ್ನು ಬೋಳಿಸಿಕೊಂಡು ಕಾಷಾಯವಸ್ತ್ರಗಳನ್ನು ಧರಿಸಿ ಭಿಕ್ಷುಕರಾಗಿ ತಿರುಗುವಂಥವರು; ಪರಲೋಕದ ಭಯವಾಗಲೀ ಮರಣಾನಂತರ ತಿರುಗಿ ಬಂದೇವೆಂಬ ಭಯವಾಗಲೀ ಇಲ್ಲದಂತವರು; ನಾನೇ ರುದ್ರನು ಸರ್ವತ್ರ ವ್ಯಾಪಿಯು ಸರ್ವರಿಗೂ ಹಿತಕರವೂ ಗೂಢವೂ ಆದ ಪಾಶುಪತ ಧರ್ಮವನ್ನು ಮೊದಲನೆಯ ಸಾರಿ ಹುಡುಕಿ ತೆಗೆದೆನು; ಅದನ್ನು ಕಲಿಯಲು ವರ್ಷಗಳು ಬೇಕು; ಆದರೂ ಹತ್ತೇ ದಿವಸಗಳಲ್ಲಿ ಕೂಡ ಅದನ್ನು ಕಲಿಯಲು ಸಾಧ್ಯವಿದೆ. ವರ್ಣವ್ಯವಸ್ಥೆಗೆ ಮತ್ತು ಶಾಸ್ತ್ರಗಳ ನಿಯಮಗಳಿಗೆ ವಿರುದ್ಧವಾಗಿದೆಯೆಂದು ತಿಳಿಗೇಡಿಗಳಿಂದ ತಿರಸ್ಕರಿಸಲ್ಪಟ್ಟರೂ ಬಲ್ಲವರು (ಗತಾಂತೌ) ಅದನ್ನು ಬಣ್ಣಿಸುವರು; ಅದು ನಿಜವಾಗಿಯೂ ವರ್ಣವ್ಯವಸ್ಥೆಯುಳ್ಳದುದು, ಮಿಗಿಲಾದುದು.' ಈ ಅವತರಣಿಕೆಯಲ್ಲಿರುವ ಆಚಾರಗಳೆಲ್ಲವೂ ವೀರಶೈವರಲ್ಲಿ ಇನ್ನೂ ಪ್ರಚಾರ ದಲ್ಲಿವೆ." ಮಹಾಭಾರತ ಕಾಲದಲ್ಲಿ ಲಿಂಗಧಾರಣೆಯ ಪದ್ಧತಿಯೂ, ವೀರ ಶೈವರ ತಾತ್ತ್ವಿಕ ಕಲ್ಪನೆಯೂ ಪ್ರಚಾರದಲ್ಲಿದ್ದುವೆಂಬುದು ಸ್ಪಷ್ಟ.

## ಬಸವ ಪೂರ್ವ ಲಿಂಗಿಬ್ರಾಹ್ಮಣ ಪಾಶುಪತ ಮಾಹೇಶ್ವರರು

ಮಹಾಭಾರತದ ಕಾಲಾನಂತರ ಕ್ರಿಸ್ತಪೂರ್ವ ೧೫೦ ರಿಂದ ಕ್ರಿಸ್ತಶಖೆ ೩೪೮ ರವರೆಗೆ ಆಳಿದ ನಾಗವಂಶೀಯರಾದ ಭಾರಶಿವರ ಕಾಲವು ಶೈವಧರ್ಮದ ಉತ್ಕರ್ಷಕಾಲ. ಇವರ ಪ್ರಶಸ್ತಿಯು "ಅಂಸಭಾರ ಸನ್ನಿಹಿತ ಶಿವ ಲಿಂಗೋದ್ವಹನ ಶಿವಪರಿತುಷ್ಟ ಸಮುತ್ಪಾದಿತ ರಾಜವಂಶಾನಾಂ"

ಎಂದು ಪ್ರಾರಂಭವಾಗುವುದರಿಂದ ಇವರು ಶಿವಲಿಂಗವನ್ನು ಭುಜದಲ್ಲಿ ಧರಿಸುತ್ತಿದ್ದರೆಂಬುದು ವಿಸ್ಸಾಂಸರ ಅಭಿಪ್ರಾಯ. ಇವರ ಕಾರ್ಯವನ್ನು ಮುಂದುವರಿಸಿದವರು ಕ್ರಿ.ಶ. ೩೮೦ರವರೆಗೆ ಆಳಿದ ವಾಕಟಕರು ಕ್ರಿ.ಶ. ೩೮೦ನೆಯ ವರ್ಷದ ಶಿಲಾಲೇಖದಲ್ಲಿ ಉದಿತಾಚಾರ್ಯನೆಂಬ ಪಾಶುಪತಾಚಾರ್ಯನ ಹೆಸರಿದೆ.

ಕ್ರಿಸ್ತಶಕೆಯ ಪ್ರಾರಂಭದ ಶತಮಾನಗಳಲ್ಲಿ ಆಳಿದ ಪಲ್ಲವರಾಜರುಗಳಲ್ಲಿ ಕೆಲವರಿಗೆ "ಶಿರಸಿ ಶಂಕರಂ", "ಶಿವಶಿರಸಿಧಾರಯಿತಾ", ಶಿವಚೂಡಾಮಣಿ" ಮೊದಲಾದ ಬಿರುದುಗಳಿದ್ದುದಕ್ಕೆ ಶಾಸನಾಧಾರಗಳಿರುವುದರಿಂದ ಲಿಂಗಧಾರೀ ಧರ್ಮವು ಬಸವೇಶ್ವರನ ಕಾಲಕ್ಕಿಂತ ಬಹು ಹಿಂದಿನಿಂದ ಇದ್ದಿತೆಂಬುದರಲ್ಲಿ ಸಂದೇಹವಿಲ್ಲ. ವಾಯಲೂರಿನ ರಾಜಸಿಂಹನ ಶಾಸನ ವಿಷಯವಾಗಿ (Ep. Ind. Vol. 18) ಶಾಸನ ಸಂಶೋಧಕರಾದ ಹೆಚ್. ಕೃಷ್ಣಶಾಸ್ತ್ರಿಗಳು ಬರೆದಿರುವ ಲೇಖನವು ಗಮನಾರ್ಹವಾಗಿದೆ:

The adjunct ಮಹೇಶ್ವರ ಶಿಖಾಮಣಿ ದೀಪ್ತಿಮೌಲಿಃ which occurs in these verses and which literally rendered means one whose diadem shines with the head-jewel viz Maheswara (Siva) is rather perplexing. Comparing this with titles like ಶಿವಚೂಡಾಮಣಿ etc. which occurs in South Indian Inscriptions Vol. 1, No. 18 and 19.... all with reference to Rajasimha, it looks as if the king did actually wear a figure of Siva or rather his symble linga on his head.... All these references clearly point to the existance of linga cult long before the revival of the Veerasaiva faith under the auspicies of the famous Kalachuri Minister Basava

(Channabasava) in which the wearing of Linga plays a prominent part.

ಶ್ರೀ ರಾಮಾನುಜಾಚಾರ್ಯರು ಕ್ರಿ. ಶ. ೧೧೩೭ರವರೆಗೆ ಬದುಕಿದ್ದರಾಗಿ ಕೆಲವು ಕಾಲದವರೆಗಾದರೂ ಅವರು ಬಸವೇಶ್ವರಸಮಕಾಲೀನರಾಗಿದ್ದರು—ಎನ್ನಬಹುದಷ್ಟೆ. ಶ್ರೀ ಮಧ್ವಾಚಾರ್ಯರು ಹದಿಮೂರನೆಯ ಶತಮಾನದ ಆದಿಭಾಗದಲ್ಲಿದ್ದವರು. ಆದುದರಿಂದ ಈ ಆಚಾರ್ಯರುಗಳ ಪಂಥಗಳು ಬ್ರಾಹ್ಮಣರಲ್ಲಿ ಒಡಗೊಂಡು ತ್ರಿಮತಸ್ಥರೆನ್ನುವ ವಿಭಾಗಗಳು ರೂಪುಗೊಂಡುದು ಹದಿನಾಲ್ಕನೆಯ ಶತಮಾನದಲ್ಲಿಯೇ ಎನ್ನಬಹುದು. ಅಂತು ಬಸವೇಶ್ವರಪೂರ್ವಯುಗದಲ್ಲಿ ಬ್ರಾಹ್ಮಣರೆಲ್ಲರೂ ಸ್ಮೃತಿಯನ್ನು ಅನುಸರಿಸುತ್ತಿದ್ದ ಸ್ಮಾರ್ತರೇ. ಇವರಲ್ಲಿ ವೈಷ್ಣವರು ಪಾಂಚರಾತ್ರಾಗಮಾನುಯಾಯಿಗಳಾಗಿದ್ದರು. ಶೈವರು ಪಾಶುಪತಾಗಮಾನುಯಾಯಿಗಳಾಗಿದ್ದರು. ಈ ಪಾಶುಪತ ಮಾಹೇಶ್ವರರು ಕೂರ್ಮಪುರಾಣವು ರಚಿತವಾದ ಕಾಲದಲ್ಲಿ ಮೂರು ಪಂಥದವರಾಗಿದ್ದುದು ಆ ಪುರಾಣದಿಂದ ತಿಳಿಯುತ್ತದೆ :

"ತಾಂತ್ರಿಕಂ ವೈದಿಕಂ ಮಿಶ್ರಂ ತ್ರಿಧಾಪಾಶುಪತಂ ಶುಭಂ
ತಪ್ತಲಿಂಗಾಂಕ ಶೂಲಾದಿಧಾರಣಂ ತಾಂತ್ರಿಕಂ ಮತಂ
ಲಿಂಗರುದ್ರಾಕ್ಷಿ ಭಸ್ಮಾದಿ ಧಾರಣಂ ವೈದಿಕಂ ಭವೇತ್
ರವಿಂ ಶಂಭುಂ ತಥಾಶಕ್ತಿಂವಿಘ್ನೇಶಂಚ ಜನಾರ್ದನಂ
ಯಜಂತಿ ಸಮಭಾವೇನ ಮಿಶ್ರಂ ಪಾಶುಪತಂ ಶುಭಂ."

ಕೂರ್ಮಪುರಾಣದ ಈ ಶ್ಲೋಕದಲ್ಲಿ ಹೇಳಿರುವ ವೈದಿಕಪಾಶುಪತವೆಂದರೆ ಲಕುಳೀಶ ಪಾಶುಪತವೇ ಎಂಬ, ಡಾ|| ಪಾಠಕ್‌ರ 'Siva cults in Northern India' ಗ್ರಂಥದ ಅಭಿಪ್ರಾಯವು ಒಪ್ಪತಕ್ಕುದೇ. ಏಕೆಂದರೆ ಲಕುಳೀಶನಿಂದ ಹಿಡಿದು ಭಾಷ್ಯಕಾರ ಶ್ರೀಕಂಠನ ಗುರು ಶ್ವೇತಾಚಾರ್ಯರ ವರೆಗೆ ಗುರುಪರಂಪರೆಯನ್ನು ಹೇಳುವ ಶಿವಮಹಾಪುರಾಣದಲ್ಲಿ ಉಕ್ತನಾದಂತೆ, ಪಾಶುಪತ ವ್ರತವನ್ನು ಆಜೀವಪರ್ಯಂತ ಆಚರಿಸುವುದರಿಂದ ಮೋಕ್ಷವಾಗುವುದೆಂದು ಶ್ರೀಕಂಠಭಾಷ್ಯದಲ್ಲಿ ಹೇಳಿದೆ. ಆಜೀವ

ಪರ್ಯಂತ ಆಚರಿಸುವುರೆಂದರೆ ಮೋಕ್ಷಾಪೇಕ್ಷಿಗಳಾದ ನಿವೃತ್ತರು. "ಚರಪೂಜಾ ನಿವೃತ್ತಾನಾಂ........ ಪೂಜಾಕೃತ್ಯತ್ವಥ ತಲ್ಲಿಂಗಂ ಶಿರಸಾ ಧಾರಯೇತ್ ಸದಾ" ಎಂದು ಶಿವಮಹಾಪುರಾಣದಲ್ಲಿ ಹೇಳಿದೆ. ಪಾಶುಪತ ಸೂತ್ರಗಳ ಮೊದಲನೆಯ ಅಧ್ಯಾಯದಲ್ಲಿಯೇ 'ಲಿಂಗಧಾರೀ' ಎಂಬ ಸೂತ್ರವಿದೆ ಇದರ ಕೌಂಡಿನ್ಯಭಾಷ್ಯದಲ್ಲಿ ಲೀಯನಾಲ್ಲಿಂಗಸಂಜ್ಞ ಲಿಂಗಂ ತದ್ಧಾರಯನ್ ಲಿಂಗಧಾರೀ ಭವತಿ, ದಂಡಧಾರಿವದಿತ್ಯರ್ಥಃ ಎಂದು ಹೇಳಿದೆ. ದಂಡವನ್ನು ಧರಿಸಿದವರನ್ನು ದಂಡಧಾರಿ ಎನ್ನುವಂತೆ ಲಿಂಗವನ್ನು ಧರಿಸಿದವರು ಲಿಂಗಧಾರೀ ಎಂದು 'ಲಿಂಗಧಾರೀ' ಪದದ ಅರ್ಥವನ್ನು ಮಾಡಿದೆ. ಡಾ|| ಭಂಡಾರ್ಕರರು ಪಾಶುಪತರನ್ನು ಲಿಂಗಧಾರಿಗಳೆನ್ನುವುದಕ್ಕೆ ಪಾಶುಪತ ಸೂತ್ರವಿದರ ಆಧಾರವಿದೆ. ಪಾಷಾಣ ಲಿಂಗಂ ಚ ಧಾರಿಣಃ ಜಂಗಮಾಃ, ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ' ಎಂದು ಶಂಕರವಿಜಯದಲ್ಲಿ ಹೇಳಿದೆ. ಪಂಪನ ಆದಿಪುರಾಣದಲ್ಲಿ (ಕ್ರಿ ಶ. ೯೪೧) 'ಕುಲಿಂಗಿಗಳಂ ಜಗಂ ಸೇವಿಸುಗುಂ' ಎಂಬ ಅಸಮಾಧಾನದ ಮಾತಿದೆ. ಜಿನಸೇನನ ಮಹಾಪುರಾಣ (ಕ್ರಿ. ಶ ೮೫೦) ದಲ್ಲಿ ಕುಲಿಂಗಿಗಳ ವಿಷಯವಿದೆ. ಕ್ರಿ. ಶ. ೫೦೦ ರಿಂದ ೭೦೦ರ ಒಳಗೆ ರಚಿಸಲ್ಪಟ್ಟಿರುವುದೆಂಬ ವಡ್ಡಾರಾಧನೆಯಲ್ಲಿ 'ಪೊಲ್ಲಲಿಂಗಿಗಳ ಪೆರ್ಚಕ್ಕಂ' ಎಂದೂ 'ಪೊಲ್ಲಲಿಂಗಿಗಳೆರಸರ್ಕಾಳಿಂ ಪೂಜಿಸೆ ಪಡೆವರ್' ಎಂದೂ ವ್ಯಥೆಯಿಂದ ಹೇಳಲ್ಪಟ್ಟಿದೆ. ಕ್ರಿ. ಶ ೬-೭ ರಿಂದ ೧೧ನೆಯ ಶತಮಾನದವರೆಗೆ ರಾಜಗುರುಗಳಾಗಿ ಪೂಜಿತರಾಗಿದ್ದರೆಂದೂ, ವೇದವೇದಾಂಗಾದಿ ಸಕಲವಿದ್ಯೆಗಳನ್ನು ಕಲಿಸುವ ವಿದ್ಯಾಸಂಸ್ಥೆಗಳ ಸ್ಥಾನಪತಿಗಳಾಗಿದ್ದರೆಂದೂ ಶಾಸನಗಳಿಂದ ತಿಳಿದುಬರುವ ಪಾಶುಪತ ಗುರುಗಳನ್ನು ಪರಮತೀಯರು ತೆಗಳುವ ಮಾತುಗಳಿವು. ಕ್ರಿ.ಶ. ೧೧೧೩ನೆಯ ಇಸವಿಯ ಶಿಕಾರಿಪುರದ ೯೯ನೆಯ ಶಾಸನದಲ್ಲಿ (VII SK 99), ತಲೆಯಲ್ಲಿ ಲಿಂಗವನ್ನು ಧರಿಸಿದ ಶ್ರೀಕಂಠ ಯೋಗೀಶ್ವರನನ್ನು ಕುರಿತು 'ಈಶ್ವರಪಾದಾಬ್ಜಶೇಖರಂ ದೃಢತರಪಃ ಸಂಪತ್ತಿ ಜಾಯಾಸ್ಪಯಂವರನಾಚಾರ್ಯಗುಣಾವಳಿ ವಿಳಸಿತ ಶ್ರೀಕಂಠಯೋಗೀಶ್ವರಂ' ಎಂದು ಹೊಗಳಿದೆ. ಈ ಶಾಸನದ ಅಂತ್ಯದಲ್ಲಿರುವ ಲಿಂಗಲಿಂಗಿ ಜನ ಸನ್ನಿಧಿಯೊಳ್—ಎಂಬ

ಪದಗಳು ಗಮನಾರ್ಹವಾಗಿವೆ. ಆದುದರಿಂದ ಬಸವೇಶ್ವರ ಪೂರ್ವ ಪಾಶುಪತಶೈವ ಮಾಹೇಶ್ವರರಲ್ಲಿ ಲಿಂಗಧಾರಿಗಳಿದ್ದುದರಲ್ಲಿ ಸಂದೇಹವಿಲ್ಲ.

## ಪಾಶುಪತ ಧರ್ಮವು ವೈದಿಕ ದ್ವೈತಸಿದ್ಧಾಂತವಾದುದು

ಋಗ್ವೇದ ಕಾಲದಲ್ಲಿ ದೇವದೇವನಾದ ಮಹೇಂದ್ರನಿಗೆ ಸಮಾನರಾರು ಇಲ್ಲವೆಂಬ ಭಾವನೆಯಿದ್ದಾಗ, ದ್ರಾವಿಡರ ದೈವವಾದ ಪಶುಪತಿಶಿವನನ್ನು ಹೀಯಾಳಿಸುತ್ತಿದ್ದು ಮುಂದೆ ಇಂದ್ರಾದಿಗಳಿಗೆ ಬದಲು ತ್ರ್ಯಂಬಕ ಶಿವನನ್ನೇ ಸರ್ವೋತ್ತಮ ದೈವವನ್ನಾಗಿ ಆರ್ಯರಲ್ಲಿ ಒಂದು ಗುಂಗಡದವರು ಸ್ವೀಕರಿಸಿದರೆಂಬುದು ಮೇಲಿನ ಎಲ್ಲ ಆಧಾರಗಳಿಂದ ಸ್ಪಷ್ಟವಾಗುವುದು. ಪಶುಪತಿ ಶಿವನ ಪೂಜೆಯು ವೈದಿಕ ದೇವತೆಗಳ ವಿರುದ್ಧವಾಗಿ ಪ್ರಾರಂಭವಾದುದೆಂಬ ಕಲ್ಪನೆಯು ಇಂದಿನ ವಿದ್ವಾಂಸರ ಹೊಸ ಕಲ್ಪನೆಯಲ್ಲ; ಮೃಗೇಂದ್ರಾಗಮದಲ್ಲಿಯೇ ಈ ವಿಷಯವಿರುವುದನ್ನು ದಾಸಗುಪ್ತರು ಇಂಡಿಯನ್ ಫಿಲಾಸಫಿ ಗ್ರಂಥದ ಸಂಪುಟ-೫, ಪುಟ-೨೧ರಲ್ಲಿ[1] ಉಲ್ಲೇಖಿಸಿದ್ದಾರೆ. ಚಂಡಮಾರುತದೊಡನೆ ಸಂಬಂಧವುಳ್ಳವನೆಂದು ಪುರಾತನ ಆರ್ಯರಿಂದ ಭಾವಿಸಲ್ಪಟ್ಟ ರುದ್ರನು ಶಿವಮಹಾದೇವನೂ ಜಗತ್ತಿನ ಸೃಷ್ಟಿಕಾರಣನೂ, ಮೋಕ್ಷದಾಯಕನೂ ಕ್ರಮವಾಗಿ ಆದುದನ್ನು ಡಾ॥ ಭಂಡಾರ್ಕರ್ ಅವರು ಚಿತ್ರಿಸಿದ್ದಾರೆ.[2] ಪಶುಪತಿ ಶಿವನ ಆರಾಧಕರ ಖಂಡನೆಯು ಬ್ರಹ್ಮಸೂತ್ರದಲ್ಲಿಯೇ

---

1. Mrugendragama opens the discussion of how the old Vedic forms of worship became superceded by the Siva cult. It was pointed out that the vedic dieties were not concrete substantial objects; but their reality consisted of the mantras with which they were welcomed and worshipped and consequently vedic worship cannot be regarded as existing in time and space. But devotion to Siva may be regarded as definite and concrete form of worship which could therefore supercede the vedic practice.

2. The old Aryas saw Rudra who went about howling

ಕಂಡುಬರುತ್ತದೆ. ಈ ವಿರೋಧವು ಸಂಪ್ರದಾಯಶರಣರಲ್ಲಿ ಉಳಿದು ಬಂದುದು ಶಾಂಕರಭಾಷ್ಯದಿಂದ ಕಂಡುಬರುತ್ತದೆ. ಶ್ರೀ ಶಂಕರಾಚಾರ್ಯರು ಪಾಶುಪತ ಮತವನ್ನು "ಇಯಂ ವೇದ ಬಾಹ್ಯೇಶ್ವರ ಕಲ್ಪನಾ" ಎಂದು ಖಂಡಿಸಿದ್ದಾರೆ. ಶ್ರೀ ಶಂಕರಾಚಾರ್ಯರ ಕಾಲದವರೆಗೂ ಪಾಶುಪತ ಮತವನ್ನು ಅವೈದಿಕಮತವೆಂದು ಸಂಪೂರ್ಣವಾಗಿ ಖಂಡಿಸುವ ಪಂಗಡ ವೊಂದಿದ್ದಿತು. ಆದರೆ ತದ್ವಿರುದ್ಧವಾಗಿ ಮಹಾಭಾರತದ ಕಾಲದಲ್ಲಿಯೇ ಪ್ರಸಿದ್ಧರಾಗಿ ದಾನಾರ್ಹರೆಂದು ಭೀಷ್ಮಾಚಾರ್ಯನಿಂದ ನಿಷ್ಕರಿಸಲ್ಪಟ್ಟ ಲಿಂಗಿ-ಬ್ರಾಹ್ಮಣ-ಪಾಶುಪತರ ಮತವು ವೈದಿಕವಾಗಿ ಬಹುಮಟ್ಟಿಗೆ ಮಾರ್ಪಟ್ಟಿರಬೇಕು. ಏಕೆಂದರೆ ಕ್ರಿ.ಶ. ಆರಂಭದ ಶತಮಾನಗಳಲ್ಲಿಯೇ ಪಾಶುಪತ ಮಾಹೇಶ್ವರಾನುಯಾಯಿಗಳಾದ ಮಹಾರಾಜರುಗಳು ಅಶ್ವಮೇಧಾದಿ ಯಾಗಗಳನ್ನು ಮಾಡಿಸುತ್ತಿರುವುದು ಕಂಡುಬರುತ್ತದೆ. ಪಾಶುಪತವನ್ನು ವೈದಿಕವನ್ನಾಗಿ ಮಾಡುವುದರಲ್ಲಿ ಕ್ರಿಸ್ತಶಕದ ಆರಂಭಭಾಗದಲ್ಲಿ ಹುಟ್ಟಿದ ಲಕುಳೀಶನು ಬಹುಮಟ್ಟಿಗೆ ಕಾರಣನೆನ್ನಬಹುದು. ಆತನ ಕಾಲದಿಂದ ಪಾಶುಪತವು ಲಕುಳೀಶ-ಪಾಶುಪತವೆಂದು ಪ್ರಸಿದ್ಧವಾಯಿತು. ಶ್ರೀಯುತ ಕಪಟರಾಳ ಕೃಷ್ಣರಾಯರ 'ಕರ್ನಾಟಕ ಲಾಕುಳ ಶೈವರ ಇತಿಹಾಸ' ಗ್ರಂಥ ಡಲ್ಲಿ ಅನೇಕ ಶಾಸನಾದಿ ಆಧಾರಗಳಿಂದ ನಿಶ್ಚಯಿಸಿರುವಂತೆ "ಈ ಎಲ್ಲ ವಿವೇಚನೆಯಿಂದ ಲಾಕುಳಶೈವರಾದ ಕಾಳಾಮುಖರು—ನೈಯಾಯಿಕರೂ, ಈಶ್ವರಕರ್ತೃತ್ವವಾದವನ್ನು ಸಮರ್ಥಿಸುವ ತಾರ್ಕಿಕರೂ, ಚತುರ್ದಶ ಪ್ರಮಾಣಗಳನ್ನು ಅಂಗೀಕರಿಸುವವರೂ, ಈಶ್ವರನ ರೂಪವು ಅನಿತ್ಯವೆಂದು ಪ್ರತಿಪಾದಿಸುವವರೂ, ಮನುಮಾರ್ಗಚರಿತರೂ ಆಗಿದ್ದುದರಿಂದ ವೇದಾ ವಿರೋಧಿಗಳೆಂದು ಕಂಡುಬರುವುದು." ಅವರು ವೇದಾವಿರೋಧಿಗಳು ಎಂದು ಹೇಳುವುದಕ್ಕಿಂತ ಡಾ|| ಎಂ. ಹೆಚ್. ಕೃಷ್ಣನ್‌ರವರು ಸಾಹಿತ್ಯ ಪರಿಷತ್ ಪತ್ರಿಕೆಯ ಸಂಪುಟ-೨೧, ಸಂಚಿಕೆ-೧೦ರಲ್ಲಿ ಹೇಳಿದಂತೆ ಕಾಳಾಮುಖರು

---

with stormy winds.. we will now trace the development of the idea of this God until he became the supreme creator, ruler and pervader of the universe, a knowledge of whom contributed to external bliss.

ವೇದಮತಾನುಯಾಯಿಗಳಾದ ಬ್ರಾಹ್ಮಣರು ಘನವಿದ್ವಾಂಸರು ಎನ್ನುವುದೇ ಸರಿ ; ಅಷ್ಟೇಕೆ ಅವರು ವೇದವೇದಾಂಗಗಳಲ್ಲಿ ಘನವಿದ್ವಾಂಸರಾಗಿದ್ದರಲ್ಲದೆ ಅವರ ಮತಗಳಂತೆ, ಆಗ ಮತ್ತಾರ ಮತಗಳಲ್ಲಿಯೂ ವೈದಿಕ ವಿದ್ಯಾಭ್ಯಾಸ ನಡೆಯುತ್ತಿದ್ದುದು ಶಾಸನಗಳಲ್ಲಿ ಉಕ್ತವಾಗಿಲ್ಲ. E. C. VII S. K. ೧೦೨ನೆಯ ಶಾಸನದಲ್ಲಿ ಇವರ ಮುಖ್ಯ ಮಠವಾದ ಕೋಡಿಮಠವು "ಸಾಂಗ ಋಗ್ ಯಜುಸ್ ಸಾಮಾಥರ್ವ ಚತುರ್ವೇದ ಸ್ವಾಧ್ಯಾಯ ಸ್ಥಾನ" ವಾಗಿದ್ದಿತೆಂದು ಹೇಳಿದೆ. ಹೀಗೆ ಪಾಶುಪತವು ಅವೈದಿಕವಾಗಿ ಪ್ರಾರಂಭ ವಾಗಿದ್ದುದು ವೈದಿಕವಾದುದು, ಅದನ್ನು ಸ್ವಮತವನ್ನಾಗಿ ಮಾಡಿಕೊಂಡ ಆರ್ಯರ ಪ್ರಭಾವದಿಂದಲೆನ್ನಬಹುದು. ಈ ಪಾಶುಪತರು ನೈಯಾಯಿಕರೂ ತಾರ್ಕಿಕರೂ, ದ್ವೈತಸಿದ್ಧಾಂತ ಪ್ರತಿಪಾದಕರೂ ಆಗಿದ್ದಾರೆ.

## ಶೈವವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದಕ ಶ್ರೀಕಂಠ ಶಿವಾಚಾರ್ಯರು

ದ್ವೈತ ಪಾಶುಪತ ಸಿದ್ಧಾಂತವು ಅವೈದಿಕವೆಂದೂ, ಶಕ್ತಿ ವಿಶಿಷ್ಟಾ ದ್ವೈತಸಿದ್ಧಾಂತವೇವೈದಿಕವೆಂದೂ, ಬ್ರಹ್ಮಸೂತ್ರಾನುಸಾರವಾಗಿರುವುದೆಂದೂ ಪ್ರತಿಪಾದಿಸಿ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆದ ವೈಶಿಷ್ಟ್ಯವು ಶ್ರೀಕಂಠ ಶಿವಾಚಾರ್ಯರಿಗೂ, ಶ್ರೀಪತಿ ಪಂಡಿತರಿಗೂ ಸೇರಿದೆ. ಗೋಳಕೀಮಠದ ಆಚಾರ್ಯನೂ ಸೋಮಶಂಭು ಪದ್ಧತಿ ಗ್ರಂಥಕರ್ತೃವೂ ಆದ ಸೋಮ ಶಂಭುವೂ ವೈದಿಕ ಪಾಶುಪತಧರ್ಮದವನೆ. ನ್ಯಾಯ ವೈಶೇಶಿಕ ಸಾಂಖ್ಯಾನು ಯಾಯಿಗಳಾದ ಹಿಂದಿನ ಪಾಶುಪತರ ಸಿದ್ಧಾಂತದ ಪ್ರಕಾರ ಈಶ್ವರನು ಸೃಷ್ಟಿಗೆ ನಿಮಿತ್ತ ಕಾರಣನು, ಮೋಕ್ಷದಲ್ಲಿ ಜೀವನು ಅನಂತಜ್ಞಾನ ಕ್ರಿಯಾ ಶಕ್ತಿಗಳನ್ನು ಪಡೆವನು ; ಆದರೆ ಶ್ರೀಕಂಠ ಶಿವಾಚಾರ್ಯ, ಶಂಭುದೇವ ಮತ್ತು ಶ್ರೀಪತಿ ಪಂಡಿತರು ಶಿವಮಹಾಪುರಾಣಾಂತರ್ಗತವಾದ ವಾಯ ವೀಯ ಸಂಹಿತಾಧಾರದಂತೆ ಶಿವಾಭಿನ್ನವಾದ ಶಕ್ತಿಯಿಂದ ಜಗತ್ತು ಹೊರ ಹೊಮ್ಮುವುದೆಂದೂ, ಮೋಕ್ಷದಲ್ಲಿ ಜೀವನು ಸೃಷ್ಟಿ ಕ್ರಿಯೆಯಲ್ಲಿ ಹೊರತು ಉಳಿದ ವಿಷಯಗಳಲ್ಲಿ ಶಿವಸಮಾನನಾಗುವನೆಂದೂ ಪ್ರತಿಪಾದಿಸುವರು. ಈ

ವಿಷಯದಲ್ಲಿ ಮೂಲಾಧಾರಗಳನ್ನು ಕೊಡದೆ, ಡಾ|| ಭಂಡಾರ್ಕರ್‌ರವರ ಅಭಿಪ್ರಾಯ[1]ವನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟರೆ ಸಾಕೆನಿಸುವುದು. ಶ್ರೀಕಂಠ ಶಿವಾಚಾರ್ಯರ ವಿಶಿಷ್ಟಾದ್ವೈತಕ್ಕೂ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತಕ್ಕೂ ಇರುವ ಮುಖ್ಯ ವ್ಯತ್ಯಾಸವನ್ನು ಇಲ್ಲಿ ಸೂಚಿಸಬೇಕು. ರಾಮಾನುಜ ಸಿದ್ಧಾಂತದಂತೆ ಸೂಕ್ಷ್ಮ ಚಿದಚಿತ್‌ಗಳು ಪರಮಾತ್ಮನ ಶರೀರವಾಗಿವೆಯೆಂದು ಶ್ರೀಕಂಠಭಾಷ್ಯದಲ್ಲಿ ಹೇಳಿದೆಯಾದರೂ, ಸೂಕ್ಷ್ಮ ಚಿದಚಿತ್‌ಗಳು ಪರಬ್ರಹ್ಮನಿಂದ 'ಅತ್ಯಂತ ವಿಲಕ್ಷಣ'ವೆಂದು ರಾಮಾನುಜ ಸಿದ್ಧಾಂತವಾದರೆ, ಚಿದಚಿತ್ ಶಕ್ತಿಯು ಶ್ರೀಕಂಠಭಾಷ್ಯದಂತೆ ಶಿವಾಭಿನ್ನವಾಗಿರುವುದು. ಆದುದರಿಂದಲೇ ಮುಮುಕ್ಷುವು—ಶಿವನೇ ನಾನು ನಾನೇ ಶಿವನು—ಎಂದು ಜಾಬಾಲಶ್ರುತಿಯ ಆಧಾರದಂತೆ ಧ್ಯಾನಿಸಬೇಕೆಂದು ಶ್ರೀಕಂಠಭಾಷ್ಯದಲ್ಲಿ ಹೇಳಿವೆಯಾದರೆ, ರಾಮಾನುಜ ಸಿದ್ಧಾಂದಂತೆ ಜೀವನು ಪರಬ್ರಹ್ಮನನ್ನು 'ಶರೀರ ಶರೀರೀ' ಭಾವದಿಂದ ಧ್ಯಾನಿಸಬೇಕು ;

---

1. The Saiva School that developed itself in later times and represented by Sambhu Deva and Srikanta Sivacharya.... and supported also by texts in Vayavia Samhita, holds that Siva possesses or develops in himself a Sakti or power consisting of the rudiments of the individual soul and material world and from this power the whole world is developed...... Srikanta Sivacharya in his comment on IV. 4-3-4 (Brahma sutra) represents the delivered soul, as similar to the supreme soul that is, as having the attributes of the latter. And under IV. 4-2 he speaks of the delivered soul as samarasa or united in blissful experience with the supreme soul. Thus Srikantha's view appears to be identical with that of the Veerasaivas. Therefore unlike the four older schools which are dualistic, These three Saiva schools hold a doctrine of qualified piritual monism.—(Vaishnavism and Savism).

ಅರ್ಥಾತ್ ಎರಡು ಸಿದ್ಧಾಂತಗಳು ವಿಶಿಷ್ಟಾದ್ವೈತವೇ ಆದರೂ ರಾಮಾನುಜ ಭಾಷ್ಯದಲ್ಲಿ ದ್ವೈತ ಭಾವನೆಯು ಹೆಚ್ಚಾದರೆ, ಶ್ರೀಕಂಠಭಾಷ್ಯದಲ್ಲಿ ಅದ್ವೈತ ಭಾವನೆಯು ಹೆಚ್ಚು. ಶ್ರೀಕಂಠಭಾಷ್ಯದ ನಿಲುವಿಗೆ ಅದರ ತಳಹದಿಯಾದ ವಾಯವೀಯ ಸಂಹಿತೆಯಲ್ಲಿಯೇ ಆಧಾರವಿದೆ. 'ಶ್ರೀಕಂಠ ಶಿವಾಚಾರ್ಯರು ವೀರಶೈವರೇ' ಎಂಬ ನನ್ನ ಪುಸ್ತಕದಲ್ಲಿ ತೋರಿಸಿರುವಂತೆ ಶ್ರೀಕಂಠಭಾಷ್ಯಕ್ಕೂ ಶ್ರೀಕರಭಾಷ್ಯಕ್ಕೂ ಗಮನಾರ್ಹವಾದ ಯಾವ ವ್ಯತ್ಯಾಸವೂ ಇಲ್ಲ. ಶ್ರೀಕಂಠ ಶಿವಾಚಾರ್ಯರು ಹೇಳುವಂತೆ, ಶಿವ ಶಕ್ತಿಯರಿಗಿರುವ ಅಭೇದವನ್ನು ಶ್ರೀಕರಭಾಷ್ಯದಲ್ಲಿ ಹೇಳಿರುವವುದಲ್ಲದೆ ಶ್ರೀಕಂಠಭಾಷ್ಯದಂತೆಯೇ ಉಪಾಸನೆಯಲ್ಲಿ ಅಹಂಗ್ರಹೋಪಾಸನೆಯನ್ನೇ ಶ್ರೀಕರಭಾಷ್ಯದಲ್ಲಿಯೂ ಹೇಳಿದೆ. ಮೇಲ್ಕಂಡ ಪುಸ್ತಕದಲ್ಲಿ ತೋರಿಸಿರುವಂತೆ ಕ್ರಿಯಾಸಾರವು ಶ್ರೀಕಂಠ ಭಾಷ್ಯದ ಕಾರಿಕೆಯೆ ಎಂಬುದು ಪ್ರೊ|| ನೀಲಕಂಠಶಾಸ್ತ್ರಿಗಳ History of South India ಗ್ರಂಥದ 357ನೆಯ ಪುಟದಲ್ಲಿನ ಹೇಳಿಕೆಯಿಂದ ಬಲಹೊಂದುತ್ತದೆ. ಒಟ್ಟಿನಲ್ಲಿ ಶ್ರೀಕಂಠಭಾಷ್ಯದ ಸಿದ್ಧಾಂತವೂ ವೀರಶೈವ ಸಿದ್ಧಾಂತವೂ ಒಂದೆಯೆಂಬ ಡಾ|| ಭಂಡಾರ್ಕರ್ ಅವರ ಅಭಿಪ್ರಾಯವು ಶ್ರೀಕಂಠ ಶ್ರೀಕರಭಾಷ್ಯಗಳ ತುಲನೆಯಿಂದ ದೃಢಪಡುತ್ತದೆ. ಜೀವರುಗಳೆಂಬ ಪಶುಗಳನ್ನು ಬಂಧಿಸಿರುವ ಪಾಶದಿಂದ ಮುಕ್ತರಾಗಲು ಶಿವಮಹಾಪುರಾಣದಲ್ಲಿ ಹೇಳಿರುವ ಆಜೀವಪರ್ಯಂತ ಆಚರಿಸಬೇಕಾದ ಪಾಶುಪತವ್ರತದಿಂದಲೇ ಸಾಧ್ಯ-ಎಂದು ಶ್ರೀಕಂಠಭಾಷ್ಯದಲ್ಲಿ ಹೇಳಿದೆ. ಆದುದರಿಂದ ಶ್ರೀಕಂಠರದೂ ಪಾಶುಪತ ಧರ್ಮವೇ. ಆ ವ್ರತದಂತೆ ಆಜೀವಪರ್ಯಂತ ಪೂಜಿಸುವವರು ಲಿಂಗವನ್ನು ಶಿರಸ್ಸಿನಲ್ಲಿ ಸದಾ ಧರಿಸಬೇಕೆಂದು ಹೇಳಿರುವ ಆಧಾರವನ್ನು ಹಿಂದೆ ಹೇಳಲಾಗಿದೆ. ಇದರಿಂದ ಶ್ರೀಕಂಠ ಶಿವಾಚಾರ್ಯರು ಹರಿಹರಾದಿಗಳಂತೆ ಲಿಂಗವನ್ನು ಸದಾ ತಲೆಯಲ್ಲಿ ಧರಿಸಿದವರೆಂಬುದು ಸಿದ್ಧವಾಗುತ್ತದೆ. ವೇದವನ್ನು ಓದಲೂ ಕೇಳಲೂ ಉಪನಯನವಿಲ್ಲದ ಶೂದ್ರರಿಗೆ ಅಧಿಕಾರವಿಲ್ಲವೆಂದು ಶ್ರೀಕಂಠ ಶ್ರೀಕರಭಾಷ್ಯಗಳಲ್ಲಿಯೂ ಕ್ರಿಯಾಸಾರದಲ್ಲಿಯೂ ಹೇಳಿರುವುದರಿಂದ ಇವುಗಳ ಕರ್ತೃಗಳಾದ ಶ್ರೀಕಂಠ, ಶ್ರೀಪತಿ, ನೀಲಕಂಠ ಶಿವಾಚಾರ್ಯರುಗಳು-ಹರಿಹರ, ಪದ್ಮರಸ ರಾಘವಾಂಕ ಮಲ್ಲಿಕಾರ್ಜುನ ಪಂಡಿತರಂತೆ-ಲಿಂಗದೊಡನೆ ಯಜ್ಞೋಪವೀತವನ್ನು ಧರಿಸುವ ಆರಾಧ್ಯ

ಬ್ರಾಹ್ಮಣ ಸಂಪ್ರದಾಯದವರಾಗಿದ್ದವರೇ. ಇನ್ನು ಶ್ರೀಕಂಠ ಶಿವಾಚಾರ್ಯರು, ಲಿಂಗಧಾರಣೆಯು ವೈದಿಕವೆಂದು ಏಕೆ ಸಿದ್ಧಾಂತ ಮಾಡಿಲ್ಲವೆಂದರೆ—ಬಸವೇಶ್ವರರು ಹಿಂದಿನ ಲಿಂಗಿಬ್ರಾಹ್ಮಣ ಪಾಶುಪತ ಮಾಹೇಶ್ವರ ಧರ್ಮವನ್ನು ಸಂಸ್ಕರಿಸಿ ಶೂದ್ರರನ್ನೂ ಲಿಂಗಧಾರಿಗಳನ್ನಾಗಿ ಮಾಡಿದ ಮೇಲೆ ಲಿಂಗಧಾರಣೆಯ ವೈದಿಕತೆಯ ಪ್ರಶ್ನೆಯು ಎದ್ದಿತೇ ಹೊರತು ಆ ಮೊದಲೇ ಅಲ್ಲ. ಲಿಂಗಯಜ್ಞೋಪವೀತಧಾರಿಗಳಾದ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಗ್ರಂಥಗಳಲ್ಲಿ ಲಿಂಗಧಾರಣೆಯ ವಿಷಯವು ಬಂದೇ ಇಲ್ಲ; ಆದಮಾತ್ರಕ್ಕೆ ಅವರು ಲಿಂಗಯಜ್ಞೋಪವೀತಧಾರಿಗಳಲ್ಲವೆನ್ನಲಾಗುವುದಿಲ್ಲವಷ್ಟೆ.

## ಅದ್ವೈತ ಮತಸ್ಥಾಪಕರಾದ ಗೋಳಕೀ ಮತದ ಗುರುಗಳ ಸಂಪ್ರದಾಯ

ಪಾಶುಪತರಲ್ಲಿ ದ್ವೈತಿಗಳೂ, ವಿಶಿಷ್ಟಾದ್ವೈತಿಗಳೂ ಇದ್ದಂತೆಯೇ ಅದ್ವೈತಿಗಳಿದ್ದುದೂ ಶಾಸನೋಕ್ತ ವಿಷಯವಾಗಿದೆ. ಪಾಶುಪತ ಗುರುಗಳ ಮುಖ್ಯಸ್ಥಾನವಾದ ಬಳ್ಳಿಗಾವಿಯ "ಗುಣಗಳ್ಳದೇವರು" E. C. VII. S K. ೧೫೫ರಲ್ಲಿ "ಸತ್ಯಜ್ಞಾನಾನಂದ ಜ್ಯೋತಿಸ್ಸ್ವರೂಪರ್, ಅಧ್ವಯ ಮಹಿಮೋದ್ಧಾಮಮ್, ಅದ್ವೈತ ಧನಂ" ಎಂದು ಮೊದಲಾಗಿ ಹೊಗಳಲ್ಪಟ್ಟಿದ್ದಾರೆ. ಹೀಗೆ ಮಾರ್ಪಾಟಾದ ದ್ವೈತ, ಅದ್ವೈತ, ವಿಶಿಷ್ಟಾದ್ವೈತಮತಾನುಯಾಯಿ ಪಾಶುಪತ ಗುರುಗಳ ಮತವನ್ನು ಲಕ್ಷಿಸದೆ, ಪಾಶುಪತವೆಂದರೆ ಯಾವುದೋ ಕಾಲದ ಪಾಶುಪತ ಧರ್ಮವನ್ನು ಗ್ರಂಥಗಳಲ್ಲಿ ಉಲ್ಲೇಖಿಸಿರುವುದಕ್ಕೆ ಕಾರಣವೇನೆಂದರೆ, ಮಾರ್ಪಾಟಾದ ಧರ್ಮವು-ಹಿಂದಿನ ಧರ್ಮವು ಗುರುತು ಸಿಗದಷ್ಟು ಮಾರ್ಪಾಟಾಗಿ, ಅದು ಪಾಶುಪತವೇ ಅಲ್ಲವೆಂಬಂತಾದುದೇ ಕಾರಣ ಆದರೆ ಎಷ್ಟೇಮಾರ್ಪಾಟಾದರೂ, ಜೀವರುಗಳೆಂಬ ಪಶುಗಳು ಅವನ್ನು ಬಂಧಿಸಿರುವ ಪಾಶದಿಂದ ಬಿಡುಗಡೆ ಹೊಂದಲು ಪಶುಪತಿಯನ್ನೇ ನಂಬಬೇಕೆಂಬ ಮೂಲ ಪಾಶುಪತಸಿದ್ಧಾಂತವು ಶ್ರೀಕಂಠಭಾಷ್ಯಾದಿಗಳಲ್ಲಿಯೂ ಕಂಡುಬರುವುದೆಂಬುದನ್ನು ಮರೆಯಲಾಗದು ಆರಾಧ್ಯ

ಬ್ರಾಹ್ಮಣ ರಚಿತ ಶ್ರೀಕರಭಾಷ್ಯದಲ್ಲಿ ಪಾಶುಪತ, ಅತ್ಯಾಶ್ರಮಿ ಮೊದಲಾದ ಪದಗಳು ವೀರಶೈವ ಪರ್ಯಾಯ ಪದಗಳೆಂದು ಉಲ್ಲೇಖವಾಗಿದೆ.

ಹಂಪೆಯ ವಿರೂಪಾಕ್ಷ ಮಠ, ಪುಷ್ಪಗಿರಿ ಮಠ ಮೊದಲಾದ ಅದ್ವೈತ ಮಠಗಳನ್ನು ಸ್ಥಾಪಿಸಿ, "ಶ್ರೀ ಚೋಳೇಶ್ವರ ಮೂಲವಕ್ಷಿತಿಪತಿ ರಾಜನ್ಯ ಚೂಡಾಮಣಿ"ಗಳನ್ನು ಶಿಷ್ಯರನ್ನಾಗಿ ಪಡೆದು "ಕಲಚುರಿಕ್ಷ್ಮಾಪಾಲ ದೀಕ್ಷಾ ಗುರು, ಗಣಪತಿಕ್ಷ್ಮಾಪಾಲದೀಕ್ಷಾಗುರು, ಗೋಲಕೀ ವಂಶಕೃತಾಭಿಷೇಕ" ಎಂದು ಮಲ್ಕಾಪುರ ಶಾಸನದಲ್ಲಿ ಉಕ್ತರಾಗಿ, ದಕ್ಷಿಣಾಪಥವಲ್ಲೆಲ್ಲಾ ವೀರಶೈವವನ್ನು ಹರಡಿದ, ಆಂಧ್ರದಲ್ಲಿ "ವಿದ್ಯಾಮಂಟಪ"ವೆಂಬ ಅನುಭವಮಂಟಪದಂತಹ ವಿದ್ಯಾಸಂಸ್ಥೆಯನ್ನು ಸ್ಥಾಪಿಸಿದ ವೀರಶೈವ ಕಾಕತೀಯರಾಜರನೇಕರಿಗೆ ಗುರುವಾದ ವಿಶ್ವೇಶ್ವರ ದೇಶಿಕರನ್ನೊಳಗೊಂಡ ಗೋಳಕೀಮಠದ ಪರಿಚಯವು ಅನಿವಾರ್ಯವಾದುದು. ಮಲ್ಕಾಪುರ ಶಾಸನದಲ್ಲಿ "ಮಹೀಸುರ" ಎಂದೂ "ವೀರಶೈವ ಶತೈರ್ವೃತಃ" ಎಂದೂ ಹೊಗಳಲ್ಪಟ್ಟಿರುವುದರಿಂದ, ಇವರು ಆಂಧ್ರದೇಶದ ಪಂಡಿತಾರಾಧ್ಯರಂತೆ ಲಿಂಗ ಯಜ್ಞೋಪವೀತಧಾರಿಗಳು. ಇಂದಿನ ವೀರಶೈವಕ್ಕೂ ಬಸವ ಪೂರ್ವ ಲಿಂಗಿಬ್ರಾಹ್ಮಣ ಸಿದ್ಧಾಂತಕ್ಕೂ ಸೇತುವೆಯಂತಿರುವ ಗೋಳಕೀ ಮಠದವರ ವಿಷಯವನ್ನು ಘನ ವಿದ್ವಾಂಸರಾದ ವೇಟೂರು ಪ್ರಭಾಕರಶಾಸ್ತ್ರಿಗಳು ತೆಲುಗು ಬಸವಪುರಾಣದ ಅವರ ಮುನ್ನುಡಿಯಲ್ಲಿ ಹೇಳಿರುವುದರ ಸ್ವಲ್ಪ ಭಾಗವನ್ನು ಕನ್ನಡಿಸುವುದರ ಮೂಲಕ ತಿಳಿಸಲಾಗುವುದು :

"ದಶಮಶತಾಬ್ದಿಗೆ ಹಿಂದೆ, ಪೂರ್ವಕಾಲದಿಂದ, ಗೌಡದೇಶದ ಗೋಳಕೀ ಮಠವೆಂಬ ಹೆಸರಿನದೊಂದು ಶಿವಾಚಾರ್ಯಮಠವು ಪ್ರಖ್ಯಾತಿ ಹೊಂದಿದ್ದಿತು. ಭಾವಶಂಭು, ಸೋಮಶಂಭು ಪ್ರಭೃತಿಗಳು ತನ್ಮಠಾಧೀಶರು; ಸೋಮಶಂಭುವು ತನ್ನ ಹೆಸರಿನ ಒಂದು ಪದ್ಧತಿಯನ್ನು ರಚಿಸಿದ್ದಾನೆ. ಶಿವಲೆಂಕ ಮಂಚಣ್ಣ ಪಂಡಿತನು ಈ ಸೋಮಶಂಭುವಿನ ಮೊಮ್ಮಗನಂತೆ. ಈ ಪರಂಪರೆಯವರು ಕಲಚುರಿ ಕ್ಷ್ಮಾಪಾಲ ದೀಕ್ಷಾ ಗುರುವುಗಳೆಂದು ಅನೇಕಕಡೆ ಪ್ರಸ್ತಾಪಿಸಲ್ಪಟ್ಟಿದ್ದಾರೆ. ಕಲಚುರಿ ಕ್ಷ್ಮಾಪಾಲ ಬಿಜ್ಜಳನಿಗೆ ಕೂಡ ಇವರುಗಳು ಗುರುಗಳಾಗಿದ್ದರೆಂದು ತಿಳಿದಿದ್ದೇನೆ. ಬಿಜ್ಜಳನ ಕಾಲದಲ್ಲಿ

ಪಶ್ಚಿಮ ಚಾಳುಕ್ಯದ ಈ ಪರಂಪರೆಯುವರು ಕೆಲವರು ಶಿವಾಚಾರ್ಯರಿದ್ದರು. (ತೆಲುಗು) ಬಸವಪುರಾಣದ ೨೩೮ನೆಯ ಪುಟದಲ್ಲಿ ಅವರ ಹೆಸರುಗಳನ್ನು ನೋಡಬಹುದು. ಆ ಮಠದ ಪರಂಪರೆಯವರು ಸಾವಿರಗಟ್ಟಲೆ ಮಹನೀಯರು ದಕ್ಷಿಣಾಪಥವನ್ನೆಲ್ಲ ವ್ಯಾಪಿಸಿದರು. ಕೇರಳಕ್ಕೆ ಕೂಡ ಹೋದರು. ಅಲ್ಲಿ ಮಠಗಳನ್ನು ಸ್ಥಾಪಿಸಿದರು. ಕೃಷ್ಣಲೀಲಾಶುಕನ ಗುರುವಾದ ಈಶಾನ ಶಿವಾಚಾರ್ಯನು ಕೇರಳದಲ್ಲಿದ್ದವನು. ಅವನು ರಾಜರಾಜ ಚೋಳನಿಗೆ ಗುರುವಾಗಿದ್ದನು. ಈಶಾನಶಿವಗುರುದೇವಪದ್ಧತಿಯೆಂಬ ಗ್ರಂಥವೊಂದನ್ನು ಈತನು ರಚಿಸಿದನು. ಕೇರಳದಲ್ಲಿದ್ದ ವಿಮಲಶಿವ, ಧರ್ಮಶಿವ ವಿಶ್ವೇಶ್ವರಶಿವಾದಿಗಳು ತೆಲುಗುದೇಶವನ್ನು ಸೇರಿದರು. ವಿಶ್ವೇಶ್ವರ ಶಿವಾಚಾರ್ಯನು ಕಾಕತೀಯ ಗಣಪತಿಯ ದೀಕ್ಷಾಗುರುತಂದೆಯಾಗಿ ಆಂಧ್ರದೇಶದ ಕೃಷ್ಣಾ ತೀರದ ಮಂದರಗ್ರಾಮದಲ್ಲಿ ಒಂದು ಮಠವನ್ನು ಸ್ಥಾಪಿಸಿ ಅಲ್ಲಿ ನೆಲಸಿದನು.

"ಕಾಳೇಶ್ವರ, ಪೊನ್ನಗ್ರಾಮ, ಮುದ್ರಾಕೂಟ, ಮಾನೇಪಲ್ಲಿ, ಊಟುಪಲ್ಲಿ, ಚಂದ್ರವಲ್ಲಿ, ಕಂಬಂಪಲ್ಲಿ, ಆನಂದಪುರ, ಕೊಮ್ಮೂರು, ಶ್ರೀಶೈಲ, ವೆಲ್ಲಾಲ, ಉತ್ತರ ಸೋಮಶಿಲ ಮೊದಲಾದ ಗ್ರಾಮಗಳಲ್ಲಿ ಶಿವಾಲಯಗಳನ್ನೂ ಮಠಗಳನ್ನೂ ಈತನು ಸ್ಥಾಪಿಸಿದನು. ಇವರ ಪರಂಪರೆಯವರು ತೆಲುಗುದೇಶದ ಕೃಷ್ಣದೇವರಾಯನ ತರುವಾಯದ ಕಾಲದಲ್ಲಿ ಸಹಾ ಹಲವರು ಪ್ರಖ್ಯಾತರು ಇದ್ದರು. ಶ್ರೀನಾಥನಿಂದ ಓಡಿಸಲ್ಪಟ್ಟ ದಿಂಡಿಮನು ಈ ಪರಂಪರೆಯವರಿಗೆ ಸಂಬಂಧಪಟ್ಟವನೆ. ಅದ್ವೈತಮಠಾಚಾರ್ಯಪೀಠಗಳಾದ ವಿರೂಪಾಕ್ಷ ಪುಷ್ಪಗಿರಿ ಪೀಠಗಳು ಇವರು ಸ್ಥಾಪಿಸಿದ ಶೈವ ಮಠಗಳೆ. ವೇದ ಕಳ್ಳಿಪಲ್ಲಿಯಲ್ಲಿ ಶಿವಾಲಯವನ್ನು ಈ ಸಂಪ್ರದಾಯದವನಾದ ಪುಷ್ಪಗಿರಿ ಮಠಾಧಿಪತಿ ಸೋಮಶಿವಾಚಾರ್ಯನೇ ಕಾಕತೀಯ ರುದ್ರನ ಪಾಲನೆಯಲ್ಲಿ ಕ್ರಿ. ಶ. ೧೨೮೨ರಲ್ಲಿ ಕಟ್ಟಿಸಿದನು. ಆತನ ವಿಗ್ರಹ ಸಹಾ ಅಲ್ಲಿದೆ. ಕೃಷ್ಣದೇವರಾಯನ ಕಾಲದಲ್ಲಿದ್ದ ಮುಕ್ಕುತಿಮ್ಮಾದಿಗಳಿಗೆ ಗುರುವಾದ ಅಘೋರ ಶಿವಾಚಾರ್ಯ, ದಕ್ಷಿಣಾಮೂರ್ತಿ ಶಿವಾಚಾರ್ಯ, ಇವರು ಈ ಸಂಪ್ರದಾಯದವರೇ. ಸೂತ್ರ ಭಾಷ್ಯಕಾರ

ಶ್ರೀಕಂಠ ಶಿವಾಚಾರ್ಯನು ಸಹಾ ಈ ಪರಂಪರೆಯವನೆಂದು ತಿಳಿದಿದ್ದೇನೆ. ಆಂಧ್ರಾರಾಧ್ಯ ಸಂಪ್ರದಾಯವು ಪೂರ್ವಕಾಲದಲ್ಲಿ ಈ ಶಿವಾಚಾರ್ಯ ಪರಂಪರೆಯವರ ಸಂಪ್ರದಾಯವೆಂದೇ ತಿಳಿದಿದ್ದೇನೆ ಅನೇಕ ವಿದಧಲ್ಲಿ ನೋಡಿದರೂ ಆಂಧ್ರಾರಾಧ್ಯ ಸಂಪ್ರದಾಯದಲ್ಲಿ ಕಂಡುಬರುವ ಲಿಂಗ ಧಾರಣೆ ಕರಪೀಠಾರ್ಚನೆ ಷಟ್‌ಸ್ಥಲವಿವೇಕ ಮೊದಲಾದ ವೀರಶೈವರ ಸಂಪ್ರದಾಯವು ಕಲಸಿಕೊಂಡಿರುವುದರಿಂದ ಇವರು ವೀರಶೈವರೋ ಎಂದು ಸಂಶಯ ಬರುವುದು."

## ಆಂಧ್ರದ ಆರಾಧ್ಯಬ್ರಾಹ್ಮಣರು

ಮೇಲೆ ಕಂಡ ವಿದ್ವಾಂಸರ ಅಭಿಪ್ರಾಯದಲ್ಲಿರುವ ಸಂಶಯಕ್ಕೆ ಕಾರಣವಿಲ್ಲ. ಆಂಧ್ರ ಆರಾಧ್ಯಸಂಪ್ರದಾಯದಲ್ಲಿ ಹುಟ್ಟಿ ಬಸವೇಶ್ವರರು ಅದನ್ನೇ ಸಂಸ್ಕರಿಸಿ, ಇಂದಿನ ವೀರಶೈವವನ್ನಾಗಿ ಮಾಡಿದರು. ಯಜ್ಞ ಯಾಗಾದಿವೈದಿಕಕರ್ಮತ್ಯಾಗ, ವರ್ಣಾಶ್ರಮತಾರತಮ್ಯ ಮತ್ತು ನಿಷೇಧ, ಅನ್ಯದೇವತಾರಾಧನನಿಷೇಧ—ಮೊದಲಾದ ಬದಲಾವಣೆಗಳನ್ನು ಬಸವೇಶ್ವರರು ಮಾಡಿದರು, ಕ್ಯಾಥೊಲಿಕ್ ಕ್ರಿಶ್ಚಿಯನ್ನರಲ್ಲಿದ್ದ ಕೆಲವು ದೋಷಗಳನ್ನು ಲೂಥರನು ತೆಗೆದುಹಾಕಿ ಪ್ರಾಟೆಸ್ಟೆಂಟ್ ಕ್ರಿಶ್ಚಿಯನ್ನರೆಂದು ಅವನು ಸಂಸ್ಕರಿಸಿದ ಪಂಗಡಕ್ಕೆ ಹೆಸರಿಟ್ಟ ಮಾತ್ರಕ್ಕೇ ಪ್ರಾಟೆಸ್ಟೆಂಟರು ಹೇಗೋ ಹಾಗೆಯೇ ಕ್ಯಾಥೊಲಿಕರೂ ಕ್ರಿಶ್ಚಿಯನ್ನರು ತಾನೇ. ಗೋಳಕೀ ಮಠದ ವಿಷಯವನ್ನು ಹೇಳುವ ಮಲ್ಕಾಪುರ ಶಾಸನವನ್ನು ಕುರಿತು ಕಪಟರಾಳ ಕೃಷ್ಣರಾಯರು ಅವರ ಪೂರ್ವೋಕ್ತ ಗ್ರಂಥದಲ್ಲಿ ಹೇಳಿರುವ ಮಾತುಗಳಿವು, ಈ ವಿಷಯದ ಮೇಲೆ ಬೆಳಕನ್ನು ಬೀರುತ್ತವೆ—"ಈ ಶಾಸನದಲ್ಲಿ ಶುದ್ಧ ಶೈವ ಸಂಪ್ರದಾಯದ ಶಿವಯೋಗಿಗಳಿಗೆ ವೀರಶೈವಾ ಚಾರ್ಯರು ಸ್ಥಾನಪತಿ ತಪೋಧನರೆನ್ನಲಾಗಿದೆ. ಶಾಸನಗಳಲ್ಲೂ, ದೇವಸ್ಥಾನದ ಅಧಿಪತಿಗಳಾಗಿದ್ದು, ಯತಿಗಳಾಗಿದ್ದರೆಂಬ ವರ್ಣನೆ ಬರುವುದು, ನಿಜಗುಣ ಶಿವಯೋಗಿಯು, ಹರಿಹರ ರಾಘವಾಂಕರು ಬ್ರಾಹ್ಮಣರಾಗಿದ್ದು ಈ ಶುದ್ಧಶೈವ ಸಂಪ್ರದಾಯದವರಾಗಿದ್ದರೆಂದು ತೋರುವುದು. ಆಂಧ್ರದೇಶ ದಲ್ಲಿ ಶುದ್ಧಶೈವ ಸಂಪ್ರದಾಯದ ಬ್ರಾಹ್ಮಣ ವೀರಶೈವರ ಸಂಸ್ಥೆ ಇದ್ದುದು

ಈ ಶಾಸನದಿಂದ ವ್ಯಕ್ತವಾಗುತ್ತದೆ. ಈಗಲೂ ಆಂಧ್ರದಲ್ಲಿ ಈ ಸಂಪ್ರದಾಯದ ಶೈವ ಬ್ರಾಹ್ಮಣರು ಇರುವರು."

ಮೇಲೆ ಕಂಡಂತೆ ವೀರಶೈವರೆಂದು ಶಾಸನದಲ್ಲಿ ಕರೆದಿರುವ ಶೈವ ಬ್ರಾಹ್ಮಣರನ್ನು ಈಗ ಆರಾಧ್ಯಬ್ರಾಹ್ಮಣರು ಎನ್ನುವರು. ಇವರು ಕಪಟರಾಳ ಕೃಷ್ಣರಾಯರೂ ವೇಟೂರು ಪ್ರಭಾಕರ ಶಾಸ್ತ್ರಿಗಳೂ ಹೇಳುವಂತೆ ಗೋಲಕೀಮಠದ ಸಂಪ್ರದಾಯದವರಾದ ವೀರಶೈವಬ್ರಾಹ್ಮಣರು. ಬಸವಪುರಾಣದಲ್ಲಿ ಬರೆದ ಸೋಮನಾಥನಂತೆ ಇವರಲ್ಲಿ ಕೆಲವರು ಬಸವೇಶ್ವರನ ಸಂಸ್ಕರಣವನ್ನು ಒಪ್ಪಿದರು ; ಮತ್ತೆ ಕೆಲವರು ಮಲ್ಲಿಕಾರ್ಜುನ ಪಂಡಿತಾರಾಧ್ಯನಂತೆ ಬಸವೇಶ್ವರನ ಭಕ್ತಿಪಂಥವನ್ನು ಮೆಚ್ಚಿಕೊಂಡರೂ ಬ್ರಾಹ್ಮಣ್ಯವನ್ನು ಬಿಡಲು ಒಪ್ಪಲಿಲ್ಲ ; ಮತ್ತೆ ಕೆಲವರು ಬಸವಾನುಯಾಯಿಗಳಾದರೂ ಜನಿವಾರವನ್ನು ಕಿತ್ತಿಸೆಯುವುದರ ಅವಶ್ಯಕತೆಯನ್ನು ಕಾಣಲಿಲ್ಲ ; ಉದಾಹರಣೆಗಾಗಿ ಪದ್ಮರಾಜಪುರಾಣದಲ್ಲಿ ಹೇಳಿದಂತೆ "ವರಯಜ್ಞಸೂತ್ರಮಂ ಶಕ್ತಿ ತ್ರಯೋರು ಗುಣಯುತ ಸೂತ್ರದೊಡನೆ ಕೂಡಿ" ಶಿವಪೂಜೆಯನ್ನು ಮಾಡುತ್ತಿದ್ದ ಪದ್ಮರಸನು ಕುಷ್ಟರೋಗಿಯೂ ಅಂತ್ಯಜನೂ ಆದ ಶಿವಭಕ್ತನನ್ನು ಮನೆಗೆ ಕರತಂದು ಪೂಜಿಸಿ ಸಹಭೋಜನವನ್ನು ಮಾಡಿದನು ; "ಉದ್ಧತ ಕುಲಜರಿವರಧಮ ಕುಲಜರಿವರೆಂಬ ಬುದ್ಧಿಯುಂಬಿಡು" ಎಂದು ರಾಜನಿಗೆ ತಿಳಿಯ ಹೇಳಿ ಅಪಿವಾಯುಶ್ಚಾಂ... ಶಿವೇತಿ" ಎಂದು ಮೊದಲಾಗುವ ಜಾಬಾಲ ಶ್ರುತಿಯ ಆಧಾರದಿಂದ ರಾಜನ ಆಕ್ಷೇಪಣೆಗೆ ಉತ್ತರವಿತ್ತನು. ಹೀಗೆ ಬಸವೇಶ್ವರರ ಸುಧಾರಣೆಗಳನ್ನು ಒಪ್ಪಿಯೋ ಒಪ್ಪದೆಯೋ ಅರ್ಧ ಒಪ್ಪಿಯೋ ಇರುವ ಲಿಂಗಧಾರಿಗಳಿಂದ, ಲಿಂಗಧಾರೀ ಧರ್ಮವು ಕಲ್ಯಾಣದ ಕ್ರಾಂತಿಯಾದ ಮೇಲೆ, ಕರ್ನಾಟಕದಲ್ಲಿ ಒಂದು ಶತಮಾನದವರೆಗೆ ತಲೆಯೆತ್ತದೆ ಹೋದರೂ ವೀರಶೈವ ಕಾಕತೀಯ ಆಶ್ರಯದಲ್ಲಿ ಆಂಧ್ರದಲ್ಲಿ ಅದು ತಲೆಯೆತ್ತಿಕೊಂಡು ಮುಂದುವರೆಯಿತು.

## ಪಾಶುಪತದ ವಿವಿಧ ಶಾಖೆಗಳು

ಅವೈದಿಕವೆಂದು ನಿಂದಿಸಲ್ಪಡುತ್ತಿದ್ದ ಪಾಶುಪತಮತದ ಪ್ರಕಾರ

ಈಶ್ವರನು ಸೃಷ್ಟಿಗೆ ನಿಮಿತ್ತಕಾರಣನು ; ದುಃಖಾಂತವೇ ಮೋಕ್ಷವು; ಇವರು ದ್ವೈತಿಗಳು. ಲಕುಳೀಶನ ಅವತಾರವಾದ ಮೇಲೆ ಪಶುಪತಿಮತವನ್ನು ವೈದಿಕವನ್ನಾಗಿ ಮಾರ್ಪಡಿಸುವ ಪ್ರಯತ್ನವಾದಂತೆ ಕಾಣುತ್ತದೆ. ಲಾಕುಳಾಗಮವು ಉಪಲಬ್ಧವಿಲ್ಲವಾಗಿ ಲಕುಳೀಶನ ಮತ್ತು ಅವನೀಚಿನ ಪರಂಪರೆಯ ಯೋಗೇಶ್ವರರನ್ನು ಹೇಳುವ ಲಿಂಗಪುರಾಣವೂ ಶಿವಪುರಾಣಾಂತರ್ಗತ ವಾಯುವೀಯಸಂಹಿತೆಯೂ ಲಾಕುಳಪಾಶುಪತದ ಆಧಾರಗ್ರಂಥಗಳಾಗಿ ತಿಳಿಯಲ್ಪಟ್ಟಿವೆ. ಲಾಕುಳಪಾಶುಪತರಲ್ಲಿ ಕಾಳಾಮುಖದೀಕ್ಷೆಯನ್ನು ಪಡೆಯುವವರು ಕಾಳಾಮುಖರು ; ಇದನ್ನೊಪ್ಪದವರು ಶುದ್ಧಶೈವರು. ಅತಿಮಾರ್ಗಿಗಳಾದ ಶಾಕ್ತರೇ ಕಾಪಾಲಿಕರು. ಹೆಸರಿನ ಸಾದೃಶ್ಯದಿಂದ ಕಾಳಾಮುಖರನ್ನು ಕಾಪಾಲಿಕರೆಂದು ಕೆಲವರು ಭ್ರಮಿಸಿರುವರು, ಇದು ತಪ್ಪು. ಕಾಳಾಮುಖರೂ ವೈದಿಕಮಾರ್ಗಾನುಯಾಯಿಗಳಾಗಿಯೂ ತಪಸ್ವಿಗಳಾಗಿಯೂ ಇದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಹಿಂದಿನಿಂದ ಬಂದ ಪಾಶುಪತ ಮತವೂ ಇದರಲ್ಲಿ ಒಡೆದ ಶೈವಕಾಳಾಮುಖ ಕಾಪಾಲಿಕ ಶಾಖೆಗಳೂ ಜೀವರುಗಳೆಂಬ ಪಶುಗಳನ್ನು ಬಂಧಿಸುವ ಮಲತ್ರಯಪಾಶಗಳಿಂದ ಬಿಡುಗಡೆಯನ್ನು ಪಶುಪತಿಯ ಕರುಣೆಯಿಂದ ಹೊಂದುವುದರಿಂದ ಮೋಕ್ಷವಾಗುವುದೆಂದು ನಂಬುವರು. ಕಾಳಾಮುಖರು ಬಹುಮಟ್ಟಿಗೆ ನ್ಯಾಯವೈಶೇಶಿಕಾನುಯಾಯಿಗಳಾದ ದ್ವೈತಿಗಳು. ಲಾಕುಳರಲ್ಲಿ ಶುದ್ಧಶೈವರ ಮುಖ್ಯ ಆಧಾರವಾದ ಸೂತಸಂಹಿತೆಯಲ್ಲಿ ಕಾಳಾಮುಖದೀಕ್ಷೆಯನ್ನು ಪಡೆದವರನ್ನು ಪಾಷಂಡಿಗಳು ಎನ್ನಲಾಗಿದೆ. ಇವರ ಮತ್ತೊಂದು ಆಧಾರವಾದ ವಾಯುವೀಯಸಂಹಿತೆಯೂ, ಅದರ ಆಧಾರದ ಮೇಲೆ ರಚಿತವಾಗಿರುವ ಶ್ರೀಕಂಠರಭಾಷ್ಯವೂ ವಿಶಿಷ್ಟಾದ್ವೈತಪ್ರತಿಪಾದಕವೆ. ಶ್ರೀಕಂಠ ಶಿವಾಚಾರ್ಯರು ಶಿವಮಹಾಪುರಾಣದಲ್ಲಿ ಹೇಳಿರುವ ಪಾಶುಪತವ್ರತವೇ ಮೋಕ್ಷಕಾರಿ ಎಂದು ಶ್ರೀಕಂಠಭಾಷ್ಯದಲ್ಲಿ ಹೇಳಿ, ಅದರ ಶ್ಲೋಕವನ್ನು ಉಲ್ಲೇಖಿಸಿದ್ದಾರೆ. ಅದ್ವೈತಸಿದ್ಧಾಂತಕ್ಕೆ ಮುಖ್ಯ ಆಧಾರವೆಂದು ನಂಬಲ್ಪಟ್ಟಿರುವ ಸೂತಸಂಹಿತೆಯೂ ವಿಶಿಷ್ಟಾದ್ವೈತ ಪ್ರತಿಪಾದಕವೆ ?—ಎಂಬುದು ವಿಚಾರಾರ್ಹವಾಗಿದೆ. ಅದರ ಎರಡನೆಯ ಅಧ್ಯಾಯದ ೧೧ನೆಯ ಮಂತ್ರದಲ್ಲಿ "ಭಗ

13 ]

ವಾನ್ ರುದ್ರಃ ಪೂರ್ಣರೂಪಂ ಸಮಾವಿಶತ್" ಎಂದು ಹೇಳಿದೆ. ಇದರ ತಾತ್ಪರ್ಯದೀಪಿಕೆಯಲ್ಲಿ ಮೇಲೆ ಕಂಡ ಮಾಧವಾಚಾರ್ಯರು: "ಶಿವ ಸ್ವರೂಪಪ್ರಾಪ್ತ್ಯುಪಾಯಮಾಹ" ಎಂದು ಹೇಳಿದ್ದಾರೆ. "ಪಾಶುಪತಲು ವಿಶಿಷ್ಟಾದ್ವೈತಸಿದ್ಧಾಂತಮುವಾರು ಮಲ್ಲಿಕಾರ್ಜುನ ಪಂಡಿತಾರಾಧ್ಯಲುವಾರಿ ಶಿವತತ್ತ್ವಸಾರಮೀವಿಷಯಮುಲೋ ಸ್ಪಷ್ಟಮುಗಾ ದೆಲುಪುಚುನ್ನಾದಿ"— ಎಂದು ವೇಟೂರು ಪ್ರಭಾಕರಶಾಸ್ತ್ರಿಗಳು ಹೇಳಿದ್ದಾರೆ. ಶ್ರೀಕರಭಾಷ್ಯದಲ್ಲಿ (೧-೩-೨) ನಿರತಿಶಯಾನಂದ ಸ್ವರೂಪಾ ತತ್ಸಮಾನ ಗುಣಸಾರಾ ಕೈವಲ್ಯ ಲಕ್ಷ್ಮೀಪ್ರಾಪ್ತಿರೇವ ಮುಕ್ತಿಃ" ಎಂದು ಹೇಳಿರುವುದರಿಂದಲೂ, ಶ್ರೀಕಂಠಭಾಷ್ಯದಲ್ಲಿ "ನಿಖಿಲಜ್ಞಾನಾನಂದ ಸ್ವರೂಪಾ ತತ್ಸಮಾನ ಗುಣ ಸಾರಾ ಕೈವಲ್ಯಲಕ್ಷ್ಮೀಃ ಪ್ರಯೋಜನಂ ಚ ಭವತಿ" ಎಂದು ಹೇಳಿರುವುದ ರಿಂದಲೂ ಕ್ರಿಯಾಸಾರದಲ್ಲಿ "ಸಾರೂಪ್ಯ ರೂಪಿಣೀಂಮುಕ್ತಿಂ ಸಂಪ್ರಾಪ್ಯ ಪರದುರ್ಲಭಾಂ" ಎಂದು ಹೇಳಿರುವುದರಿಂದಲೂ, ವೀರಶೈವಾಚಾರ್ಯರೆಂದು ಕರೆಯಲ್ಪಡುತ್ತಿದ್ದ ಶುದ್ಧಶೈವಾಮ್ನಾಯದ ಬ್ರಾಹ್ಮಣರೂ ಅವರ ಸಂಪ್ರ ದಾಯದವರಾದ ಇಂದಿನ ಆರಾಧ್ಯಬ್ರಾಹ್ಮಣರೂ ಶೈವವಿಶಿಷ್ಟಾದ್ವೈತ ಸಂಪ್ರದಾಯದವರೆಂಬುದು ಸ್ಪಷ್ಟ. ಇವರಲ್ಲಿ ಅದ್ವೈತಿಗಳೂ ಇದ್ದುದಕ್ಕೆ ಶಾಸನಾಧಾರವನ್ನು ಹಿಂದೆ ಕೊಟ್ಟಿದೆ ಈ ಮತದಲ್ಲಿ ಹುಟ್ಟಿದ ಬಸವೇಶ್ವರರು ಈ ಮತವನ್ನು ಸಂಸ್ಕರಿಸಿದಾಗ ಲಿಂಗವರ್ಣಾಶ್ರಮಗಳ ತಾರತಮ್ಯಗಳನ್ನು ತೆಗೆದುಹಾಕಿದರಲ್ಲದೆ ಶಿವಾದ್ವೈತವನ್ನೇ ಸಂಸ್ಕರಿಸಲ್ಪಟ್ಟ ಧರ್ಮದ ಸಿದ್ಧಾಂತ ವನ್ನಾಗಿ ಆರಿಸಿಕೊಂಡರು. ವಚನವಾಙ್ಮಯದಲ್ಲಿಯೂ, ಸಿದ್ಧಾಂತಶಿಖಾ ಮಣಿಯಲ್ಲಿಯೂ ಶಿವಾದ್ವೈತವೇ ಪ್ರತಿಪಾದಿತವಾಗಿದೆ. "ಶ್ರುಗಸ್ಯ" ಎಂದು ಮೊದಲಾಗುವ ಸೂತ್ರವಿಚಾರವಾಗಿ ಶ್ರೀಕಂಠಭಾಷ್ಯದಲ್ಲಿ 'ನಾಸ್ತಿ ಶೂದ್ರಾಣಾಂ ಬ್ರಹ್ಮವಿದ್ಯಾಯಾಮಧಿಕಾರಃ' ಎಂದೂ, ಶ್ರೀಕರಭಾಷ್ಯ ದಲ್ಲಿ "ನ ಶೂದ್ರಸ್ಯ ಬ್ರಹ್ಮ ವಿದ್ಯಾಧಿಕಾರಃ" ಎಂದೂ. ಕ್ರಿಯಾಸಾರದಲ್ಲಿ "ಶೂದ್ರಾದೀನಾಂ ನಾಧಿಕಾರ ಇತಿ ಸಮ್ಯಕ್ ಸುನಿಶ್ಚಿತಃ" ಎಂದೂ ಹೇಳಿರುವುದಲ್ಲದೆ ಶ್ರೀಕಂಠ ಶ್ರೀಕರ ಭಾಷ್ಯಗಳು ಶಾಂಕರಭಾಷ್ಯದಂತೆಯೇ ಶೂದ್ರರು ವೇದವನ್ನು ಓದಿದರೆ ನಾಲಿಗೆಯನ್ನು ಕತ್ತರಿಸಬೇಕೆಂಬ ನಿಲುವನು ತಾಳಿವೆ. ಶ್ರೀಕರಭಾಷ್ಯದಂತೆ ಆಚಾರ್ಯರುಗಳು ಯಜ್ಞೋಪವೀತಧಾರಿ

ಗಳು. 'ಶ್ರೀಮದ್ದಂಡಶಿಖೋಪವೀತ ವಿಲಸತ್ ಕಂಥಾಜಿನಾಲಂಕೃತಃ' ಎಂದು ಹೇಳುವ ಏಕೋರಾಮರ ಸ್ತುತಿಯು ಶ್ರೀಕರಭಾಷ್ಯದಲ್ಲಿದೆ. ಪಂಚಾಚಾರ್ಯರು ಸಾಮಾನ್ಯವಾಗಿ ಪಂಚಾರಾಧ್ಯರೆಂದೇ ಸ್ವಯಂಭುವಾದಿ ಆಗಮಗಳಲ್ಲಿ ಕರೆಯಲ್ಪಟ್ಟಿದ್ದಾರೆ. ಬಸವಪೂರ್ವಲಿಂಗಿಬ್ರಾಹ್ಮಣರ ಹೆಸರಿನ ಅಂತ್ಯದಲ್ಲಿ ಆರಾಧ್ಯ ಪದವು ಸಾಮಾನ್ಯವಾಗಿದ್ದಿತು. ಬಸವೇಶ್ವರರಿಂದ ಸಂಸ್ಕರಿಸಲ್ಪಟ್ಟ ಈ ಮತದವರು ೧೪-೧೫ನೆಯ ಶತಮಾನಗಳಲ್ಲಿ ವೀರಶೈವ ಪದವನ್ನು ತಮ್ಮ ಮತದ ಹೆಸರಿನ ಪಾರಿಭಾಷಿಕಪದವನ್ನಾಗಿ ಪ್ರಚಾರಕ್ಕೆ ತಂದಾಗ, ಇವರಿಂದ ಪ್ರತ್ಯೇಕತೆಯನ್ನು ತೋರಲು ಲಿಂಗಿಬ್ರಾಹ್ಮಣರನ್ನು ಆರಾಧ್ಯಬ್ರಾಹ್ಮಣರೆಂದು ಕರೆಯುವ ರೂಢಿಯು ಬಂದಂತೆ ಕಾಣುತ್ತದೆ. ಆವರೆಗೂ ಹಿಂದಿನಿಂದ ಪ್ರಚಾರದಲ್ಲಿದ್ದ, ಶೈವ, ಮಾಹೇಶ್ವರ ಜಂಗಮಪದಗಳೇ ಉಭಯಪಂಗಡಗಳನ್ನೂ ನಿರ್ದೇಶಿಸುತ್ತಿದ್ದವು. ಶ್ರೀಶೈಲದ ಜಂಗಮ ಮಲ್ಲಿಕಾರ್ಜುನನು ಪಾಶುಪತನೆ. "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಗ್ರಂಥದಲ್ಲಿ ಪಾಶುಪತರನ್ನು ಶಿಲಾಲೇಖಗಳಲ್ಲಿ "ಮಹೇಶ್ವರರು ಮಾಹೇಶ್ವರರು ಎಂಬ ವಿಶಿಷ್ಟ ಹೆಸರಿನಿಂದ ಕರೆಯುತ್ತಿದ್ದರು" ಎಂದು ಹೇಳಿದೆ ಕಪಟರಾಳರ ಗ್ರಂಥದಲ್ಲಿ ಗಮನಿಸಿರುವ ಸೊರಬ ೩೪೮ನೆಯ ಶಾಸನದಲ್ಲಿ ಉಕ್ತವಾಗಿರುವ "ಶಿವಪಾದಶೇಖರರು ಮಹೇಶ್ವರಗಣರು ಕಾಶ್ಯಪ ಗೋತ್ರರು' ಲಿಂಗಿಪಾಶುಪತಬ್ರಾಹ್ಮಣರೆ. ಹರಿಹರ ಕವಿಯು ಬಸವರಾಜದೇವ ರಗಳೆಯಲ್ಲಿ ಬಸವೇಶ್ವರರು ಅಂತ್ಯಜ ಲಿಂಗಧಾರಿಯ ಮನೆಯೊಳುಂಡುದಕ್ಕೆ "ಹಿರಿಯ ಮಾಹೇಶ್ವರರೆಂದು ಪೊಲೆಗಲಿಸಿ"ದುದಾಗಿ ಬಿಜ್ಜಳನು ಆಕ್ಷೇಪಿಸುವಂತೆ ಹೇಳಿದೆಯೇ ಹೊರತು ವೀರಶೈವಪದವನ್ನು ಉಪಯೋಗಿಸಿಲ್ಲ. ಹರಿಹರ ರಾಘವಾಂಕ ಮೊದಲಾದ ಹದಿಮೂರನೆಯ ಶತಮಾನಗಳ ಕವಿಗಳು ಬಸವಾನುಯಾಯಿಗಳನ್ನು ವೀರಶೈವರೆಂಬ ಪದದಿಂದ ಕರೆದಿಲ್ಲ. ಅಂದು ವೀರಶೈವ ಪದಪ್ರಯೋಗವು ಅಪರೂಪವಾಗಿದ್ದಿತು. ಇನ್ನು ಬಸವಪೂರ್ವಲಿಂಗಿಗಳನ್ನು ಶೈವರೆಂದು ಕರೆದಿರುವುದು ವಚನಗಳಿಂದಲೂ ಸಿದ್ಧವಾಗುವುದು. ಇವರನ್ನೂ ಅವರನ್ನೂ ಒಂದೇ ಕಡೆ ಹೇಳುವಾಗ ಬಸವಾನುಯಾಯಿಗಳನ್ನು ವೀರಶೈವರೆಂದೂ, ಹಿಂದಿನ ಲಿಂಗಿಬ್ರಾಹ್ಮಣರನ್ನು ಶೈವರೆಂಮೂ ಕರೆದಿರುವುದು ಕಂಡುಬರುವುದು :

ಶೈವಗುರುವಿನ ಕೈಯ್ಯಲ್ಲಿ ಸಾಹಿತ್ಯವಾದ ಲಿಂಗವನು ವೀರಶೈವ ಗುರುವಿನ ಕೈಯ್ಯಲ್ಲಿ ಕೊಟ್ಟು ಮರಳಿ ಕೊಂಡಡೆ, ಆತ ಇಹಲೋಕಪೂಜ್ಯನು. ನಿಮ್ಮಾಣೆ ನಿಮ್ಮ ಪ್ರಮಥರಾಣೆ ತಪ್ಪದು ರೇಕಣ್ಣಪ್ರಿಯ ನಾಗನಾಥಾ.

ಶೈವನೇಮಸ್ತರ ಕಯ್ಯಲು ಉಪದೇಶವಾದರೆ ಏನಯ್ಯಾ ? ಅಲ್ಲಿ ಏನೂ ಊನವಿಲ್ಲ ; ಪಾರಂಪರ್ಯದಲ್ಲಿ ನಡೆದಿತ್ತಾಗಿ ನದಿಯ ಮೂಲವನು ಗುರುವಿನ ಮೂಲವನು ಅರಸುವರೆ ? ಗುರುಲಿಂಗ ಜಂಗಮ ಸಾಕ್ಷಿಯಾಗಿ ಪಟ್ಟಾಭಿಷೇಕ ಪ್ರಣವಮಂತ್ರದಿಂದ ಲಿಂಗದರ್ಶನವಾಯಿತ್ತಾಗಿ ಕಳೆಯಬಾರದು, ಬೆರಸಿ ತನ್ನೊಳಗೆ ತಾನೊಚ್ಚೊತ್ತಿ ಕರಿಯಗೊಂಡಿತ್ತಾಗಿ.... ಉಳಿಯುಮೇಶ್ವರಾ.

ಈ ವಚನಗಳಿಂದ ವ್ಯಕ್ತವಾಗುವಂತೆ ಹಿಂದಿನ ಲಿಂಗಧಾರೀಧರ್ಮವೇ ಬಸವೇಶ್ವರನಿಂದ ಸಂಸ್ಕರಿಸಲ್ಪಟ್ಟು ಮುಂದುವರೆಯಿತು ; ಸಂಸ್ಕರಿಸಲ್ಪಟ್ಟ ಧರ್ಮದವರು ಹಿಂದಿನ ಧರ್ಮವನ್ನು ಅನ್ಯಧರ್ಮವೆಂದು ಭಾವಿಸಿರಲಿಲ್ಲ. ಕಲ್ಯಾಣದ ಕ್ರಾಂತಿಯಾದಮೇಲಂತು ೧೪-೧೫ನೆಯ ಶತಮಾನದಲ್ಲಿ ಪ್ರೌಢದೇವರಾಯನ ಕಾಲದ ಹಿಂದುಮುಂದೆ ಮತ್ತೆ ಬಸವಧರ್ಮದ ಉತ್ಕರ್ಷವಾಗುವವರೆಗೆ ಬಸವೇಶ್ವರರ ಸುಧಾರಣೆಗಳು ಪ್ರಭಾವಯುತವಾಗಿರಲಿಲ್ಲ. ಆ ಮಧ್ಯೆ ಬಸವಾನುಯಾಯಿಗಳೂ ಶೈವ, ಜಂಗಮ, ಮಾಹೇಶ್ವರ–ಎಂಬ ಹೆಸರುಗಳಿಂದಲೇ ಕರೆಯಲ್ಪಡುತ್ತಿದ್ದರು.

## ಹರಿಹರ ರಾಘವಾಂಕ ಸಿದ್ಧರಾಮರು ವೀರಶೈವರಲ್ಲವೆ ?

ಕ್ವಚಿತ್ತಾಗಿ ಆಗಮಗಳಲ್ಲಿ ಕಾಣುವ ವೀರಶೈವ ಪದವನ್ನು ಸಂಸ್ಕರಿಸಲ್ಪಟ್ಟ ಮತಕ್ಕೆ ಪಾರಿಭಾಷಿಕ ಪದವನ್ನಾಗಿ ಮಾರ್ಪಡಿಸಿದವರು ಚೆನ್ನಬಸವೇಶ್ವರರು. ಆ ಮೊದಲು ಈ ಪದವು ಬಸವೇಶ್ವರ ವಚನಗಳಲ್ಲಾಗಲೀ ಹಿಂದಿನ ಶಾಸನಗಳಲ್ಲಾಗಲೀ ಉಪಯೋಗಿಸಲ್ಪಟ್ಟಿಲ್ಲ. ರಾಘವಾಂಕ ಚರಿತ್ರೆ ಹರಿಹರನ ಬಸವರಾಜದೇವ ರಗಳೆ, ಸಿದ್ಧರಾಮ ಚರಿತ್ರೆ ಮೊದಲಾದ ಗ್ರಂಥಗಳಲ್ಲಿಯೂ ಹಿಂದಿನಿಂದ ರೂಢಿಯಲ್ಲಿದ್ದ ಜಂಗಮ, ಮಾಹೇಶ್ವರ, ಶೈವ ಪದಗಳನ್ನು ಸಮಾನಾರ್ಥದಲ್ಲಿ ಉಪಯೋಗಿಸಿರುವರೇ ಹೊರತು ವೀರಶೈವ ಪದವನ್ನಲ್ಲ ಆದುದರಿಂದ ಹರಿಹರ ರಾಘವಾಂಕ ಸಿದ್ಧರಾಮರು ವೀರಶೈವರೇ ಅಥವಾ ಶೈವರೇ ಎಂಬ ಪ್ರಶ್ನೆಗಳು ಬೃಹದಾಕಾರವಾಗಿ ಎದ್ದಿವೆ.

ಹರಿಹರ ರಾಘವಾಂಕ ಪದ್ಮರಸರು ಲಿಂಗಯಜ್ಞೋಪವೀತಧಾರಿಗಳೆಂದು ಹಿಂದೆ ತೋರಿಸಲಾಗಿದೆ. ರಾಘವಾಂಕನ ಸಿದ್ಧರಾಮ ಚರಿತ್ರೆಯಲ್ಲಿ ಹೇಳಿದಂತೆ ಸಿದ್ಧರಾಮನು "ಬಡವ ಮುಡಗಿದ ಕಡವರದ ತೆರದ ಮುಕುಟದ ಮರೆಯ ಲಿಂಗಮಂ" ಅಲ್ಲಮುನಿಗೆ ಉತ್ತಮಾಂಗದ ಮಧ್ಯದ ವಸ್ತ್ರಮಂ ಓಸರಿಸಿ ತೋರಿಸುತ್ತಾನೆ. ಅದುದರಿಂದ ಇವರೆಲ್ಲರೂ ಲಿಂಗಧಾರಿಗಳೆಂಬುದು ಸ್ಪಷ್ಟ. ಶಿವನಿಂದ ಸಿದ್ಧರಾಮನಿಗೆ ಲಾಕುಳವು ದೊರೆಯುತ್ತದೆ. ಇವರೆಲ್ಲರೂ ಲಿಂಗಿಬ್ರಾಹ್ಮಣರು ಅರ್ಥಾತ್ ಶುದ್ಧಶೈವಾಮ್ನಾಯದವರು. 'ಕರ್ಮಲತೆಯಂತಿರ್ದ ಜನ್ನಿವಾರಮಂ ಓತನಗಂಟಲಂಬಿಗಿವಂತಿರ್ದವೌಂಜಿಯಂಪರಿದುಬಿಸುಟು' ಎನ್ನಲು ಹೇಸದ ಹರಿಹರನೂ, ಅಳಿಯ ರಾಘವಾಂಕನೂ ಬಸವಾನುಯಾಯಿಗಳಾದವರೇ. ಸಿದ್ಧರಾಮನನ್ನು ಶೂನ್ಯಸಿಂಹಾಸನದ ಜಗದ್ಗುರುವಾಗಿ ವೀರಶೈವರು ಇಂದೂ ಪೂಜಿಸುವುದರಿಂದಲೂ ಅವನು ವಚನಕಾರನಾದುದರಿಂದಲೂ ಅವನೂ ಬಸವಾನುಯಾಯಿಯಾದವನೇ. ಎಂದು ಯಾರಿಂದ ಆತನು ವೀರಶೈವ ದೀಕ್ಷೆಯನ್ನು ಪಡೆದನು ಎಂಬುದನ್ನು ತಿಳಿಯದೆ ಅವನು ವೀರಶೈವ ದೀಕ್ಷೆ ಪಡೆದುದನ್ನು ಒಬ್ಬರು ಒಂದು ರೀತಿ ಇನ್ನೊಬ್ಬರು ಇನ್ನೊಂದು ರೀತಿ ಹೇಳಿರುವರಷ್ಟೆ. ಹರಿಹರನ್ನು ಬಸವೇಶ್ವರರನ್ನೂ ವೀರಶೈವ ಎಂದು ಕರೆದಿಲ್ಲ. ಆದರೆ ಅವರು ವೀರಶೈವರಲ್ಲವೆ ?

## ವೀರಶೈವರಿಗೂ ಪಾಶುಪತರಿಗೂ ಇರುವ ಸಂಬಂಧ

ವೀರಶೈವರಿಗೂ ಪಾಶುಪತರಿಗೂ ಇರುವ ಸಂಬಂಧವು ಅಸ್ಪಷ್ಟವೆಂದು ಮೈಸೂರು ಗೆಜೆಟಿಯರಿನಲ್ಲಿ ಹೇಳಿದೆ ಕಪಟರಾಳ ಕೃಷ್ಣರಾಯರು ಪೂರ್ವೋಕ್ತ ಗ್ರಂಥದಲ್ಲಿ ಹೇಳಿದಂತೆ–'ಈಗಿನ ಜಂಗಮರು ಮಾಹೇಶ್ವರರು ; ಆ ಮೊದಲಿಗರಂತೆ ಅಹುದು. ಕೇದಾರ ಶ್ರೀಶೈಲ ಮುಂತಾದ ಶಿವಾಲಯಗಳು ಈಗಿನ ಜಂಗಮರ ವಶದಲ್ಲಿವೆ ಕಾಳಾಮುಖರೂ ಇದನ್ನು ಪೂಜ್ಯ ಸ್ಥಾನಗಳೆಂದು ಭಾವಿಸಿದ್ದರು. ಹೂಲಿ ಪಂಚವಣ್ಣಿಗೆ ಮುಂತಾದವುಗಳು ಈಗಿನ ಜಂಗಮರ ವಶದಲ್ಲಿವೆ .... ಲಾಕುಳ ಸಿದ್ಧಾಂತವು ಈಗಿನ ಜಂಗಮರ ಪೂರ್ವಜರದು'–ಎಂಬುದನ್ನು ಒಪ್ಪಬೇಕು. ಶ್ರೀಯುತ ಕಪಟರಾಳರೇ ಹೇಳುವಂತೆ ಲಕುಳೀಶ ಪಾಶುಪತರಲ್ಲಿ ವಿಶಿಷ್ಟದೀಕ್ಷೆಯನ್ನು ಪಡೆವ

ವರು ಕಾಳಾಮುಖರು. ಅನೇಕ ಶಾಸನಗಳಿಂದ ತಿಳಿದುಬರುವಂತೆ ಪಾಶುಪತ ಮಾಹೇಶ್ವರ ಗುರುಗಳು ವೇದವೇದಾಂಗಾದಿಗಳಲ್ಲಿ ಪರಿಣತರಾಗಿ ಅವುಗಳ ವಿದ್ಯಾಭ್ಯಾಸವನ್ನು ಮಾಡಿಸುತ್ತಲಿದ್ದುದನ್ನೂ ಶ್ರೀಯುತರು ಬಲ್ಲರಾದರೂ ಇವರು ಬ್ರಾಹ್ಮಣರಲ್ಲವೆಂದಿರುವುದು ಆಶ್ಚರ್ಯವೇ ಸರಿ. ಯಾವ ಶಾಸನ ದಲ್ಲೂ ಈ ಲಾಕುಳ ಪಾಶುಪತರಿಗೆ ಬ್ರಾಹ್ಮಣ ಗೋತ್ರಸೂತ್ರಗಳನ್ನು ಹೇಳಿಲ್ಲವೆಂಬುದೇ ಕಾರಣವೆಂದು ಅವರು ಹೇಳಿರುವುದರಿಂದ ಶಾಸನಾಧಾರ ದಿಂದಲೇ ಅವರಿಗೆ ಉತ್ತರಿಸಬೇಕಾಗುವುದು. ಫ್ಲೀಟರು ಸಂಪಾದಿಸಿರುವ ಮನಗೋಳಿ ಶಾಸನದಲ್ಲಿ (V, EP. Ind No 3 pp 10-11) "ಭುಜಂಗಾವಳೀ ಕುಲ ತಿಲಕ ಕಾಳಾಮುಖನೈಷ್ಠಿಕ ಪರಮ ತಪೋನಿಷ್ಠ ಬ್ರಾಹ್ಮ್ಯಕುಳ ಬಾಳಬ್ರಹ್ಮಚಾರಿ ಶ್ರೀ ಸದ್ಯೋಜಾತ ಪಂಡಿತರ ಕಾಲಂಕರ್ಚಿ" ದಾನ ಮಾಡಿದುದನ್ನು ಹೇಳಲಾಗಿದೆ. ಲಾಕುಳ ಪಾಶುಪತರೆಲ್ಲರೂ ಬ್ರಾಹ್ಮಣರು. 'ಕಾಳಾಮುಖಃ ಶ್ರುತಿಮುಖ್ಯಾಃ' ಎಂಬ (Tondigonda plates No. 25 of E. I. xxiii,) ಶಾಸ ನಾಧಾರವುಂಟು. ಲಾಕುಳಪಾಶುಪತರಲ್ಲಿ ಕಾಳಾಮುಖ ದೀಕ್ಷೆಯನ್ನು ಒಪ್ಪದವರು ಶುದ್ಧಶೈವ ಲಿಂಗಿಬ್ರಾಹ್ಮಣರು. ಇವರಲ್ಲಿ ಹುಟ್ಟಿದ ಬಸವೇಶ್ವರರು ಸಂಸ್ಕರಿಸಿದ ಮತವೇ ವೀರಶೈವ ಮತ.

## ಬಸವೇಶ್ವರರ ಕಾಲದ ಲಿಂಗಿಬ್ರಾಹ್ಮಣ ಮಾಹೇಶ್ವರರು
## ಅವರಲ್ಲಿ ಬಸವೇಶ್ವರರ ಜನನ

ಅರ್ಜುನವಾಡ ಶಿಲಾಶಾಸನದಲ್ಲಿ 'ಬಾಗೆವಾಡಿ ಪುರವರಾಧೀಶ್ವರ ಮಾದಿರಾಜನ ತನೂಜಂ ಬಸವರಾಜನ ಮಹಿಮೆ' ಎಂದು ಹೇಳಿರುವುದ ರಿಂದ ಬಸವೇಶ್ವರರು ಬಾಗೆವಾಡಿಯಲ್ಲಿ ಮಾದಿರಾಜ ಮಾದಳಾಂಬೆಯ ಮಗ ನಾಗಿ ಹುಟ್ಟಿದರೆಂಬುದರಲ್ಲಿ ಸಂದೇಹಕ್ಕೆ ಕಾರಣವಿಲ್ಲ. ಅವರ ಹೆಸರಿನಲ್ಲೂ ಅವರ ತಂದೆಯ ಹೆಸರಿನಲ್ಲೂ ರಾಜನೆಂಬ ಪದವಿರುವುದರಿಂದಲೂ, ತಂದೆ ಪುರವರಾಧೀಶ್ವರನೆಂದು ಹೇಳಿರುವುದರಿಂದಲೂ ಅವರು ಪ್ರತಿಷ್ಠಿತಕುಟುಂಬದಲ್ಲಿ ಜನಿಸಿದರು ಎಂಬುದೂ ಸ್ಪಷ್ಟ. ಕ್ರಿ.ಶ.೧೧೪೪ರಷ್ಟು ಹಿಂದಿನ ಹೊನ್ನವಾಡಿನ ಶಾಸನದಲ್ಲಿ (No. 83 Bombay Karanatak Inscription

Vol. I part I) 'ಬಾಗೆವಾಡಿಯ ಮಹಾಜನರಯ್ನೂರವರು ಮೀಥರ್ಮವಂ ಪಾಲಿಸುವರ್' ಎಂದೂ 'ಪಾಶುಪತ ಯೋಗಾಚಾರ್ಯರ್ ಜ್ಞಾನರಾಸಿ ವ್ಯಾಖ್ಯಾನ ದೇವನ....ಭೋಗಕ್ಕಂ ಚಂದ್ರಯ್ಯಭಟ್ಟರ್ ಪಡೆದುಕುಡೆ' ಎಂದೂ ಹೇಳಿರುವುದರಿಂದ, ಬಾಗೆವಾಡಿಯು ಪಾಶುಪತ ಮಾಹೇಶ್ವರರ ಸ್ವಸ್ಥಾನಗಳಲ್ಲಿ ಒಂದಾಗಿತ್ತೆಂಬುದೂ ಸ್ಪಷ್ಟ. ಇದರ ಸಮೀಪ ಗ್ರಾಮವಾದ ಇಂಗಳವಾಡಿಯು ಪಾಶುಪತ ಮಹೇಶ್ವರರ ಅಗ್ರಹಾರವಾಗಿತ್ತೆಂದು ಅಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಬಸವೇಶ್ವರರು ಬೆಳೆದ ವಾತಾವರಣವಿದು. ಬಸವೇಶ್ವರರ ತಂದೆ 'ಕಮ್ಮೆಕುಲದಿಂದ ಮೆರೆದಿರ್ದ'ನೆಂದು ಹರಿಹರನು ಹೇಳಿದ್ದಾನೆ. ಹರಿಹರ ರಾಘವಾಂಕ ಪದ್ಮರಸರ ಕಾಲವನ್ನು ಕರ್ಣಾಟಕ ಕವಿಚರಿತ್ರೆಕಾರರು ಸುಮಾರು ಕ್ರಿ.ಶ. ೧೧೬೫ ಎಂದು ನಿರ್ಧರಿಸಿದ್ದಾರೆ. ಬಸವೇಶ್ವರರ ಜೀವಮಾನದ ಅಂತ್ಯ ಕಾಲವಿದು. ಕವಿಚರಿತ್ರೆಯಲ್ಲಿ ಹೇಳಿದಂತೆ-"ಸಕಲೇಶ ಮಾದರಸನು... ತಂದೆಯಾದ ಮಲ್ಲಿರಸನನ್ನು ಕಾಣಲು ಅವನು 'ನೀನು ಇನ್ನೂ ಐವತ್ತು ವರ್ಷ ಭೂಲೋಕದಲ್ಲಿದ್ದು, ಕಲ್ಯಾಣದಲ್ಲಿ ಧರ್ಮಸಂಸ್ಥಾಪನಾರ್ಥವಾಗಿ ಹುಟ್ಟುವ ಬಸವನೊಡನೆ ಕಾಲವನ್ನು ಕಳೆಯಬೇಕು'—ಎಂದು ಮರಳಿ ಕಳುಹಿದನು. ಇವನ ಮಗ ಮಾಯಿದೇವನು ಅಂಬೆಯಲ್ಲಿದ್ದನು. ಇವನಿಗೆ ನರಸಿಂಹ ಬಲ್ಲಾಳನ ದಂಡನಾಯಕನಾದ ಕಮ್ಮೆಕುಲವಲ್ಲಭ ಗೌರಪನ ಅಕ್ಕ ಮಂಗಳೆಯನ್ನು ಕೊಟ್ಟು ಮದುವೆ ಮಾಡಿದ್ದರು. ಇವರ ಮಗನೇ ಕೆರೆಯ ಪದ್ಮರಸನು." ಬಸವಾನುಯಾಯಿಯಾದ ಸಕಲೇಶ ಮಾದರಸನ ಮೊಮ್ಮಗ ಕೆರೆಯ ಪದ್ಮರಸನು ಕಮ್ಮೆಜಾತಿಯವನು. ರಾಘವಾಂಕನಿಗೆ ಅವನ ಸೋದರಮಾವನಾದ ಹರಿಹರನು ದೀಕ್ಷಾಗುರುವಾದರೆ, ಪದ್ಮರಸನು ಸಮಾಧಿಯನ್ನು ಕರುಣಿಸಿದ ಮೋಕ್ಷಗುರು. ಇವರೆಲ್ಲರೂ ಸಂಬಂಧಿಗಳು; ಕಮ್ಮೆಕುಲದವರು. ಬಸವಾನುಯಾಯಿಗಳಾದರೂ ಪಂಡಿತಾರಾಧ್ಯನಂತೆ ಜನಿವಾರವನ್ನು ತ್ಯಜಿಸದೆ ಲಿಂಗಯಜ್ಞೋಪಧಾರಿಗಳಾಗಿದ್ದವರು. ರಾಘವಾಂಕಚರಿತ್ರೆಯಲ್ಲಿ ಹೇಳಿದಂತೆ—ರಾಘವಾಂಕನಿಗೆ ಜಾತಕಕರ್ಮವನ್ನು ಮಾಡಲು "ಶಿರದೊಳೆಸೆವ ಲಿಂಗದಿ ಯಜ್ಞಸೂತ್ರದಿಂ ಹರೀಶ್ವರನಲ್ಲಿಗೈತಂದನು." ಪದ್ಮರಾಜಪುರಾಣದಲ್ಲಿ ಹೇಳಿದಂತೆ ಪದ್ಮರಸನು "ವರಯಜ್ಞ

ಸೂತ್ರವಮಂ ಶಕ್ತಿಯೋರುಗುಣಯುತ ಸೂತ್ರದೊಡನೆ ಕೂಡಿ" ಶಿವಪೂಜೆ ಮಾಡಿದನು. ಆ ಪುರಾಣದ ಎರಡನೆಯ ಸಂಧಿಯಲ್ಲಿ ಪದ್ಮರಸನಿಗೆ ಜನನವಾದ ಕೂಡಲೆ ಲಿಂಗಧಾರಣೆಯಾದುದನ್ನು ಹೇಳಿದೆ. ವಿರೂಪಾಕ್ಷ ಪಂಡಿತನು ಪದ್ಮರಸನನ್ನು "ಪದ್ಮರಸನೆನಿಸುವ ಬ್ರಾಹ್ಮಣೋತ್ತಮಂ ವೀರಶೈವಾಚಾರ್ಯಂ" ಎಂದು ಕರೆದಿದ್ದಾನೆ. ಆದುದರಿಂದ ಅಂದಿನ ಕಮ್ಮೆಕುಲದ ಬ್ರಾಹ್ಮಣರು ಲಿಂಗಯಜ್ಞೋಪವೀತವನ್ನು ಧರಿಸುವ ವೀರಶೈವಬ್ರಾಹ್ಮಣರು. ಕಮ್ಮೆಕುಲದ ಬಸವಣ್ಣನವರೂ ಅವರ ಜನ್ಮದಾತರೂ ಜನ್ಮತಃ ವೀರಶೈವಬ್ರಾಹ್ಮಣರೆಂಬುದು ಸ್ಪಷ್ಟ.

## ಉಪನೀತರಾದ ಬಸವೇಶ್ವರರು ಜನ್ನಿವಾರವಮಂ ತೆಗೆದು ಬಿಸುಟುದು

ಬಸವೇಶ್ವರರ ಅನೇಕ ವಚನಗಳಿಂದ ತಿಳಿದುಬರುವಂತೆ ಅವರು ವೇದೋಪನಿಷತ್ತುಗಳಲ್ಲಿ ಪರಿಣತರಾಗಿದ್ದರು ; ಅಲ್ಲದೆ ಮೀಮಾಂಸಕನೊಬ್ಬನನ್ನು ಸೋಲಿಸಿದುದಕ್ಕೆ ಆಧಾರವುಂಟು. ಅಂದಿನ ವಾತಾವರಣದಲ್ಲಿ ಉಪನಯನವಿಲ್ಲದೆ ವೇದೋಪನಿಷತ್ತುಗಳ ಅಧ್ಯಯನ ಮಾಡಲು ಸಾಧ್ಯವಾಗುತ್ತಿರಲಿಲ್ಲ ; ಯಜ್ಞಯಾಗಗಳಲ್ಲಿ ಹಿಂಸೆಯಿಂದ ಕಣ್ಣೀರಿಡುತ್ತಿದ್ದ ಹೋತನನ್ನು ನೋಡಿ. 'ವೇದವನೋದಿದವರ ಮುಂವೆ ಅಳು ಕಂಡೆಯಾ' ಎಂದು ಕಣ್ಣೀರಿಟ್ಟು, ಯಜ್ಞಕಾರ್ಯದಲ್ಲಿ ಭಾಗವಹಿಸಲು ಅಧಿಕಾರವನ್ನು ಕೊಡುವ ಯಜ್ಞೋಪವೀತವನ್ನು ಹದಿನಾರನೆಯ ವರ್ಷದಲ್ಲಿ ಹರಿದು ಬಿಸುಟುದಕ್ಕೆ ವಚನಗಳ ಆಧಾರವುಂಟು :

"ನಾನು ಹಾರುವನೆಂದರೆ ಕೂಡಲಸಂಗಮ ನಗುವನಯ್ಯ"
"ಹಾರುವನೆಯ್ಯಾ ಶರಣಬರವ ಗುಡಿಕಟ್ಟಿ
ಕೂಡಲಸಂಗಮದೇವನುವಿಪ್ರಕರ್ಮವ ಬಿಡಿಸಿ ಅಶುದ್ಧನ ಶುದ್ಧನ
ಮಾಡಿದನಾಗಿ"
"ಕಟ್ಟಿದೆನೊರೆಯ ಬಿಟ್ಟೆ ಜನ್ನಿಗೆಯ."

## ಕೂಡಲಸಂಗಮದಲ್ಲಿ ಧ್ಯಾನಾಧ್ಯಯನ

ಬಸವೇಶ್ವರರು; ಅಕ್ಕ ನಾಗಮ್ಮ, ಅಳಿಯ ಚೆನ್ನಬಸವೇಶ್ವರರೊಡನೆ,

ಕೂಡಲಸಂಗಮದಲ್ಲಿ ಕೆಲವು ಕಾಲ ಆಧ್ಯಾತ್ಮಿಕ ವಿದ್ಯಾಭ್ಯಾಸವನ್ನು ಮಾಡುತ್ತ ಧ್ಯಾನಾಧ್ಯಯನನಿರತರಾಗಿ ಇದ್ದುದರಲ್ಲಿ ಸಂದೇಹವಿಲ್ಲ ; ಅವರ ಇಷ್ಟಲಿಂಗಗಳಿಗೆ ಸಂಗಮೇಶನ ಅಂಕಿತವನ್ನಿಟ್ಟುಕೊಂಡಿದ್ದುದೇ ಅದಕ್ಕೆ ಸಾಕ್ಷಿ. ಅಂದಿನ ವೈದಿಕಾದಿ ವಿದ್ಯಾಭ್ಯಾಸವು ದೇವಸ್ಥಾನಗಳಿಗೆ ಸೇರಿದ ಮಠಗಳ ಸ್ಥಾನಪತಿಗಳಾದ ಗುರುಗಳಿಂದ ನಡೆಸಲ್ಪಡುತ್ತಿದ್ದಿತು. ಹಿಂದೆ ಹೇಳಿದ, ಶಿರಸ್ಸಿನಲ್ಲಿ ಲಿಂಗವನ್ನು ಧರಿಸಿದ್ದ ಶ್ರೀಕಂಠಮುನೀಶ್ವರನಿದ್ದ ಕೇದಾರ ದೇವಸ್ಥಾನ ಮತ್ತು ಅದಕ್ಕೆ ಸೇರಿದ ಕೋಡಿಮಠದ ವರ್ಣನೆಯನ್ನು ಶಿಕಾರಿಪುರದ ೧೦೨ನೆಯ ಶಾಸನದಲ್ಲಿ ನೋಡಬಹುದು : "ನೈಷ್ಠಿಕ ಮುನಿಜನಾನುಷ್ಠಾನಾನುಷ್ಠಿತಸ್ಥಾನಮುಂ, ಸಾಂಗಯಜುಸ್ಸಾಮಾಥರ್ವ ಚತುರ್ವೇದಸ್ವಾಧ್ಯಾಯಸ್ಥಾನಮುಂ.... ಧರ್ಮಶಾಸ್ತ್ರ, ಸಕಳ ಕಾವ್ಯನಾಟಕ ನಾಟಕಾದಿ ವಿವಿಧ ವಿದ್ಯಾಸ್ಥಾನಮುಂ" ಆಗಿದ್ದಿತು ಆ ಮಠ. ಕೂಡಲಸಂಗಮವೂ ಇಂತಹ ವಿದ್ಯಾಕೇಂದ್ರವಾಗಿತ್ತೆಂಬುದು ಅಲ್ಲಿನ ಶಿಲಾಲೇಖನದಿಂದ ಕಂಡುಬರುವುದಾಗಿ ಕನ್ನಡ ರಿಸರ್ಚ್ ಇನ್ಸ್‌ಟಿಟ್ಯೂಟ್ ಡೈರೆಕ್ಟರ್ ಡಾ|| ಬಿ ಸಿ. ದೇಸಾಯಿಯವರು ಬಸವೇಶ್ವರ ಸ್ಮಾರಕ ಗ್ರಂಥದಲ್ಲಿ ಬರೆದಿದ್ದಾರೆ. ಕೂಡಲಸಂಗಮದ ಸ್ಥಾನಪತಿಗಳಾದ ಈಶಾನಗುರುಗಳ ಸಾನ್ನಿಧ್ಯದಲ್ಲಿ ಬಸವೇಶ್ವರರು ಹತ್ತು ಹನ್ನೆರಡು ವರ್ಷಗಳವರೆಗಾದರೂ, ಮುಂದೆ ಅವರು ಮಾಡಿದ ಧರ್ಮಸಂಸ್ಕರಣಕ್ಕೆ ತಕ್ಕ ಸಂಸ್ಕೃತಿಯನ್ನೂ, ವಿದ್ವತ್ತನ್ನೂ ಪಡೆದಿರಬೇಕು. ಬಸಣ್ಣನವರ ಉದ್ಗಾರವಿದು ಆ ಕಾಲಕ್ಕೆ ಅನ್ವಯಿಸುವುದು:

"ಹಿಂದೆ ಹನ್ನೆರಡು ವರ್ಷದಲ್ಲಿ ಚಿಂತೆಯಿಂದ ನಿಶ್ಚಿಂತವಾಯಿತು. ಕೂಡಲ ಸಂಗಮದೇವ ಕೃಪಾಮೂರ್ತಿಯಾದ ಕಾರಣ ಆನು ಬದುಕಿದೆನು."

## ಲಿಂಗಿಬ್ರಾಹ್ಮಣ ಮಾಹೇಶ್ವರಾನುಯಾಯಿ ಭಾವ ಬಿಜ್ಜಳರಾಯ

ಬಿಜ್ಜಳನು ಜೈನನೆಂಬ ಪ್ರತೀತಿಯನ್ನು ವಿದ್ವಾಂಸರು ಖಂಡಿಸಿದರೂ, ಅದು ಜನರ ಮನಸ್ಸಿನಲ್ಲಿ ಬೆಳೆದು ಉಳಿದು ನಿಂತಿದೆ. ಬಿಜ್ಜಳನು ಜೈನನಲ್ಲ ಮಾತ್ರವಲ್ಲ; ಅವನು ಲಿಂಗಿಬ್ರಾಹ್ಮಣ ಮಾಹೇಶ್ವರಾನುಯಾಯಿಯೂ,

ಬಸವೇಶ್ವರರ ಭಾವನೂ ಎಂದರೆ ಸಾಮಾನ್ಯವಾಗಿ ಆಶ್ಚರ್ಯವಾಗದಿರದು. ಬಿಜ್ಜಳನ ವಂಶದ ಮೂಲಪುರುಷರಾದ ಮಧ್ಯಭಾರತದ ಕಟಚ್ಚುರಿಗಳಲ್ಲಿ ಪ್ರಸಿದ್ಧನಾದ ಕೃಷ್ಣರಾಯನು ಅಭೋಣದ ತಾಮ್ರಶಾಸನದಂತೆ (IX Ep. Ind. 29) "ಆಜನ್ಮನ ಏವ ಪಶುಪತಿ ಸಮಾಶ್ರಯು"ನು. ಈತನ ಮಗ ಶಂಕರಗಣನೂ ಮೊಮ್ಮಗ ಬುದ್ಧರಾಜನೂ ವಡೇರಶಾಸನ (XII Ep. Ind. 34) ದಲ್ಲಿ ಹೇಳಿರುವಂತೆ "ಪರಮಮಾಹೇಶ್ವರರು". ದಾವಣಗೆರೆಯ ೪೨ನೆಯ (E.C. XI Dg. 42) ಶಾಸನದಲ್ಲಿ ಹೇಳಿದಂತೆ ಕಳಚುರಿವಂಶದ ಬಿಜ್ಜಳನ ಮೂಲಪುರುಷ ಕೃಷ್ಣನು ಬ್ರಾಹ್ಮಣ ಗರ್ಭಸಂಜಾತನು. ದೇಸಾಯಿ ಪಾಂಡುರಂಗರಾಯ ಸಂಪಾದಿತ ಶಾಸನೋಕ್ತವಾಗಿರುವಂತೆ ಬಿಜ್ಜಳನ ವಂಶವು "ಈಶ್ವರಾನ್ವಯುವೆನಿಪುದು". ಹರಸೂರು ಭೋಗೇಶ್ವರ ದೇವಾಲಯದ ಶಾಸನದಂತೆ ಬಿಜ್ಜಳನ ತಾತನ ತಂದೆಯಾದ ಕರ್ಣನ ಬಾಹುಬಲವು "ಕಂತುವೈರಿ ಸುಲಬ್ಧ"ವಾದುದು. ಇನ್ನು ಬಿಜ್ಜಳನ ಮಾತಾಮಹನಾದ ಆರನೆಯ ವಿಕ್ರಮಾದಿತ್ಯನ ತಂದೆ ಇಮ್ಮಡಿ ಸೋಮೇಶ್ವರನು ಶ್ರದ್ಧಾವಂತನಾದ ಶೈವನೆಂದು ಮೈಸೂರು ಗೆಜೆಟಿಯರಿನಲ್ಲಿ ಹೇಳಿದೆ. ಈ ಚಾಳುಕ್ಯರ ಕಾಲವು ಬೆಳಗಾವಿಯ ಪಾಶುಪತ ಗುರುಗಳ ಅತ್ಯುಚ್ಛ್ರಾಯ ಕಾಲ. ಕ್ರಿ.ಶ. ೧೧೧೩ನೆಯ ಶಾಸನದಲ್ಲಿ ಅಂದಿನ ಶ್ರೀಕಂಠಪಂಡಿತರು EC. VII SK. 99 ಶಾಸನದಲ್ಲಿ "ಈಶ್ವರ ಪಾದಾಂಬುಜಶೇಖರಂ" ಎಂದು ಹೊಗಳಲ್ಪಟ್ಟಿರುವುದರಿಂದ ಇವರು ಶಿರಸ್ಸಿನಲ್ಲಿ ಲಿಂಗವನ್ನು ಧರಿಸಿದವರು. EC. VII SK. 110 ಮತ್ತು 130 ನೆಯ ಶಾಸನಗಳಲ್ಲಿ ಭುವನೈಕಮಲ್ಲ ಚಾಳುಕ್ಯಚಕ್ರವರ್ತಿಯು "ಪನ್ನಗರಾಜ ಭೂಷಣ ಪದಾಬ್ಜ ಶೇಖರಂ" ಎಂದು ಮತ್ತೆ ಮತ್ತೆ ವರ್ಣಿಸಲ್ಪಟ್ಟಿರುವುದರಿಂದ ಈತನು ತಲೆಯಲ್ಲಿ ಲಿಂಗವನ್ನು ಧರಿಸಿದ್ದುದನ್ನು ಹೆಮ್ಮೆಯ ವಿಷಯವಾಗಿ ಭಾವಿಸಿದಂತೆ ಕಾಣುತ್ತದೆ. ಚಾಳುಕ್ಯರ ಇಮ್ಮಡಿಯ ಜಯಸಿಂಹನೂ ಆತನ ಪತ್ನಿ ಸುಗ್ಗಲೆಯೂ, ಪ್ರಸಿದ್ಧ ವಚನಕಾರನೂ, ಶಿವಶರಣನೂ ಆದ ದೇವರ ದಾಸಿಮಯ್ಯನ ಶಿಷ್ಯರು. ಇವರು ಬಸವಪೂರ್ವ ಲಿಂಗಧಾರೀ ಧರ್ಮದ ಮಾಹೇಶ್ವರಾನುಯಾಯಿಗಳಾದುದರಿಂದ ವಾದಿರುದ್ರಗಣ ಲಕುಳೀಶ ಪಂಡಿತರ ಕಾಲಂಕರ್ಚಿ ದಾನ ಮಾಡಿಸುದು ಶಿಕಾರಿಪುರದ ೧೨೬

ನೆಯ ಶಾಸನದಿಂದ ತಿಳಿದುಬರುತ್ತದೆ. ಬಿಜ್ಜಳನ ಮಾತಾಮಹ ವಿಕ್ರಮಾದಿತ್ಯನ ಇನ್ನೊಬ್ಬ ಮಗಳ ಮಗನಾದ ಪೆರ್ಮಾಡಿರಾಯನಿಗೆ "ಮಹಾಮಾಹೇಶ್ವರ" ಎಂಬ ಬಿರುದಿದ್ದಿತೆಂಬುದು, ಮಿಥಿಕ್ ಸೊಸೈಟಿ ಜರ್ನಲ್ Vol. V (1) ಪುಟ 26ರಲ್ಲಿ ಉಕ್ತವಾಗಿದೆ. ಇದೇ ಆಧಾರದಲ್ಲಿ ಕಂಡಂತೆ ಚಂದ್ರಭೂಷಣ ಪಂಡಿತರೆಂಬ ಗುರುಗಳು "ಶಿವಪಾದಾಂಬುರುಹಶೇಖರಂ" ಎಂದು ಹೊಗಳಲ್ಪಟ್ಟಿದ್ದಾರೆ. ಬಿಜ್ಜಳನ ಮಾತಮಹ ವಿಕ್ರಮಾದಿತ್ಯನ ಒಬ್ಬ ಪತ್ನಿ ಚೋಳರಾಜಕುಮಾರಿ. ಚೋಳರಾಜರು ಅತ್ಯಂತ ಶಿವಭಕ್ತರು. ರಾಜರಾಜ ಚೋಳನಿಗೆ "ಶಿವಪಾದಶೇಖರ" ಎಂಬ ಬಿರುದಿದ್ದಿತು. ಬಿಜ್ಜಳನು ತನ್ನ ಮಗನಾದ ಸೋವಿದೇವನನ್ನು "ಸೋಮನಾಥಂ ಕುಡಲ್ ಪೆತ್ತುದ" ರಿಂದ ಆ ಮಗನಿಗೆ "ಸೋಮಮಹೇಶ್ವರೇಶ್ವರಂ" ಎಂದು ಬಿರುದಿದ್ದುದೂ, ಬಿಜ್ಜಳನ ಮಗಳ ಮಗನಾದ ಬೊಪ್ಪರಸನಿಗೆ ಶಿವನ ವರದಿಂದ ಹುಟ್ಟಿದುದರಿಂದ ಸೋಮನೆಂದು ಹೆಸರಿಟ್ಟಿದುದೂ ಶಿಕಾರಿಪುರದ ೨೩೬ನೆಯ ಶಾಸನದಿಂದ ತಿಳಿದುಬರುತ್ತದೆ. ಆದುದರಿಂದ ಕಳಚೂರ್ಯ ಬಿಜ್ಜಳನ ಪೂರ್ವವಂಶದ ಮಧ್ಯಭಾರತದ ಕಟಚ್ಚುರಿಗಳೂ ಬಿಜ್ಜಳನ ಪೂರ್ವವಂಶದ ಮಧ್ಯಭಾರತದ ಕಟಚ್ಚುರಿಗಳೂ, ಬಿಜ್ಜಳನ ಮಾತಾಮಹ ಪಿತಾಮಹರ ವಂಶದವರೂ, ಬಂಧುಬಾಂಧವರೂ ಮಾಹೇಶ್ವರಾನುಯಾಯಿಗಳೆಂಬುದರಲ್ಲಿ ಸಂದೇಹವಿಲ್ಲ.

ತೆಲುಗು, ಕನ್ನಡ ಬಸವಪುರಾಣಗಳಲ್ಲಾಗಲೀ ಬಸವರಾಜದೇವ ರಗಳೆಯಲ್ಲಾಗಲೀ, ಬಸವೇಶ್ವರ ವಚನಗಳಲ್ಲಾಗಲೀ ಬಿಜ್ಜಳನನ್ನು ಜೈನನೆಂದಿಲ್ಲ. ಈಚಿನ ಚನ್ನಬಸವಪುರಾಣದಲ್ಲಿ ಒಂದು ಕಡೆ ಜಿನ ಬಿಜ್ಜಳ ಎಂದಿರುವುದಕ್ಕೆ ಪಾಠಾಂತರವಿರುವುದರಿಂದ ಅದು ಪ್ರಕ್ಷಿಪ್ತವಿರಬೇಕು. ಕಾಕತೀಯ ರಾಜ್ಯದಲ್ಲಿ ಜೈನರಿಗೂ, ವೀರಶೈವರಿಗೂ ವೈಮನಸ್ಸುಂಟಾಗಿ ಇತ್ತೀಚಿನ ಗ್ರಂಥಗಳಲ್ಲಿ ಬಿಜ್ಜಳನ ಜೈನೀಕರಣವಾಗಿರಬೇಕು. ಆಧುನಿಕ ಪಂಡಿತನಾದ ಧರಣಿಪಂಡಿತನು ಬಿಜ್ಜಳನನ್ನು 'ಜೈನವಂಶಾನ್ವಯತಿಳಕ', ಎಂದಿರುವುದು ಸರಿಯಲ್ಲವೆಂಬುದು ಮೇಲಿನ ವಿವೇಚನೆಯಿಂದ ಸ್ಪಷ್ಟ. ಜಿನಬಿಂಬವನ್ನು ಒಡೆದು ಲಿಂಗವನ್ನು ಸ್ಥಾಪಿಸಿದ ಅಬಲೂರು ಶಾಸನೋಕ್ತ ಏಕಾಂತ ರಾಮಯ್ಯನ 'ಕಾಲಂಕರ್ಚಿ' ದಾನಮಾಡಿದ ಬಿಜ್ಜಳನು ಧರಣಿಪಂಡಿತನು ಹೇಳುವಂತೆ 'ಜೈನವಾರ್ಧಿವರ್ಧನಚಂದ್ರನೂ' ಅಲ್ಲ 'ಜೈನಮಾರ್ಗಾನಂದ

ಪರ'ನೂ ಅಲ್ಲ. ಶಿಕಾರಿಪುರದ ೧೯೬ನೆಯ ಶಾಸನದಲ್ಲಿ 'ಜಿನೇಂದ್ರ ಮಹಿಮಾರ್ಚನಾ ಶಶಿವೇನಿಯೆನಿಪ್ಪ ಜಕ್ಕಲ ಮಹಾಸತಿಯನ್ನು ಹೊಗಳಿರುವಂತೆ, ಯಾವ ಶಾಸನದಲ್ಲಿಯೂ ಬಿಜ್ಜಳನು ಜೈನನೆಂಬಂತೆ ಹೊಗಳಲ್ಪಟ್ಟಿಲ್ಲ ; ಜೈನಗುರುಗಳಾರೂ ಬಿಜ್ಜಳನಿಗೆ ಗುರುಗಳಾಗಿದ್ದುದಕ್ಕೆ ಆಧಾರವಿಲ್ಲ ತದ್ವಿರುದ್ಧವಾಗಿ ತೆಲುಗು ಬಸವಪುರಾಣದ ಮುನ್ನುಡಿಯಲ್ಲಿ ವೇಟೂರು ಪ್ರಭಾಕರಶಾಸ್ತ್ರಿಗಳು ಬಿಜ್ಜಳನ ಗುರುವು ಗೋಳಕೀಮಠದವರೆಂದು ಹೇಳಿರುವುದಕ್ಕೆ ಮಲ್ಲಿಕಾಪುರ ಶಾಸನದ ಆಧಾರವಿದೆ. "ಶ್ರೀ ವಿಶ್ವೇಶ್ವರ ದೇಶಿಕಃ ಕಲಚುರಿಕ್ಷ್ಮಾಭೃತ್ಪಾಲ ದೀಕ್ಷಾಗುರುಃ" ಎಂದು ಅದರಲ್ಲಿ ಹೇಳಿರುವುದಲ್ಲದೆ ವಿಶ್ವೇಶ್ವರ ದೇಶಿಕನನ್ನು "ವೀರಶೈವಾಚಾರ್ಯ ಶತೈರ್ವೃತಃ" ಎಂದು ಹೇಳಿರುವುದರಿಂದ ಈತನು, ಹಿಂದೆ ಹೇಳಿದಂತೆ, ಲಿಂಗ ಯಜ್ಞೋಪವೀತವನ್ನು ಧರಿಸಿದ ಆರಾಧ್ಯ ಬ್ರಾಹ್ಮಣನೇ.

ಶ್ರೀಯುತ ಕಪಟರಾಳರು 'ಈ (ಮಲ್ಲಿಕಾಪುರ) ಶಾಸನದಲ್ಲಿ ಶುದ್ಧಶೈವಸಂಪ್ರದಾಯ ಶಿವಯೋಗಿಗಳಿಗೆ ವೀರಶೈವಾಚಾರ್ಯರು ... ಎನ್ನಲಾಗಿದೆ' ಎಂದಿದ್ದಾರೆ. EC. VII SK 281 ಶಾಸನದಲ್ಲಿ (ಶಿಕಾರಿಪುರ ೨೮೧) ಇಷ್ಟಲಿಂಗ ಪೂಜಕ ಮಾಧವಾಚಾರ್ಯನೂ ಅವನಿಂದ ದಾನ ಪಡೆದವರೂ 'ಶುದ್ಧಶೈವಾಮ್ನಾಯ'ದವರೆಂದು ಹೇಳಿದೆ. ಶಾಸನವೊಂದರಲ್ಲಿ (No 14 of B. K. and K. I.) ಬಿಜ್ಜಳನು 'ಗೌರೀಕಾಂತಾಮ್ನಾಯ'ದವನೆಂದು ಹೇಳಿದೆ. ಆದುದರಿಂದ ಬಿಜ್ಜಳನು ಇಷ್ಟಲಿಂಗ ಪೂಜಕ ಮಾಧವಾಚಾರ್ಯನಂತೆ ಶುದ್ಧಶೈವಾಮ್ನಾಯದವನೆ. ಕಾಕತೀಯ ಗಣಪತಿಯು ವೀರಶೈವನಾಗಿರುವಂತೆ, ಅವನ ದೀಕ್ಷಾಗುರುವೇ ಬಿಜ್ಜಳನಿಗೂ ದೀಕ್ಷಾಗುರುವಾದ್ದರಿಂದ. ಹಾಗೂ ಬ್ರಾಹ್ಮಣ ಗರ್ಭಸಂಜಾತ ಕೃಷ್ಣನ ವಂಶದವನಾದುದರಿಂದ, ಬಿಜ್ಜಳನು ಬಸವೇಶ್ವರನಂತೆ, ಲಿಂಗಿಬ್ರಾಹ್ಮಣ ಮಾಹೇಶ್ವರ ವಂಶದವನೆಂಬುದು ಸ್ಪಷ್ಟ.

## ಬಿಜ್ಜಳ ಬಸವೇಶ್ವರರ ಸಂಬಂಧ ; ಅವರ ಅಂತ್ಯ

E.C.Sk. 102 ಶಾಸನದಲ್ಲಿ ಬಿಜ್ಜಳನು 'ಶಿಷ್ಟೇಷ್ಟ ಸಂತರ್ಪಣ'ಕ್ಕೆ ದಾನಮಾಡಿದುದನ್ನು ಹೇಳಿದೆ. ಅವನ ಅಳಿಯ ಬೊಮ್ಮರಸನ ಭಾವ

ಕಸಪಯ್ಯನ ವಿಷಯದಲ್ಲಿ 'ನಿಜೇಷ್ಟ ವಿಶಿಷ್ಟ ಜನಕ್ಕೆ' ಎಂಬ ಪದಗಳಿವೆ. ಇಷ್ಟವಿಶಿಷ್ಟವೆಂದರೆ ಅರ್ಥವಾಗದು; ಇಷ್ಟಲಿಂಗವಿಶಿಷ್ಟವೆಂಬುದೇ ಅಭಿಪ್ರಾಯ. ಇಷ್ಟಲಿಂಗಕ್ಕೆ ಇಷ್ಟವೆನ್ನುತ್ತಿದ್ದರು. ಸಿಂಗಿರಾಜ ಪುರಾಣದ ಶಾಸನವೊಂದರಲ್ಲಿ 'ತೊನಿಸಿ ಸೌಗಂಧಿನಿಯುನೊತ್ತಿ ತೆಂದಿಷ್ಟವಂ ಬಸವಂಗೀಯೆ' ಎಂದಿರುವುದರಲ್ಲಿ ಇಷ್ಟವೆಂರೆ ಇಷ್ಟಲಿಂಗವೆಂಬುದು ಸ್ಪಷ್ಟ. VII E. C. Sk. 102 ನೆಯ ಶಾಸನದಲ್ಲಿ ಬಿಜ್ಜಳನ ಅಳಿಯ ಬೊಮ್ಮರಸನನ್ನು 'ಶಿಷ್ಟೇಷ್ಟನಿಕರಾಭರಣಂ' ಎಂದು ಹೊಗಳಲಾಗಿದೆ. ಇಷ್ಟಲಿಂಗವಿಶಿಷ್ಟನಾದ ಬಿಜ್ಜಳನು ಇಷ್ಟಲಿಂಗವಿಶಿಷ್ಟ ಬಂಧುಗಳಿಂದ ರಕ್ಷಿತನಾಗಿದ್ದನು.

ಬಿಜ್ಜಳನು ಚಾಣಾಕ್ಷ. ತಾನು ರಾಜ್ಯಾಪಹರಣಮಾಡುವ ಮೊದಲು ಸ್ವಧರ್ಮದವರಲ್ಲಿ ಶಕ್ತರಾದ ಕಸಪಯ್ಯ, ಬೊಮ್ಮರಸ ಮೊದಲಾದವರನ್ನು ಬಂಧುಗಳನ್ನಾಗಿ ಮಾಡಿಕೊಂಡನು. ಇವರು ರಾಜ್ಯಾಪಹರಣ ಕಾರ್ಯದಲ್ಲಿ ಸಹಾಯಕರಾದ ಹೆರಸೂರು ಶಾಸನೋಕ್ತರಾದ 'ದುರ್ಮಂತ್ರಿಕಸಪಯಾದಿಗಳ್' ಬಿಜ್ಜಳನು ಧರಣಿ ಪಂಡಿತನು ಹೇಳುವಂತೆ ಬಸವೇಶ್ವರರ ಸೋದರಿ ಪದ್ಮಾವತಿಯೆಂಬುವಳನ್ನು ಮದುವೆಯಾಗಿರಬಹುದು, ಇಲ್ಲದಿರಬಹುದು. ಆದರೆ 'ಶಿವತತ್ತ್ವಚಿಂತಾಮಣಿ'ಯಲ್ಲಿ ಹೇಳಿದಂತೆ ಸ್ವಜನರಾದ ಬಸವೇಶ್ವರರನ್ನು ಮಂತ್ರಿಯನ್ನಾಗಿ ಮಾಡಿಕೊಂಡು 'ಮಂತ್ರಿಗಂ ತವ್ಮೊಳಗೆ ಹೊಕೆ ಹುಟ್ಟಿದಂತೆ ಮಾಳ್ಪತೆರದಿ' ತನ್ನ ತಂಗಿ ನೀಲಾಂಬಿಕೆಯನ್ನುಕೊಟ್ಟು ಲಗ್ನ ಮಾಡಿದನು. ಆದರೆ ಬಸವೇಶ್ವರರಿಂದ ರಾಜ್ಯಾಪಹರಣಕ್ಕೆ ಸಹಾಯ ದೊರೆಯದಿದ್ದುದು ಆಶ್ಚರ್ಯವಲ್ಲ. ಆದುದರಿಂದ ಬಸವೇಶ್ವರರಿಗೆ ತನಗೆ ಅಪಾಯವಾಗದ ಅರ್ಥಮಂತ್ರಿ ಪದವಿಯನ್ನು ಕೊಟ್ಟನು. ಕಸಪಯಾದಿಗಳು ಸೈನ್ಯಾಧಿಕಾರಿಗಳಾಗಿ ಬನವಾಸೆ ನಾಡು ಮೊದಲಾದುವುಗಳನ್ನು ಆಳುತ್ತಿದ್ದು ಶಾಸನೋಕ್ತರಾಗಿದ್ದಾರೆ. ಅರ್ಥಮಂತ್ರಿಯು ಶಾಸನೋಕ್ತನಾಗಲಿಲ್ಲ. ಭಿನ್ನಾಭಿಪ್ರಾಯಗಳು ಬಂದಮೇಲೂ ತಂಗಿಯ ಗಂಡನಾದ ಬಸವೇಶ್ವರರನ್ನು ಬಿಜ್ಜಳನು ಶಿಕ್ಷಿಸುವುದಾಗಲಿಲ್ಲ. ಆದರೆ ಬಸವಾನುಯಾಯಿಗಳಾದ ಹರಳಯ್ಯ ಮಧುವಯ್ಯಗಳಿಗೆ ಕ್ರೂರವಾದ ಶಿಕ್ಷೆಯಾಯಿತು. ಇಂತಹ ಅನ್ಯಾಯವನ್ನು ತಪ್ಪಿಸಲಾಗದಿರಲು ಶರಣ

ನಿಯಮದಂತೆ ಬಸವೇಶ್ವರರು ಕಲ್ಯಾಣವನ್ನು ಬಿಟ್ಟು ಸಂಗಮಕ್ಕೆ ಹೋದರು. ತನ್ನ ಹೆಂಡತಿಯ ಅಣ್ಣನಾದ ಬಿಜ್ಜಳನ ಹಾನಿಯನ್ನು ಬಸವೇಶ್ವರರು ಬಯಸ ಲಿಲ್ಲ. ಆದರೆ ಗೌರಾಂಕನ ನವನಾಥ ಚರಿತ್ರೆಯಲ್ಲಿ ಹೇಳಿದಂತೆ ನಾಥ ಸಿದ್ಧರು ಅಂದಿನ ಗೊಂದಲ ಸಮಯದಲ್ಲಿ ಬಿಜ್ಜಳನನ್ನು ಕೊಂದು ಅವನು ನಾಥಸಿದ್ಧನೊಬ್ಬನನ್ನು ಹಿಂಸಿಸಿದುದಕ್ಕಾಗಿ ಸೇಡು ತೀರಿಸಿಕೊಂಡರು. ಬಿಜ್ಜಳನ ರಾಜ್ಯಾಪಹರಣದಿಂದ ಉದ್ರೇಕಗೊಂಡಿದ್ದ ಚಾಳುಕ್ಯ ರಾಜ್ಯಾನು ಯಾಯಿಗಳ ಸಹಾಯವೂ ಅವರಿಗಿದ್ದಿತು. ನವನಾಥಸಿದ್ಧ ಚರಿತ್ರೆಯಲ್ಲಿ ಗೌರಾಂಕನು ಹೇಳಿರುವುದನ್ನು ವಿಮರ್ಶಕರು ಗಮನಿಸಿಲ್ಲ. ಈ ವಿಷಯದಲ್ಲಿ ಈ ಕೃತ್ಯ ನಡೆದು ಬಹು ಸ್ವಲ್ಪ ಕಾಲದಲ್ಲಿ ಬದುಕಿದ್ದ ರಾಘವಾಂಕನು, ಸಿದ್ಧ ರಾಮಚರಿತ್ರೆಯಲ್ಲಿ 'ಭೂಪ ಬಿಜ್ಜಳನಳಿದ ವೀರಜಗದೇವನಿಂ ಸಿದ್ಧ ಸಂಕೇತ ದಂತೆ' ಎಂದು ಹೇಳಿರುವುದು, ಸಮೀಪಕಾಲದವನೇ ಆದ ಗೌರಾಂಕನ ಹೇಳಿಕೆಯನ್ನು ಸಮರ್ಥಿಸುವುದೆಂಬುದು ವಿಮರ್ಶಕರ ಗಮನಕ್ಕೆ ಬಂದಿಲ್ಲ. ಬಿಜ್ಜಳನು ಶಿಕ್ಷಿಸಿದ್ದ ಶರಣರು ಬಿಜ್ಜಳನ ಮರಣದಿಂದ ಹರ್ಷಿಸಿದರು. ಅವರೇ ಕೊಲ್ಲಿಸಿದರೆಂಬ ದೂರು ಬಂದು ಬಿಜ್ಜಳನ ಮಗನ ಆಕ್ರೋಶಕ್ಕೆ ಒಳಗಾದರು. ಇದನ್ನು ಕೇಳಿದ ಬಸವೇಶ್ವರರಿಗೆ ಎದೆಯೊಡೆದಿರಬೇಕು. ಅಸ್ಪೃಶ್ಯೋದ್ಧಾರ ಕ್ಕಾಗಿ ಜೀವಿತಕಾಲವನ್ನೇ ಕಳೆದ ಮಹಾತ್ಮಾಗಾಂಧಿಯವರಂತೆ ಅಸ್ಪೃಶ್ಯೋದ್ಧಾರಕ್ಕಾಗಿಯೇ ಬಸವೇಶ್ವರರೂ ಆತ್ಮಾರ್ಪಣ ಮಾಡಬೇಕಾ ಯಿತು. ಆದರೆ ಅವರ ಕಾರ್ಯವು ಅಮರವಾಗಿ ನಿಂತಿದೆ.

ಮಹಾತ್ಮ ಗಾಂಧೀಜಿಯವರು ೧೯೨೪ರ ಬೆಳಗಾವಿ ಕಾಂಗ್ರೆಸ್ಸಿನ ೩೯ ನೆಯ ಅಧಿವೇಶನದಲ್ಲಿ ಹೀಗೆ ಉದ್ಗಾರ ತೆಗೆದಿದ್ದಾರೆ : 'ಹಿಂದಿನ ಕಾಲದಲ್ಲಿ ಎಂಟುನೂರು ವರ್ಷಗಳ ಆಚೆ ಬಸವೇಶ್ವರರು ಯಾವ ತತ್ತ್ವ ಆಚರಿಸಿ, ಉಪದೇಶಮಾಡಿದರೋ, ಅಷ್ಟೆಲ್ಲ ತತ್ತ್ವ ನನಗೆ ಆಚರಿಸಲಿಕ್ಕೆ ಆಗುವುದಿಲ್ಲ. ಆದರಲ್ಲಿ ಕೆಲವು ತತ್ತ್ವಗಳನ್ನು ನಾನು ಆಚರಿಸುತ್ತಲಿದ್ದೇನೆ. ಸಾಧಕಸ್ಥಿತಿ ಯಲ್ಲಿದ್ದೇನೆ ; ಸಿದ್ಧನಲ್ಲ. ಆದರೆ ಬಸವಣ್ಣನವರು ಹೇಳಿದ ತತ್ತ್ವಗಳನ್ನೆಲ್ಲ ಆಚರಣೆಯಲ್ಲಿ ತಂದಿದ್ದರು. ಅದರಲ್ಲಿ ಅಸ್ಪೃಶ್ಯತಾ ನಿವಾರಣೆ, ಕಾಯಕ ತತ್ತ್ವ ಬಹುಮುಖ್ಯವಾದುವು. ಯಾವುದೇ ಪ್ರಕಾರದ ಜಾತಿಭೇದ ಅವರಲ್ಲಿ ಕಂಡುಬರುವುದಿಲ್ಲ. ಈ ಕಾಲದಲ್ಲಿ ಅವರು ಇರುತ್ತಿದ್ದರೆ ಜಗತ್ತಿಗೇ ಪೂಜ್ಯ

ವ್ಯಕ್ತಿಯಾಗಿ ಪರಿಣಮಿಸುತ್ತಿದ್ದರು. ಆ ಧರ್ಮಾನುಯಾಯಿಗಳಾದ ನೀವು ಅವರು ಉಪದೇಶಿಸಿದ ತತ್ತ್ವಗಳನ್ನು ಆಚರಣೆಯಲ್ಲಿ ತಂದರೆ ಭಾರತ ಭೂಮಿಯನ್ನಷ್ಟೇ ಏಕೆ ಜಗತ್ತನ್ನೇ ಉದ್ಧಾರಮಾಡಬಲ್ಲಿರಿ.' ಮಹಾತ್ಮಾಜಿಯವರ ಅಭಿಪ್ರಾಯವೇ ಹೀಗಿತ್ತೆಂದಮೇಲೆ, ಸುಪ್ರಸಿದ್ಧ ಕವಿಯತ್ರಿಯರಾದ ಸರೋಜಿನೀದೇವಿಯವರು ಬಸವಣ್ಣನವರು ಉದ್ಧರಿಸಿದ 'ವೀರಶೈವ ಧರ್ಮವು ಸರ್ವಸೌಹಾರ್ದ್ರಭಾವಾದಿ ಉದಾತ್ತತತ್ತ್ವಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಇದು ವಿಶ್ವಧರ್ಮವಾಗಲು ತಕ್ಕುದು'-ಎಂದು ಘೋಷಿಸಿದುದರಲ್ಲಿ ಆಶ್ಚರ್ಯವೇನಿದೆ ?

ಕಲ್ಯಾಣದ ಕ್ರಾಂತಿಯಾದ ಮೇಲೆ ಬಸವಾನುಯಾಯಿಗಳು ಅಲ್ಲಿಂದ ಸುರಕ್ಷಿತ ಸ್ಥಳಗಳಿಗೆ ಹೋಗಬೇಕಾಯಿತು. ಚೆನ್ನಬಸವೇಶ್ವರರು ಬಹುಮಂದಿ ಶರಣರನ್ನು ಉಳುವಿಗೆ ಕರೆದೊಯ್ದು ಆ ದುರ್ಗಮಾರಣ್ಯ ಮಧ್ಯದಲ್ಲಿ ಕಾಪಾಡಿದರು. ರೇವಣಸಿದ್ಧೇಶ್ವರರ ಪುತ್ರ ರುದ್ರಮುನಿಯ ನೇತೃತ್ವದಲ್ಲಿ ಕೆಲವರು ಶ್ರೀಶೈಲವನ್ನೂ ಕೆಲವರು ರಂಭಾಪುರಿ ಪೀಠವಿರುವ ಮಲೆನಾಡನ್ನೂ ಆಶ್ರಯಿಸಿದಂತೆ ತೋರುತ್ತದೆ. ಆಂಧ್ರದಲ್ಲಿ ಕಾಕತೀಯರಾಜರ ಆಶ್ರಯದಲ್ಲಿ ಲಿಂಗಧಾರೀಧರ್ಮವು ಗೋಳಕೀಮಠದವರ ನೇತೃತ್ವದಲ್ಲಿ ಹದಿನಾಲ್ಕನೆಯ ಶತಮಾನದವರೆಗೂ ನಿರಾತಂಕವಾಗಿ ಅಭಿವೃದ್ಧಿ ಹೊಂದಿತು ; ಆಗ ಬಸವಪುರಾಣಾದಿ ಗ್ರಂಥಗಳು ಬರೆಯಲ್ಪಟ್ಟವು. ಆ ಕಾಲದ ಒಂದು ವಿಶೇಷ ವಿಷಯವು ಇಲ್ಲಿ ಉಲ್ಲೇಖಾರ್ಹವಾಗಿದೆ. ಕಾಕತೀಯ ಗಣಪತಿ ಚಕ್ರವರ್ತಿಗೆ ಗಂಡುಮಕ್ಕಳಿರಲಿಲ್ಲ. ಆತನ ಮಗಳಾದ ರುದ್ರಮದೇವಿಯನ್ನು ಚಕ್ರವರ್ತಿನಿಯಾಗಿ ಮಾಡಲು ಸಂಪ್ರದಾಯ ಶರಣರು ಒಪ್ಪಲಿಲ್ಲ. ಆಗ ರಾಜಗುರುವಾದ ವಿಶ್ವೇಶ್ವರದೇಶಿಕನು ಸ್ತ್ರೀ-ಪುರುಷರಿಗೆ ಸಮಾನ ಹಕ್ಕಿರುವುದೆಂಬ ಬಸವೇಶ್ವರಸಿದ್ಧಾಂತವನ್ನು ಎತ್ತಿಹಿಡಿದನು. ರುದ್ರಮದೇವಿಯು ಪ್ರತಾಪರುದ್ರ ಚಕ್ರವರ್ತಿಯೆಂಬ ಹೆಸರಿನಿಂದ ಪಟ್ಟವೇರಿದಳು. ಯುದ್ಧಗಳಲ್ಲಿ ಪುರುಷವೇಷದಿಂದ ಭಾಗವಹಿಸಿ ಜಯಶೀಲಳಾಗುತ್ತಿದ್ದಳು. ಆ ಕಾಲವು ವೀರಶೈವದ ಸುವರ್ಣಯುಗವೆನ್ನಬಹುದು. ಅರ್ಧನಾರೀಶ್ವರನಾಗಿರುವ ಶಂಕರನು ರುದ್ರಮದೇವಿಯಲ್ಲಿ ಪೂರ್ಣನಾರೀಶ್ವರನಾದನೆಂದು ಕವಿ ವಿದ್ಯಾನಾಥನು ಹೇಳಿದ್ದಾನೆ. ಆಕೆಯ ನಂತರ ಆಳಿದ ಆಕೆಯ ಮೊಮ್ಮಗ

ಪ್ರತಾಪರುದ್ರನ ಕಾಲದಲ್ಲಿಯೂ ರಾಜ್ಯಾಡಳಿತವು ವೈಭವಯುತವಾಗಿದ್ದಿತು.

## ಲಿಂಗಿಬ್ರಾಹ್ಮಣಮಾಹೇಶ್ವರರಿಂದ ವಿಜಯನಗರದ ಹಿಂದೂ ಸಾಮ್ರಾಜ್ಯ ಸ್ಥಾಪನೆ

ದೇವಗಿರಿಯು ಮಹಮದೀಯರ ವಶವಾದ ಮೇಲೆ, ಅವರ ಕಣ್ಣು ಕಾಕತೀಯರ ಆಂಧ್ರರಾಜ್ಯದ ಮೇಲೆ ಬಿದ್ದಿತು. ಅತಿ ಪರಾಕ್ರಮಿಯಾದ ಪ್ರತಾಪರುದ್ರನು ಅವರನ್ನು ಮತ್ತೆ ಮತ್ತೆ ಸೋಲಿಸಿ ಹಿಮ್ಮೆಟ್ಟಿಸಿದರೂ ದೇವಗಿರಿಯ ರಾಜನು ಮಹಮದೀಯರಿಗೆ ಸಹಾಯಮಾಡಿದುದರಿಂದಲೂ, ಸ್ವಜನ ದ್ರೋಹದಿಂದಲೂ ಪ್ರತಾಪರುದ್ರನ ಪತನನಾಯಿತು. ಅವನ ಕೈಕೆಳಗಿನ ಅಧಿಕಾರಿಗಳಾದ ಹರಿಹರ ಬುಕ್ಕರು ಅವರ ಸ್ವದೇಶವಾದ ಕರ್ನಾಟಕಕ್ಕೆ ಹೋಗಿ ಬಲ್ಲಾಳಚಕ್ರವರ್ತಿಯು ವಿಜಯನಗರ ಹಿಂದೂ ಸಾಮ್ರಾಜ್ಯವನ್ನು ಕಟ್ಟಲು ನೆರವಾದರು ಆಂಧ್ರದಲ್ಲಿ ಗೋಳಕೀಮಠದ ಪಾಶುಪತ ಮಾಹೇಶ್ವರರು ಮಹಮದೀಯರ ಉಪಟಳಕ್ಕೆ ಹೆದರಿ ಕರ್ನಾಟಕ ದೇಶವನ್ನು ಆಶ್ರಯಿಸಿದರು. ವೇಟೂರು ಪ್ರಭಾಕರಶಾಸ್ತ್ರಿಗಳು ಹೇಳುವಂತೆ ವಿರೂಪಾಕ್ಷಿಮಠವನ್ನು ಗೋಳಕೀಮಠದವರು ಸ್ಥಾಪಿಸಿದ್ದರಷ್ಟೆ; ಶೈವ ದೇವಸ್ಥಾನಗಳಲ್ಲಿ ಮಠಗಳಿದ್ದು ಆ ಮಠದ ಗುರುಗಳು ಸ್ಥಾನಪತಿಗಳಾಗಿ ಪೂಜಾದಿಗಳ ವ್ಯವಸ್ಥಾಪಕರಾಗುತ್ತಿದ್ದರು. ಈ ಕಾಲಕ್ಕೆ ಎರಡು ಶತಮಾನಗಳ ಹಿಂದೆಯೇ, ರಾಘವಾಂಕಚರಿತ್ರೆಯಲ್ಲಿ ಉಲ್ಲೇಖಿಸಿರುವಂತೆ 'ಮಿಸುಪ ಜಡೆಮುಡಿಯಿಂದೆ, ಷಟ್ಕುಂಡಲದಿ ಶಿರದೊಳೆಸೆವ ಲಿಂಗದಿಂ ಯಜ್ಞಸೂತ್ರದಿಂ ರಂಜಿಸುತಿರಪನಯ ಶಿವನೆಂಬಂತೆ' ಇದ್ದ ಹರಿಹರನು ಅಲ್ಲಿ ಸ್ಥಾನಪತಿಯಾಗಿದ್ದನು. ಅವನ ಹಿಂದೆ ಹರಿಹರನೇ ಹೇಳುವಂತೆ 'ಪ್ರತ್ಯಕ್ಷ ಪಂಚಾನನಂ ಸಂತಂ ಹಂಪೆಯ ಮಾಯಿಪೇವಂ' ಆ ಹಿಂದೆ ಆತನ ಗುರು 'ಪ್ರಜ್ವಲಮೂರ್ತಿ ಕೀರ್ತಿಭರಿತಂ ಶ್ರೀ ಮಾದಿರಾಜಾಹ್ವಯಂ' ಆತನಿಗೆ ಮೊದಲು ಆತನ ಗುರು 'ಆ ಶೈವಾಗಮಸಿದ್ಧರಪ್ಪ ಶ್ರೀ ಶಂಕರಾಚಾರ್ಯರು' ಗುರುಗಳಾಗಿದ್ದರು ಹೀಗೆ ಹಂಪೆಯ ಮಠವು ಲಿಂಗಿ ಬ್ರಾಹ್ಮಣ ಪಾಶುಪತಗುರುಗಳ ಕೇಂದ್ರಸ್ಥಾನವಾಗಿದ್ದು, ಸುರಕ್ಷಿತವಾಗಿದ್ದ

ರಾಜ್ಯದಲ್ಲಿದ್ದಿತು. ಮೇಲಾಗಿ ಹರಿಹರರು ಆಂಧ್ರದಿಂದಲೇ ಬಂದವರಾಗಿ ದ್ದರು ಆದುದರಿಂದ ಆಂಧ್ರಪ್ರದೇಶದ ಪಾಶುಪತ ಮಾಹೇಶ್ವರರು ಹಂಪೆಗೆ ಬಂದು ರಕ್ಷಣೆ ಪಡೆದುದು ಸ್ವಾಭಾವಿಕವೆ. ಈ ಪಾಶುಪತ ಮಾಹೇಶ್ವರರಲ್ಲಿ ಹರಿಹರ ಬುಕ್ಕರ ವಂಶದ ರಾಜಗುರುಗಳಾದ ಕಾಶೀವಿಲಾಸ ಕ್ರಿಯಾಶಕ್ತಿಗಳು ಅಗ್ರಗಣ್ಯರು. ಇವರು ವಿಜಯನಗರರಾಜ್ಯ ಸಂಸ್ಥಾಪನೆಗೆ ನೆರವಾದುದು ಚಾರಿತ್ರಿಕ ವಿಷಯವಾಗಿದೆ. ಧರ್ಮಸಂಸ್ಥಾಪನೆಯಲ್ಲೂ, ರಾಜ್ಯಸಂಸ್ಥಾಪನೆ ಯಲ್ಲೂ ಇವರ ಪ್ರಮುಖ ಶಿಷ್ಯ ಆಂಗೀರಸಗೋತ್ರದ ಮಾಧವಮಂತ್ರಿಯ ಸೇವೆಯು ಅಪರಿಮಿತವಾಗಿದ್ದಿತು. ಇವನು ಮಹಮದೀಯರನ್ನು ಓಡಿಸಿ ವಿಜಯನಗರ ರಾಜ್ಯಸ್ಥಾಪನೆ ಮಾಡಲು ಶ್ರಮಿಸಿ ಹಿಂದೂ ಧರ್ಮೋದ್ಧಾರ ವನ್ನು ಮಾಡಿದನಾಗಿ ಹೊನ್ನಾಳಿಯ ೪೪ನೆಯ ಶಾಸನದಲ್ಲಿ 'ತುರುಕದಳ ವಿಭಾಡ, ದುಷ್ಟನಿಗ್ರಹ, ಶಿಷ್ಟಪರಿಪಾಲಕ ದೇವ ಬ್ರಾಹ್ಮಣಧರ್ಮೋ ದ್ಧಾರಕ, ಶರಣಾಗತವಜ್ರಪಂಜರ, ವೀರವಸಂತ ಮಾಧವರಾಯ' ಎಂದು ಹೊಗಳಲ್ಪಟ್ಟಿದ್ದಾನೆ. ಈತನಿಗೆ 'ಉಪನಿಷನ್ಮಾರ್ಗ ಪ್ರತಿಷ್ಠಾ ಗುರು' ಎಂಬ ಬಿರುದಿದ್ದಿತು. ಈತನ ವಿಷಯದಲ್ಲಿ EC. VII Sk. 281ನೆಯ ಶಾಸನದಲ್ಲಿ 'ಯಃ ಸಾಕ್ಷಾದ್ಗಿರೀಶಾವತಾರ ವಪುಷಃ, ಕಾಶೀವಿಳಾಸೇಶಿತುಃ ಸೋಽಪ್ಯಾಪಸಾದ್ಭುತಯಾ ಕಟಾಕ್ಷಕಳಿಯಾ ನೀತಃ. ಪ್ರಥಾಂ ಶಾಂಭವೀಂ ಚೇತಾಶಕ್ತಿಭಿರೀಶತಾತ್ಮಭಿರಿಮಂಚಾ ಮುಂಚ ಲೋಕಂ ಜನಾದಾಜ್ಯೈಷೀತ್' ಎಂದೂ, 'ಶ್ರೀಮತ್ಕಾಶೀ ವಿಳಾಸ ಕ್ರಿಯಾಶಕ್ತಿ ಶಿವದೇಶಿಕಾಧಿಷ್ಠೇನ ಶುದ್ಧ ಶೈವಾಮ್ನಾಯ ವರ್ತ್ಮನಾ ನಿಜೇಷ್ಟಲಿಂಗ ಕೃತಾಧಿಷ್ಠಾನಂ ದೇವದೇವಂ ಶ್ರೀಮತ್ ತ್ರಿಯಂಬಕನಾಥಂ ಯಜನ್" ಎಂದೂ ಹೇಳಿದೆ. ಈತನ ದೀಕ್ಷಾಗುರು ಕ್ರಿಯಾಶಕ್ತಿಯೆಂಬುದೂ, ಇವನು ತನ್ನ ಇಷ್ಟಲಿಂಗದಲ್ಲಿ ಅಧಿಷ್ಠಿತನಾದ ಶಿವನನ್ನು ಪೂಜಿಸುತ್ತಿದ್ದನೆಂಬುದೂ ಇದರಿಂದ ವ್ಯಕ್ತವಾಗುತ್ತದೆ. ಈತನು ವ್ಯಾಖ್ಯಾನ ಬರೆದಿರುವ ಸೂತಸಂಹಿತೆಯಲ್ಲಿ 'ಶೈವಾಗಮೋಕ್ತಾಶ್ರಮ ನಿಷ್ಠ ಮಾನವಃ। ತ್ರಿಪುಂಡ್ರಲಿಂಗಂ ತು ಸದೈವ ಧಾರಯೇತ್' ಎಂದು ಹೇಳಿದೆ. ಈತನು ಬರೆದಿರುವ ತಾತ್ಪರ್ಯದೀಪಿಕೆಯಲ್ಲಿ ಪಾಶುಪತ ವ್ರತ

15 ]

ದಿಂದ ಮೋಕ್ಷವಾಗುವುದೆಂದು ಹೇಳಿದೆ ; ಗೋಳಕೀಮಠದ ಆಧಾರಗ್ರಂಥ ವಾದ 'ಸೋಮಶಂಭುಪದ್ಧತಿ'ಯ ಕರ್ತೃ ಸೋಮಶಂಭುವು ಗ್ರಂಥಾರಂಭ ದಲ್ಲಿಯೇ ಉಲ್ಲೇಖಿಸಲ್ಪಟ್ಟಿದ್ದಾನೆ. ಆದುದರಿಂದ ಈತನು ಗೋಳಕೀಮಠದ ಸಂಪ್ರದಾಯದವನೆಂಬುದು ವ್ಯಕ್ತ. ಬಾಳೆಹಳ್ಳಿಯ ವೀರೇಶದೇವರು ರಂಭಾ ಪುರಿ ರೇಣುಕಾಚಾರ್ಯಪೀಠದ ಅಧಿದೈವವಷ್ಟೆ. ಈ ಮಾಧವಮಂತ್ರಿಯು ಬಾಳೆಹಳ್ಳಿಯ ವೀರೇಶದೇವರ ಅಮೃತಪಡಿಗೆ ದಾನಮಾಡಿದುದಕ್ಕೆ ಶಾಸನಾ ಧಾರವಿದೆ. (1937 MAR 215-216) ವೀರಶೈವರ ಕಾಲಜ್ಞಾನ ಗಳಲ್ಲಿ ವೀರವಸಂತರಾಯನು ಹುಟ್ಟಿ, ದುಷ್ಟನಿಗ್ರಹ ಶಿಷ್ಟಪರಿಪಾಲನೆ ಮಾಡುವನೆಂದು ಹೇಳಿದೆ. ಇತರರ ಮತಗ್ರಂಥಗಳಲ್ಲಿ ವೀರವಸಂತನ ಹೆಸರು ಎಲ್ಲಿಯೂ ಬರುವುದೇ ಇಲ್ಲ. ಈತನೇ ವೀರವಸಂತನೆಂದು ಶಾಸನಗಳಲ್ಲಿ ಹೇಳಿದೆ. ಈ ಎಲ್ಲ ದೃಷ್ಟಿಯಿಂದಲೂ ಈ ಆಂಗೀರಸ ಮಾಧವಮಂತ್ರಿಯೂ ಅವನ ಗುರು ಕ್ರಿಯಾಶಕ್ತಿಯೂ ಹರಿಹರನಂತೆ ಲಿಂಗಯಜ್ಞೋಪವೀತಧಾರಿ ಲಿಂಗಿಬ್ರಾಹ್ಮಣ ಪಾಶುಪತ ಮಾಹೇಶ್ವರರೆಂಬುದು ವ್ಯಕ್ತವಾಗುವುದು. ಇವರು ಪೂರ್ವೋಕ್ತ ಶಾಸನದಂತೆ (EC. VII Sk. 281) 'ಶುದ್ಧ ಶೈವಾಮ್ನಾಯ' ಸಂಪ್ರದಾಯದವರು ; ಆ ಶಾಸನದ ಪ್ರಕಾರ, ದಾನ ಕೊಟ್ಟಿರುವುದೂ ಶುದ್ಧಶೈವಾಮ್ನಾಯದ ಬ್ರಾಹ್ಮಣರಿಗೇನೆ. "ಮಹೇಸುರ" ಎಂದೂ "ವೀರಶೈವ ಶತೈರ್ವೃತಃ" ಎಂದೂ ಗೋಳಕೀಮಠದ ವಿಶ್ವೇಶ್ವರ ದೇಶಿಕರನ್ನು ಹೊಗಳಿರುವ ಮಲ್ಕಾಪುರ ಶಾಸನ ವಿಷಯವಾಗಿ, ಶ್ರೀಯುತ ಕಪಟರಾಳ ಕೃಷ್ಣರಾಯರು—'ಈ ಶಾಸನದಲ್ಲೂ ಶುದ್ಧಶೈವ ಸಂಪ್ರದಾಯದ ಶಿವಯೋಗಿಗಳಿಗೆ ವೀರಶೈವಾಚಾರ್ಯರು ಎನ್ನಲಾಗಿದೆ. ಹರಿಹರ ರಾಘ ವಾಂಕರು ಬ್ರಾಹ್ಮಣರಾಗಿದ್ದು ಈ ಶುದ್ಧ ಶೈವಸಂಪ್ರದಾಯದವರೆಂದು ತೋರುವುದು' ಎಂದು ಹೇಳಿದ್ದಾರಷ್ಟೆ. ಆದುದರಿಂದ ಹರಿಹರನಂತೆ ಮಾಧವಾಚಾರ್ಯನೂ, ಕ್ರಿಯಾಶಕ್ತಿಯೂ ಶುದ್ಧಶೈವಾಮ್ನಾಯದವರು ಗ್ಗಿ ದರೆ ಲಿಂಗಿಬ್ರಾಹ್ಮಣ ವೀರಶೈವಾಚಾರ್ಯರು ಎಂಬುದು ವಿದಿತ.

ಈ ಲಿಂಗಿಬ್ರಾಹ್ಮಣ ಪಾಶುಪತಮಾಹೇಶ್ವರರಲ್ಲಿ ಅನೇಕರು ತೆಲುಗು ದೇಶದಿಂದ ಬಂದು ವಿಜಯನಗರ ರಾಜ್ಯದಲ್ಲಿದ್ದುದು ಕಂಡುಬರುತ್ತದೆ.

ವೇಟೂರು ಪ್ರಭಾಕರಶಾಸ್ತ್ರಿಗಳು ಹೇಳುವಂತೆ, ಕೃಷ್ಣದೇವರಾಯನ ಕಾಲಾನಂತರವೂ ಈ ಪರಂಪರೆಯವರು ವಿಜಯನಗರರಾಜ್ಯದಲ್ಲಿದ್ದರು. ಶ್ರೀನಾಥ ಕವಿಯು ಓಡಿಸಿದ ಡಿಂಡಿಮನು ಈ ಪರಂಪರೆಯವನೆಂದು ಶಾಸ್ತ್ರಿಗಳು ಹೇಳಿದ್ದಾರೆ. ಶ್ರೀನಾಥನು ವೀರಶೈವನೆಂದು ಮೈಸೂರು ಗೆಜೆಟಿಯರ್‌ನಲ್ಲಿ ಹಯವದನರಾಯರು ಹೇಳಿದ್ದಾರೆ. ಚಂದ್ರಭೂಷಣ ಕ್ರಿಯಾಶಕ್ತಿಗಳ ಅಧ್ಯಕ್ಷತೆಯಲ್ಲಿ ಶ್ರೀನಾಥನಿಗೂ, ಡಿಂಡಿಮನಿಗೂ ವಾದವಿವಾದ ನಡೆದುದರಿಂದ ಇವರಿಬ್ಬರೂ ಚಂದ್ರಭೂಷಣ ಕ್ರಿಯಾಶಕ್ತಿಗಳಂತೆ ಶುದ್ಧಶೈವಾಮ್ನಾಯ ಸಂಪ್ರದಾಯದ ಲಿಂಗಿಬ್ರಾಹ್ಮಣ ಪಾಶುಪತರೇ ಸರಿ. ಮುಕ್ಕಂತಿಮ್ಮಾದಿಗಳಿಗೆ ಗುರುಗಳಾದ ಅಘೋರಶಿವಾಚಾರ್ಯ, ದಕ್ಷಿಣಮೂರ್ತಿ ಶಿವಾಚಾರ್ಯರು ಈ ಸಂಪ್ರದಾಯದವರೇ ಎಂದು ಪ್ರಭಾಕರಶಾಸ್ತ್ರಿಗಳು ಹೇಳಿದ್ದಾರೆ. ಒಂದನೆಯ ದೇವರಾಯನ ಕಾಲದಲ್ಲಿ ವೈರಾಗ್ಯ ಶಿವಾಚಾರ್ಯ ದಕ್ಷಿಣಾಮೂರ್ತಿದೇವರು ರಾಜಗುರುವಾಗಿದ್ದುದು ಕ್ರಿ.ಶ. ೧೪೧೦ನೆಯ ಇಸವಿಯ ಶಾಸನದಿಂದ ತಿಳಿದುಬರುತ್ತದೆ. ಎರಡನೆಯ ದೇವರಾಯ ಎಂದರೆ ಪ್ರೌಢದೇವರಾಯನ ಮುಖ್ಯಮಂತ್ರಿಯಾದ ಲಕ್ಕಣ್ಣದಂಡೇಶನು ಮೇಲೆ ಹೇಳಿದ ಮಾಧವಮಂತ್ರಿಯಂತೆ ವಿಜಯನಗರ ರಾಜ್ಯದ ವೈಭವಕ್ಕೆ ಕಾರಣನು. ದಕ್ಷಿಣ ದೇಶವನ್ನೆಲ್ಲ ತನ್ನ ಸ್ವಾಧೀನದಲ್ಲಿಟ್ಟುಕೊಂಡು ಸಿಂಹಳವನ್ನೂ ಜಯಿಸಿ "ದಕ್ಷಿಣ ಸಮುದ್ರಾಧಿಪತಿ" ಎಂದು ಬಿರುದಾಂಕಿತನಾದನು ತನ್ನ ಹೆಸರಿನ ನಾಣ್ಯಗಳನ್ನು ಚಲಾವಣೆ ಮಾಡಿದನು. ಈ ಕಾಲದಲ್ಲಿ ವಿಜಯನಗರವು ವೈಭವದ ಶಿಖರವನ್ನು ಮುಟ್ಟಿದ್ದಿತೆಂದು ಮೈಸೂರ್ ಗೆಜೆಟಿಯರಿನಲ್ಲಿ ಹೇಳಿದೆ. ಇದಕ್ಕೆ ಲಕ್ಕಣ್ಣ ದಂಡೇಶನ ಶೌರ್ಯವೇ ಮುಖ್ಯ ಕಾರಣ. ಮಾಧವಮಂತ್ರಿಯಂತೆ ಈತನು ಘನವಿದ್ವಾಂಸನೂ ಹೌದು ; ಈತನು ವೀರಶೈವಸಿದ್ಧಾಂತಕ್ಕೆ ಚಿಂತಾಮಣಿಯಂತಿರುವ "ಶಿವತತ್ತ್ವಚಿಂತಾಮಣಿ" ಎಂಬ ಗ್ರಂಥವನ್ನು ಬರೆದಿದ್ದಾನೆ. ಆ ಗ್ರಂಥದಲ್ಲಿ ಮೊದಲು ಹಂಪೆಯ ವಿರೂಪಾಕ್ಷನನ್ನೂ, ಅನಂತರ ಆತನ ಗುರು 'ಸದ್ಗುರುಮೂರ್ತಿ ಮಲ್ಲಿಕಾರ್ಜುನನಾಮಧರನಾದ ಪಾಶುಪತ ಸದ್ವ್ರತ ಗುಹಾಗ್ರಣಿ'ಯನ್ನೂ, ತದನಂತರ 'ಮಂಗಳಕಳಾನಿಧಿಯೆನಿಪ ಪ್ರಭು'ವನ್ನು, ಆಮೇಲೆ 'ಧರೆಗವತರಿಸಿದಾದಿವೃಷಭ ಬಸವೇಶ್ವರನನ್ನೂ, ಮಹಾಜ್ಯೋತಿ ಚನ್ನ

ಬಸವೇಶ್ವರನನ್ನೂ, ವಂದಿಸಿ ಛಾಯಾ ಮಲ್ಲಿಕಾರ್ಜುನನನ್ನೂ, ಕ್ರಿಯಾ ಶಕ್ತಿಯತಿರಾಯನನ್ನೂ, ದಕ್ಷಿಣಾಮೂರ್ತಿಚಕ್ರವರ್ತಿಯನ್ನೂ, ಆಕಾಶ ವಾಸಿ ಯತಿಯನ್ನೂ ನೂತನ ಗಣಂಗಳ ಪಟ್ಟಿಯಲ್ಲಿ ಸೇರಿಸಿ ಅವರೆಲ್ಲರಿಗೂ ಶರಣುಮಾಡಿಪ್ಪಾನೆ. ಆದುದರಿಂದ ಈತನ ಕಾಲದಲ್ಲಿ ಲಿಂಗಿಬ್ರಾಹ್ಮಣ ವೀರಶೈವರಿಗೂ, ಬಸವಾನುಯಾಯಿ ವೀರಶೈವರಿಗೂ ಸೌಹಾರ್ದವಿದ್ದಿ ತೆಂಬುದು ಸ್ಪಷ್ಟ. ಶ್ರೀವೈಷ್ಣವರಲ್ಲಿ ಒಂದು ಪಂಗಡದವರು ತಮಿಳು ವೇದ ಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುವರಾದರೆ ಮತ್ತೊಂದು ಪಂಗಡ ದವರು ಸಂಸ್ಕೃತ ವೇದಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುವರು ; ಇದೇ ಮೊದಲಾದ ಕೆಲವು ಪ್ರಾಮುಖ್ಯವಲ್ಲದ ಭಿನ್ನಾಭಿಪ್ರಾಯಗಳು ಈ ಎರಡು ಪಂಗಡಗಳಿಗಿರುವವಷ್ಟೆ. ಅಷ್ಟೇ ಭಿನ್ನಾಭಿಪ್ರಾಯಗಳು ವೀರಶೈವರಲ್ಲಿ ಲಿಂಗಾಯತರಿಗೂ, ಆರಾಧ್ಯಬ್ರಾಹ್ಮಣರಿಗೂ ಇರುವವೆಂಬುದು ಪ್ರೊ॥ ಕೆ. ಎ. ನೀಲಕಂಠಶಾಸ್ತ್ರಿಗಳು ಬರೆದಿರುವ 'Development of Religion in South India' ಎಂಬ ಗ್ರಂಥದ 64 ಮತ್ತು 65 ನೆಯ ಪುಟಗಳಲ್ಲಿ ಆರಾಧ್ಯರ ವಿಷಯದಲ್ಲಿ ಹೇಳಿರುವುದರಿಂದ ತಿಳಿಯ ಬಹುದು. ಅದರ ಭಾಷಾಂತರವಿದು :

"ಇವರು ಲಿಂಗಮಜ್ಞೋಪವೀತಗಳನ್ನು ಧರಿಸುವರು; ಗಣಪತಿಯನ್ನು ಪೂಜಿಸುವರು. ಮನೆಯೊಳಗೆ ಲಿಂಗಪೂಜೆಯು ಲಿಂಗಾಯತರ ಪೂಜೆಯ ಹಾಗೆಯೇ; ಆದರೆ ಇತರ ಸ್ಮಾರ್ತರೊಡನೆ ಕೊಟ್ಟು, ತಂದು ವಿವಾಹ ಸಂಬಂಧವನ್ನಿಟ್ಟುಕೊಂಡಿದ್ದಾರೆ, ಮತ್ತು ಲಿಂಗಾಯತರ ಮನೆಯಲ್ಲಿ ಊಟ ಮಾಡುವುದಿಲ್ಲ. ಬಸವೇಶ್ವರರ ಸಮಕಾಲೀನನಾದ ಪಂಡಿತಾರಾಧ್ಯನು ಬ್ರಾಹ್ಮಣ್ಯವನ್ನು ಬಿಡುವುದರಲ್ಲಿ ಮತ್ತು ವೇದಕ್ಕೆ ಮಾನ್ಯತೆಯನ್ನು ಕೊಡು ವುದರಲ್ಲಿ ಬಸವೇಶ್ವರರನ್ನು ಅನುಸರಿಸಲಿಲ್ಲವಷ್ಟೆ : ಪಂಡಿತಾರಾಧ್ಯನನ್ನು ಅನುಸರಿಸುವವರು ಆರಾಧ್ಯಬ್ರಾಹ್ಮಣರು.... ಬಸವೇಶ್ವರರಿಗಿಂತ ಹಿಂದಿನ ವರಾದ ಮತ್ತು ಅವತಾರಪುರುಷರಾದ ರೇವಣ, ಮರುಳ, ಏಕೋರಾಮ ಮತ್ತು ಪಂಡಿತ ಎಂಬ ನಾಲ್ಕು ಆರಾಧ್ಯರನ್ನು ಗೌರವಿಸುವುದು ಅವರ ಸಂಪ್ರದಾಯ. ದೇವಸ್ಥಾನಗಳಲ್ಲಿ ದೇವರಿಗೆ ಅರ್ಪಿಸಿದ ಪ್ರಸಾದವನ್ನು

ಅವರು ತೆಗೆದುಕೊಳ್ಳುವುದಿಲ್ಲ; ಏಕೆಂದರೆ ಅದನ್ನು ಮತ್ತೆ ಲಿಂಗಕ್ಕೆ ಅರ್ಪಿಸಲಾಗುವುದಿಲ್ಲ. ಅವರು ಅವರ ಲಿಂಗಕ್ಕೆ ಅರ್ಪಿಸದೆ ಏನನ್ನೂ ತಿನ್ನರು. ಸತ್ತವರನ್ನು ಹೂಳುವರು. ಶಾಸ್ತ್ರಾನುಸಾರವಾಗಿ ಮಾಡಬೇಕಾದ ಶ್ರಾದ್ಧವನ್ನು ಮಾಡರು; ಆದರೆ ಆರಾಧನೆಯನ್ನು ಮಾಡುವರು. ಅಪಸವ್ಯ ಎಂದರೆ ಎಡಕ್ಕೆ ಜನಿವಾರ ಹಾಕಿಕೊಳ್ಳುವುದನ್ನು ಮಾಡರು. ಶ್ರಾದ್ಧಕ್ಕೆ ಅತ್ಯವಶ್ಯವಾದ ಎಳ್ಳು, ದರ್ಭೆ, ಹೋಮ, ಪಿಂಡ ಮುಂತಾದವುಗಳನ್ನು ಅವರು ಬಳಸುವುದಿಲ್ಲ ಅವರಲ್ಲಿ ವಿಧವೆಯರು ತಲೆಯನ್ನು ಬೋಳಿಸಿಕೊಳ್ಳುವುದಿಲ್ಲ. ಈ ಆರಾಧ್ಯರಿಗೂ, ಲಿಂಗಾಯಿತರಿಗೂ ಈ ವ್ಯತ್ಯಾಸಗಳಿದ್ದರೂ, ಇವರಿವರಲ್ಲಿ ಸ್ನೇಹವಿದ್ದುದಲ್ಲದೆ, ಹದಿನಾಲ್ಕನೆಯ ಶತಮಾನದಲ್ಲಿ ಇವರೀರ್ವರೂ ಸೇರಿ ತುರುಷ್ಕರ ಆಕ್ರಮಣೋಪಪ್ಲವಗಳನ್ನು ಹಿಮ್ಮೆಟ್ಟಿಸಿ ವಿಜಯನಗರದ ಕೀರ್ತಿ ಯಶಸ್ಸುಗಳಿಗೆ ಕಾರಣರಾದರು."

ಮೇಲಿನ ಅವತರಣಿಕೆಯಿಂದ ತಿಳಿದುಬರುವಂತೆ ಲಿಂಗವರ್ಣಾಶ್ರಮಗಳಲ್ಲಿ ತಾರತಮ್ಯವಿರುವುದೇ ವೈದಿಕಭಾವನೆಯೆಂದು ಆರಾಧ್ಯರು ನಂಬಿರುವರಾದರೆ, ಆರೀತಿ ತಾರತಮ್ಯಮಾಡಬಾರದೆಂಬ ಬಸವೇಶ್ವರರು ಮಾಡಿದ ಬದಲಾವಣೆಯನ್ನು ಒಪ್ಪಿರುವರು— ಉಳಿದ ವೀರಶೈವರು ಎಂಬುದು ಸ್ಪಷ್ಟ. ಇನ್ನು ಅಶೌಚವನ್ನು ಆರಾಧ್ಯಬ್ರಾಹ್ಮಣರು ಮಾನ್ಯಮಾಡದಿರುವುದು ಹೊಸದಲ್ಲ; ಏಕೆಂದರೆ ಆರಾಧ್ಯಬ್ರಾಹ್ಮಣರು ಗೋಳಕೀಮಠದ ಸಂಪ್ರದಾಯದವರೆಂದು ಆಂಧ್ರದೇಶದ ವಿಷಯಗಳನ್ನು ಬಲ್ಲ ಕಪಟರಾಳ ಕೃಷ್ಣರಾಯರೂ. ವೇಟೂರು ಪ್ರಭಾಕರಶಾಸ್ತ್ರಿಗಳೂ ಹೇಳಿರುವರಷ್ಟೆ. ತೆಲುಗು ಬಸವಪುರಾಣದ ಮುನ್ನುಡಿಯಲ್ಲಿ ಶಿವದೀಕ್ಷಿತರಿಗೆ ಅಶೌಚಾವಾಗಲೀ, ಶ್ರಾದ್ಧಾದಿಕವಾಗಲೀ ಇಲ್ಲವೆಂದು ಗೋಳಕೀಮಠದವರು ಹೇಳಿರುವರೆಂದು ವೇಟೂರು ಪ್ರಭಾಕರಶಾಸ್ತ್ರಿಗಳೇ ಹೇಳಿರುವರು. ಹೀಗೆ ಆಚಾರ ವ್ಯವಹಾರಗಳಲ್ಲಿ ಬಸವೇಶ್ವರರಿಗಿಂತ ಮೊದಲೇ ಮಾರ್ಪಾಡು ಆಗಿದ್ದುದರಲ್ಲಿ ಆಶ್ಚರ್ಯವೇನಿಲ್ಲ. ಏಕೆಂದರೆ ಲಕುಳೀಶ ಪಾಶುಪತರಲ್ಲಿ ಈ ತೆರದ ಸುಧಾರಣೆಗಳು ಆಗಿದ್ದವು. ಶೂದ್ರರಿಗೂ, ಸ್ತ್ರೀಯರಿಗೂ ಸಹಾ ಗುರುಗಳು ಲಿಂಗಗಳನ್ನು ಕೊಟ್ಟು ಪೂಜೆಮಾಡಿಕೊಳ್ಳಲು ಅವಕಾಶವಿತ್ತಿದ್ದುದು ಇಂತಹ ಒಂದು ಸುಧಾರಣೆ. ಆದರೆ ಬೇರೆ ಬೇರೆ ಜಾತಿಯವರಿಗೆ ಬೇರೆ ಬೇರೆ ತರದ

ಲಿಂಗಗಳು ಕೊಡಲ್ಪಡುತ್ತಿದ್ದವು. "ರಸಲಿಂಗಂ ಬ್ರಾಹ್ಮಣಾನಾಂ ಬಾಣ ಲಿಂಗಂ ಕ್ಷತ್ರಿಯಾಣಾಂ....ಸ್ವರ್ಣಲಿಂಗಂ ವೈಶ್ಯಾನಾಂ....ಶಿಲಾಲಿಂಗಂತು ಶೂದ್ರಾಣಾಂ ...ಸ್ತ್ರೀಣಾಂತು ಪಾರ್ಥಿವಂಲಿಂಗಂ" ಎಂದು ವಾಯವೀಯ ಪುರಾಣವನ್ನೊಳಗೊಂಡ ಶಿವಮಹಾಪುರಾಣದಲ್ಲಿಯೂ, ಆರಾಧ್ಯಾ ಬ್ರಾಹ್ಮಣ ನೀಲಕಂಠಶಿವಾಚಾರ್ಯವಿರಚಿತ ಕ್ರಿಯಾಸಾರದಲ್ಲಿಯೂ ಸಹಾ ಹೇಳಿದೆ. ಅವರವರ ಲಿಂಗಗಳನ್ನು ಅವರವರೇ ವೀರಶೈವರಂತೆ ಪೂಜಿಸಬೇಕಾಗಿದ್ದಿತು; ಆದರೆ ಆಕಸ್ಮಿಕವಾಗಿ ತಮ್ಮ ಲಿಂಗವು ಇಲ್ಲವಾದರೆ, ಆಗ ಇತರರ ಲಿಂಗವನ್ನು ಪೂಜಿಸಬಹುದಾಗಿದ್ದಿತು. "ಸ್ವೀ ಯಾಭಾವೇಽನ್ಯದೀಯಂತು ಪೂಜಾ ಯಾಂ ನ ನಿಷಿಧ್ಯತೇ" ಎಂದು ಮೇಲಿನ ಆಧಾರಗಳೇ ಹೇಳುತ್ತವೆ.

ಹರಿಹರ ಬುಕ್ಕ ರಾಜರುಗಳು 'ಶೈಲಾಂಕನಾಥಕುಲ' ದವರೆಂಬುದು ಶಾಸನೋಕ್ತ ವಿಷಯ. ಶೈಲವೆಂದರೆ ಇಲ್ಲಿ ಶ್ರೀಶೈಲವೆಂಬುದು ಸ್ಪಷ್ಟ. ಕಾಕತೀಯರ ಗುರುವಾದ ವಿಶ್ವೇಶ್ವರ ದೇಶಿಕರು ಶ್ರೀಶೈಲದಲ್ಲಿ ಒಂದು ಮಠವನ್ನು ಸ್ಥಾಪಿಸಿದುದನ್ನು ಹಿಂದೆಯೇ ಹೇಳಿದೆ. ಶ್ರೀಶೈಲವು ಪಾಶು ಪತರಿಗೆ ಪೂಜ್ಯ ಸ್ಥಾನವೆಂಬುದು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿಯಾ ಶಕ್ತಿ ದೇಶಿಕರು ಸಂಗಮವಂಶದ ರಾಜರ ಕುಲಗುರುಗಳಾದುದರಿಂದ ಹರಿಹರ ಬುಕ್ಕರು ಪಾಶುಪತ ಸಂಪ್ರದಾಯದವರೇ. ಮೇಲೆ ಹೇಳಿದಂತೆ, ಗುರುಗಳು ಲಿಂಗಗಳನ್ನು ಕೊಡುವ ಪದ್ಧತಿಯ ಪ್ರಕಾರ, ಹರಿಹರಬುಕ್ಕರಾಜರುಗಳಿಗೆ, ರೇವಣಸಿದ್ಧರೆಂಬ ಅಂದಿನ ಗುರುಗಳಿಂದ ಲಿಂಗಗಳು ಪ್ರಾಪ್ತವಾದುದನ್ನು, ವಿದ್ಯಾರಣ್ಯಚರಿತ್ರೆಗೆ ಮುಖ್ಯ ಆಧಾರ ಗ್ರಂಥವಾದ ವಿದ್ಯಾರಣ್ಯ: ಕಾಲಜ್ಞಾನ ವೆಂಬ ಗ್ರಂಥದಿಂದ ತಿಳಿದುಬರುತ್ತದೆ. (M.A.R. 1932 Page 112) ಈ ರಾಜರುಗಳು ಯಾದವರಾದುದರಿಂದ ದ್ವಿಜರಂತೆ ವೇದಮಂತ್ರಗಳಿಂದ ಅವರ ಲಿಂಗಗಳನ್ನು ಪೂಜಿಸುವಂತಿರಲಿಲ್ಲ. ಏಕೆಂದರೆ ಮೇಲಿನ ಆಧಾರ ಗ್ರಂಥದಲ್ಲಿಯೇ ಹೇಳಿದಂತೆ :

ದ್ವಿಜಾನಾಂ ವೈದಿಕೇನಾಪಿ ಮಾರ್ಗೇಣಾರಾಧನಂ ವರಂ ।
ಅನ್ಯೇಷಾಮಪಿ ಜಂತೂನಾಂ ವೈದಿಕೇನ ನ ಸಮ್ಮತಂ ॥

ಪ್ರೌಢದೇವರಾಯನ ಕಾಲದಲ್ಲಿ ಈ ತೊಡಕು ಪರಿಹಾರವಾಯಿತು. ಏಕೆಂದರೆ ಈತನು ಬಸವಾನುಯಾಯಿಯಾಗಿ ವೀರಶೈವ ದೀಕ್ಷೆಯನ್ನು ತೆಗೆದುಕೊಂಡನು ; ರಾಜನನ್ನು ಅನುಸರಿಸಿ ಲಕ್ಕಣದಂಡೇಶ ಮೊದಲಾದ ಆರಾಧ್ಯ ಬ್ರಾಹ್ಮಣರು ಬಸವಾನುಯಾಯಿಗಳಾಗಿ ವೀರಶೈವ ದೀಕ್ಷೆಯನ್ನು ತೆಗೆದುಕೊಂಡರು ; ಆದರೆ 'ಶಿವತತ್ತ್ವಚಿಂತಾಮಣಿ' ಗ್ರಂಥಾರಂಭದಲ್ಲಿಯೇ ಲಕ್ಕಣದಂಡೇಶನು ಅವನ ಗುರುವಾದ "ಪಾಶುಪತ ಸದ್ವ್ರತ ಗುಣಾಗ್ರಣಿಯ ಚರಣಾಂಬುಜಕ್ಕೆ ಶರಣು" ಎನ್ನುವುದನ್ನು ಮರೆಯಲಿಲ್ಲ. ಏಕೆಂದರೆ ಬಸವಾನುಯಾಯಿಯಾಗುವುದೆಂದರೆ ಕೆಲವು ಸುಧಾರಣೆಗಳನ್ನು ಒಪ್ಪಿಕೊಳ್ಳುವುದೇ ಹೊರತು ಮತಾಂತರವಲ್ಲವೆಂಬ ಭಾವನೆಯಿದ್ದಿತು. ಹಿಂದೆ ಹೇಳಿದಂತೆ ವಚನಕಾರರೇ ಹೇಳಿದ್ದಾರೆ ಅಲ್ಲವೆ :

> ಶೈವನೇಮಸ್ತರ ಕೈಯ್ಯಲು ಉಪದೇಶವಾದರೆ ಏನಯ್ಯಾ ? ಅಲ್ಲಿ ಊನವಿಲ್ಲ; ಪಾರಂಪರ್ಯದಲ್ಲಿ ನಡೆದಿತ್ತಾಗಿ ; ನದಿಯ ಮೂಲವನು, ಗುರುವಿನ ಮೂಲವನು ಎಣಿಸುವರೆ ?

ದೇವಗಿರಿಯನ್ನು ಸಂಪೂರ್ಣವಾಗಿ ವಶಮಾಡಿಕೊಂಡು ಬಲ್ಲಾಳರಾಯನನ್ನು ಸಹಾ ಸೋಲಿಸಿ ದಕ್ಷಿಣ ದೇಶವನ್ನೆಲ್ಲ ಆಕ್ರಮಿಸಲು ಹವಣಿಸುತ್ತಿದ್ದ ಮಹಮದೀಯರು ಆಂಧ್ರವನ್ನು ಗೆಲ್ಲಲು ಪ್ರಯತ್ನಿಸಿದಾಗ ಮಹಮದೀಯರ ಮುನ್ನಡೆಗೆ (Bulwark) ಕೋಟೆಯ ಗೋಡೆಯಂತಿದ್ದವನು ಕಾಕತೀಯ ಪ್ರತಾಪರುದ್ರನೆಂದು 'Foundation of Vijayanagara' ಗ್ರಂಥದ 66ನೆಯ ಪುಟದಲ್ಲಿ ಹೇಳಿದೆ. 'ಹದಿಮೂರನೆಯ ಶತಮಾನದ ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯಾವಲೋಕನ ಗ್ರಂಥದಲ್ಲಿ, ಪ್ರೊ|| ಡಿ. ಕೆ. ಭೀಮಸೇನರಾಯರು ಹೇಳಿರುವಂತೆ 'ಸುಮಾರು ನಾಲ್ಕು ಸಾರಿ ಮಲ್ಲಿಕಾಫುರನು ಆಂಧ್ರದೇಶದ ಮೇಲೆ ದಂಡೆತ್ತಿ ಹೋಗಿದ್ದನು. ನಾಲ್ಕು ಸಾರಿಯೂ ಬಲಿಷ್ಠನಾದ ಕಾಕತಿ ಪ್ರತಾಪರುದ್ರನು ದಾಳಿಯನ್ನು ತಡೆದು, ಯುದ್ಧದಲ್ಲಿ ಪರಾಕ್ರಮವನ್ನು ಮೆರೆದು, ಮಲ್ಲಿಕಾಫರನ ಸೇನೆಯನ್ನು ಹಿಂದಕ್ಕಟ್ಟಿದನಾದರೂ, ಹತದೈವನಾದುದರಿಂದ ಕೊನೆಗೆ ಸೆರೆಯಾಗಿ ದಿಲ್ಲಿಗೆ ಒಯ್ಯಲ್ಪಟ್ಟನು." ಹಿಂದೂ ಧರ್ಮವು ನಾಶವಾಗುವುದನ್ನು, ದಕ್ಷಿಣ ದೇಶದಲ್ಲೆಲ್ಲ ಮಠಗಳನ್ನು ಸ್ಥಾಪಿಸಿ, ಅನೇಕ ರಾಜರು

ಗಳ ಗುರುಗಳಾಗಿದ್ದ ಗೋಳಕೀಮಠದ ಗುರುಗಳು, ನೋಡಿ ಸುಮ್ಮನಿರದೆ ಹಿಂದುಗಳನ್ನು ಸಂಘಟಿಸುವ ಕಾರ್ಯಕ್ಕೆ ನಿಲ್ಲಬೇಕಾಯಿತು. ಗೋಳಕೀಮಠ ಸಂಪ್ರದಾಯದ ಲಿಂಗಿಬ್ರಾಹ್ಮಣಪಾಶುಪತಧರ್ಮದ ಗುರುಗಳಾದ ಕ್ರಿಯಾಶಕ್ತಿದೇಶಿಕರ ನೇತೃತ್ವದಲ್ಲಿ ಅವರ ಶಿಷ್ಯರಾದ ಹರಿಹರ, ಬುಕ್ಕ, ಮಾಧವಮಂತ್ರಿಗಳು ವಿಜಯನಗರರಾಜ್ಯವನ್ನು ಕಟ್ಟಲು ಸನ್ನದ್ಧರಾದರು. ವಿಜಯನಗರ ರಾಜ್ಯವು ಹಿಂದೂ ಸಾಮ್ರಾಜ್ಯವಾಗಿ ಹಿಂದೂ ಸಂಸ್ಕೃತಿಯನ್ನು ಉಳಿಸಲು ಈ ಮಹನೀಯರ ಸಾಹಸವೇ ಕಾರಣ. ತುರಷ್ಕರನ್ನು ಗೋವೆ ಯವರೆಗೂ ಹೊಡೆದೋಡಿಸಿದುದರಿಂದ ಮಾಧವಮಂತ್ರಿಯು 'ತುರುಕಪಳ ವಿಭಾಡ'ನೆಂದೂ, "ಇಷ್ಟಲಿಂಗಾಧಿಷ್ಠಿತ ತ್ರ್ಯಂಬಕನಾಥ"ನನ್ನು ಅರ್ಚಿ ಸುತ್ತ 'ಉಪನಿಷನ್ಮಾರ್ಗ ಪ್ರತಿಷ್ಠಾಗುರು'ವೆನಿಸಿ ಸೂತಸಂಹಿತೆಗೆ ವ್ಯಾಖ್ಯಾನವನ್ನು ಬರೆದು, ಹಿಂದೂಧರ್ಮವನ್ನು ಉದ್ಧಾರಮಾಡಿದುದರಿಂದ 'ವೀರವಸಂತ'ನೆಂದೂ ಶಾಸನೋಕ್ತನಾದನು. ಅಪ್ರತಿಮ ವೀರನಾದ ಬುಕ್ಕರಾಯನೇ ರಾಜ್ಯಸ್ಥಾಪನೆಗೆ ಮುಖ್ಯಕಾರಣನಾಗಿ 'ಬುಕ್ಕಭೂಪತಿಃ ಪ್ರಚಂಡವಿಕ್ರಮೋ ಪಾಂಡವಾನಾಮಿವಾರ್ಜುನಃ' (EC. VI Koppa 25) ಎಂದು ಶಾಸನೋಕ್ತನಾದನು. ಇವರೆಲ್ಲರಿಗೂ ಗುರುವಾದ ಕ್ರಿಯಾಶಕ್ತಿ ದೇಶಿಕನ ಪ್ರಭಾವವು ಈ ಕಾರ್ಯದಲ್ಲಿ ಎಷ್ಟರಮಟ್ಟಿಗೆ ಇತ್ತೆಂದರೆ ಸಂಗಮವಂಶದ ರಾಜನೊಬ್ಬನು ಸಾಮ್ರಾಜ್ಯವನ್ನೂ, ಸರ್ವಜ್ಞತ್ವ ವನ್ನೂ ಪಡೆದುದು 'ತಪೋ ರಾಜ್ಯಲಕ್ಷ್ಮೀ ನಿವಾಸಕಾಯ ಶ್ರೀ ಕ್ರಿಯಾ ಶಕ್ತಿಗುರುವರ ಚರಣ ಪರಿಚರಣ ಪ್ರಸಾದಾಸಾದಿತ'ವೆಂದು EC. XI Dg. 23ನೆಯ ಶಾಸನದಲ್ಲಿ ಬರೆಸಿಕೊಂಡಿದ್ದಾನೆ ಮಹಮದೀಯರ ಆಕ್ರಮಣವು ತಪ್ಪಿ, ಸಾಮ್ರಾಜ್ಯವೂ, ಸರ್ವಜ್ಞತ್ವವೂ ಪ್ರಾಪ್ತವಾದುದು ಕ್ರಿಯಾಶಕ್ತಿ ದೇಶಿಕರ ನೇತೃತ್ವದಲ್ಲಿ ಅವರ ಶಿಷ್ಯರು ಮಾಡಿದ ಸಾಹಸದಿಂದಲೇ ಆದುದರಿಂದ, ಪ್ರೊ॥ ಕೆ. ಎ. ನೀಲಕಂಠಶಾಸ್ತ್ರಿಗಳು ಈ ಸೌಭಾಗ್ಯಕ್ಕೆ ಕಾರಣರು ಆರಾಧ್ಯಬ್ರಾಹ್ಮಣರು ಮತ್ತು ಲಿಂಗಾಯತರು ಎಂದು ಮತ್ತೆಮತ್ತೆ ಹೇಳಿರುವರು. ಅವರು ಬರೆದಿರುವ 'Development of Religion in South India' ಗ್ರಂಥದ 65ನೆಯ ಪುಟದಲ್ಲಿ—"The relation between the Aradhyas and Lingayeths

were friendly and in the fourteenth century they joined together to resist the inroads of Islam and prepare the way for the glories of Vijayanagara" ಎಂದು ಹೇಳಿದೆ. 'History of South India' ಎನ್ನುವುದು ಅವರ ಇನ್ನೊಂದು ಗ್ರಂಥ; ಅದರಲ್ಲಿ ಹೀಗೆ ಹೇಳಿದ್ದಾರೆ—"The relations between Aradhya Saivism with Lingayatism were friendly and both joined together in fourteenth century in resisting the inroads of Muslims and preparing the way for the foundation of Vijayanagar" ವೀರಶೈವರ ಈ ಎರಡು ಪಂಗಡಗಳೂ ಕಾಕತೀಯ ರಾಜ್ಯದಲ್ಲಿ ಪ್ರಾರಂಭಿಸಿದ ಮಹಮದೀಯರನ್ನು ತಡೆದು, ಹಿಂದೂ ಧರ್ಮೋದ್ಧಾರಮಾಡುವ ಮಹತ್ಕಾರ್ಯವು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಲ್ಲಿ ಮುಕ್ತಾಯವಾಯಿತು.

## ನಾಥಸಿದ್ಧ ಮಾಹೇಶ್ವರರು

ಲಕುಳೀಶ ಪಾಶುಪತಮಾಹೇಶ್ವರರಲ್ಲಿ ನಾಥಸಿದ್ಧ ಮಾಹೇಶ್ವರ ಸಂಪ್ರದಾಯವೆಂಬುದೊಂದು ಪಂಗಡವಿದ್ದಿತು ಈ ಸಿದ್ಧರಲ್ಲಿ ಕುಲಸಿದ್ಧರೆಂದೂ ಅಕುಲಸಿದ್ಧರೆಂದೂ ಎರಡು ವಿಧ; ಕುಲವೆಂದರೆ ಶಕ್ತಿ; ಅಕುಲವೆಂದರೆ ಶಿವ. ಕುಲಸಿದ್ಧರು ಶಾಕ್ತರು, ಅಕುಲಸಿದ್ಧರು ಶೈವರು. ಮತ್ಸ್ಯೇಂದ್ರನಾಥನ ಶಿಷ್ಯನಾದ ಗೋರಕ್ಷನು ಮೊದಲು ಕುಲಸಿದ್ಧನಾಗಿದ್ದು, ಅಲ್ಲಮಪ್ರಭುವಿನ ಪ್ರಭಾವಕ್ಕೆ ಒಳಗಾಗಿ ವೀರಶೈವ ಸಿದ್ಧನಾದನು. ಈತನು ಬರೆದಿರುವ ಸಿದ್ಧಸಿದ್ಧಾಂತ ಪದ್ಧತಿಯು ನಾಥಸಿದ್ಧರ ಆಧಾರಗ್ರಂಥ. ಇದರ ಆರನೆಯ ಉಪದೇಶದ ಳಳನೆಯ ಶ್ಲೋಕದಲ್ಲಿ 'ಲಿಂಗಧಾರೀ' ವಿಷಯವಿದೆ :

ವಿಲಯಂ ಸರ್ವ ತತ್ತ್ವಾನಾಂ ಕೃತ್ವಾ ಸಂಧಾರ್ಯತೇ ಸ್ಥಿರಂ |
ಸರ್ವದಾ ವೀರೇಣ ಯೇನ ಲಿಂಗಧಾರೀ ಭವೇತ್ತು ಸಃ ||

ಅಲ್ಲದೆ ಸಿದ್ಧರು ತಮ್ಮನ್ನು ಅತ್ಯಾಶ್ರಮಿಗಳೆಂದು ಕರೆದುಕೊಳ್ಳುತ್ತಾರೆ.

ಕಾರಣತಂತ್ರದಲ್ಲಿಯೂ, ಶ್ರೀಕಂಠಭಾಷ್ಯದಲ್ಲಿಯೂ ಪಾಶುಪತ ಅತ್ಯಾಶ್ರಮಿ ಲಿಂಗಧಾರೀ ಪದಗಳು ಸಮಾನಾರ್ಥವುಳ್ಳವು ಎಂದು ಹೇಳಿದೆ :

ಪರಬ್ರಹ್ಮಾಭಿದಂ ಲಿಂಗಂ ಪಶುಪಾಶ ವಿಮೋಚಕಂ |
ಯೋಧಾರಯತಿ ಸದ್ಭಕ್ತ್ಯಾ ಸ ಪಾಶುಪತ ಉಚ್ಯತೇ |
ಯಸ್ತು ಲಿಂಗಾಗ ಸಂಯುಕ್ತಾ ಸ ಏವಾತ್ಯಾಶ್ರಮೀ ಭವೇತ್ ||

ಎಂದು ಶ್ರೀಕರಭಾಷ್ಯದಲ್ಲಿಯೂ ಹೇಳಿದೆ.

ಸಿದ್ಧಸಿದ್ಧಾಂತಪದ್ಧತಿಯನ್ನು ಸಂಕ್ಷೇಪಿಸಿ ಚೆನ್ನಸದಾಶಿವಯೋಗಿಗಳು ಶಿವಯೋಗಪ್ರದೀಪಿಕೆಯನ್ನು ಬರೆದಿದಾರೆಂಬುದು ಅದೇ ಗ್ರಂಥದಿಂದ ತಿಳಿದು ಬರುವುದು :

ಶಿವಾಗಮ ರಹಸ್ಯಾರ್ಥಾನ್ ಸಿದ್ಧಸಿದ್ಧಾಂತ ಪದ್ಧತಿಂ |
ಸಂಕ್ಷೇಪತಃ ಕೃತಾಲೋಕ್ಯ ಶಿವಯೋಗಪ್ರದೀಪಿಕಾ ||

ಈ ಶಿವಯೋಗಪ್ರದೀಪಿಕೆಯನ್ನು ಕನ್ನಡಿಸಿ ನಿಜಗುಣಶಿವಯೋಗಿಗಳು ಪರಮಾರ್ಥಪ್ರಕಾಶಿಕೆಯನ್ನು ಅವರೇ ಹೇಳಿರುವಂತೆ ಬರೆದಿದ್ದಾರೆ. ವೀರ ಶೈವರ ಆಧಾರಗ್ರಂಥಗಳಲ್ಲಿ ಒಂದಾದ 'ಪರಮಾರ್ಥಪ್ರಕಾಶಿಕೆ'ಗೆ ಹಿನ್ನೆಲೆ 'ಸಿದ್ಧಸಿದ್ಧಾಂತಪದ್ಧತಿ' ಎಂಬುದು ಸ್ಪಷ್ಟ. ಹೀಗೆಂದ ಮಾತ್ರಕ್ಕೆ ನಾಥ ಸಿದ್ಧರೆಲ್ಲರೂ ವೀರಶೈವರಲ್ಲ. ವೀರಶೈವಸಿದ್ಧರು ಕುಲಸಿದ್ಧರನ್ನು ಹಳಿಯು ತ್ತಾರೆ. ಸಿದ್ಧರಾಮನು ಶಿವಸಿದ್ಧನು, ರಾಘವಾಂಕನು ಸಿದ್ಧರಾಮಚರಿತ್ರೆ ಯಲ್ಲಿ ಹೇಳುವಂತೆ—'ಮಾರಣಾದಿ ವಿಕರ್ಮ ಯಂತ್ರತಂತ್ರ ಸಾರ ಪರಕಾಯ ಪ್ರವೇಶವು ಬಯಸುವ ವಿಕಾರಿಸಿದ್ಧರು ಸರಿಯೆ ಸಿದ್ಧ ರಾಮಂಗೆ?' ಹರಿಹರ ಕವಿಯು, ರೇವಣಸಿದ್ಧರನ್ನು 'ಲಾಕುಲದ ಲಾವಣಿಗ, ಸಿದ್ಧಕುಲಪತಿ, ಸಿದ್ಧಕುಲಶೇಖರ ಸಿದ್ಧರ ಸಿದ್ಧರಸ' ಎಂದು ಕರೆದಿದ್ದಾನೆ. ಶೂನ್ಯಸಂಪಾದನೆಯ ಸಿದ್ಧರಾಮಯ್ಯಗಳ ಸಂಪಾದನೆಯ ಪ್ರಕರಣದಲ್ಲಿ ಪ್ರಭುದೇವರು ತಮ್ಮ ಕರಸ್ಥಳದ ಅನಾದಿ ಸಂಸಿದ್ಧವನ್ನು ಹೀಗೆ ನಿರೂಪಿಸುತ್ತಾರೆ :

ಅನಾದಿಗಣನಾಥನ ಶಿಷ್ಯನು ಆದಿಗಣನಾಥನು. ಆದಿಗಣನಾಥನ ಶಿಷ್ಯನು ಆಧ್ಯಾತ್ಮಗಣನಾಥನು... ವ್ಯೋಮಸಿಗದ್ಧಣನಾಥನ ಶಿಷ್ಯನು ಬಸವನೆಂಬ

ಗಣನಾಥನು ಬಸವನೆಂಬಗಣನಾಥನ ಶಿಷ್ಯನು ಅನಿಮಿಷನೆಂಬ ಗಣನಾಥನು-ಇಂತು ಅನಾದಿನಿಡಿಮುಬಂದಅನುಪಮಲಿಂಗವು ಗೋಹೇಶ್ವರನೆಂಬ ಹೆಸರನೊಳಕೊಂಡು ಎನ್ನ ಕರಸ್ಥಳಕ್ಕೆ ಸಾಧ್ಯವಾಯಿತ್ತು ಕಪಾ ಸಿದ್ಧರಾಮಯ್ಯಾ.

ವೀರಶೈವಸಿದ್ಧರಾದ ರೇವಣಸಿದ್ಧರೂ, ಅಲ್ಲಮಪ್ರಭುವೂ ಸಹ ಸಿದ್ಧರಾಮನಂತೆ, ತಾಂತ್ರಿಕಸಿದ್ಧರಿಗೆ ವಿರೋಧವುಳ್ಳವರು. 'ಸಿದ್ಧಸಿದ್ಧಾಂತನಾಯಕ' ರಾದ ರೇವಣಸಿದ್ಧರ ವಿಷಯವಲ್ಲಿ :

ಯಂತ್ರಮಂತ್ರ ಕಲಾಸಿದ್ಧಾನ್ ವಿಮತಾನ್ ಸಿದ್ಧಮಂಡಲಾನ್ ।
ವಿಜಿತ್ಯ ಸ್ವಪ್ರಭಾವೇನ ಸ್ಥಾಪಯಿತ್ವಾ ಶಿವಾಗಮಾನ್ ॥

ಎಂದು ವಿಮತಸಿದ್ಧರನ್ನು ಜಯಿಸಿದುದನ್ನು ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದೆ. ಅಲ್ಲಮಪ್ರಭುವು ವಚನವೊಂದರಲ್ಲಿ :

ಪಠಯೋಗಲಂಬಿಕೆಯೆಂದು, ಆಕುಂಚನವೆಂದು ವಜ್ರ ಮುರಿಯಕಲ್ಪವೆಂದು ಮಲಮೂತ್ರಂಗಳಂ ಸೇವಿಸುತ್ತ, ಇದು ಪೂರ್ವನವನಾಥಸಿದ್ಧರ ಮತೋಕ್ತವೆಂದು ಕಾಪಾಲಿಕಾಚರಣೆಯನ್ನಾಚರಿಸುವರಲ್ಲ ಶರಣರು.

ಎಂದು ಹೇಳಿದ್ದಾರೆ. ಆದುದರಿಂದ ಅಲ್ಲಮಪ್ರಭುರೇವಣಸಿದ್ಧಸಿದ್ಧರಾಮರುಗಳು ನವನಾಥಸಿದ್ಧರ ಸಂಪ್ರದಾಯದವರಾಗಿರದೆ ವೀರಶೈವಸಿದ್ಧರಾಗಿದ್ದವರು. ಇವರ ಪ್ರಭಾವಕ್ಕೆ ಒಳಗಾಗಿ ಗೋರಕ್ಷನು ವೀರಶೈವಸಂಪ್ರದಾಯದವನಾಗಿ ಸಿದ್ಧಸಿದ್ಧಾಂತ ಪದ್ಧತಿಯನ್ನು ಬರೆದನು. ಗೋರಕ್ಷ ಸಂಪ್ರದಾಯದವರಿಗೆ ನಾಸಿಕದ ಸಮೀಪದಲ್ಲಿರುವ ತ್ರ್ಯಂಬಕೇಶ್ವರವು ಪ್ರಸಿದ್ಧವಾದ ಕ್ಷೇತ್ರವಾಗಿದೆ. ಅಲ್ಲಿ ಸಿದ್ಧರಗವಿ ಮತ್ತು ಮಠಗಳೂ ಗೋರಕ್ಷನಾಥನ ವಿಗ್ರಹವೂ ಇವೆ. ಅಕ್ಕಮಹಾದೇವಿಯು ತನ್ನ ಇಷ್ಟಲಿಂಗದಲ್ಲಿ ಅಧಿಷ್ಠಿತನಾದ ಮಲ್ಲಿಕಾರ್ಜುನನನ್ನು ಪೂಜಿಸುತ್ತಿದ್ದ ಹಾಗೆ ಕ್ರಿಯಾಶಕ್ತಿಯಿಂದ ಶಾಂಭವೀ ದೀಕ್ಷೆಯನ್ನು ಪಡೆದ ವೀರವಸಂತರಾಯನೆಂದು ಬಿರುದಾಂಕಿತನಾದ ಮಾಧವರಾಯನು ತನ್ನ ಇಷ್ಟಲಿಂಗದಲ್ಲಿ ಅಧಿಷ್ಠಿತನಾದ ತ್ರ್ಯಂಬಕೇಶ್ವರನನ್ನು ನಿತ್ಯನೈಮಿತ್ತಿಕ ವಿಧಿಯಿಂದ ಪೂಜಿಸುತ್ತಿದ್ದುದು (EC. VII Sk. 281) ಶಾಸನೋಕ್ತವಾಗಿದೆ. ಸೊರಬದ 375ನೆ ಶಾಸನದಲ್ಲಿ "ಕ್ರಿಯಾ

ಶಕ್ತಿ ಗುರು ಸಾಕ್ಷಾತ್‌ತೇಜಸಾ ಶ್ರೀ ತ್ರ್ಯಂಬಕಃ" ಎಂದು, ಹೇಳಿದೆ. ದಾವಣಗೆರೆಯ 23ನೆಯ ಶಾಸನದಲ್ಲಿ "ಶ್ರೀ ಸ್ವಯಂಭು ತ್ರಿಯಂಬಕ ಚರಣಾರವಿಂದಾರಾಧಕ ಶ್ರೀ ಕ್ರಿಯಾಶಕ್ತಿ ಗುರುವರ" ಎಂದು ಹೇಳಿದೆ. "ಶಿರದೊಳೆಸೆವ ಲಿಂಗದಿ ಯಜ್ಞಸೂತ್ರದಿಂ" ರಂಜಿಸುವ ಹರಿಹರನೂ, ಆತನ ಹಿಂದಿನ ಪರಂಪರೆಯ ಗುರುಗಳೂ ಸ್ಥಾನಪತಿಗಳಾಗಿದ್ದ ಹಂಪೆಯ ವಿರೂಪಾಕ್ಷ ದೇವಸ್ಥಾನ ಮಠದಲ್ಲಿ ಮತ್ಸ್ಯದ ಮೇಲೆ ಯೋಗದಂಡದೊಡನೆ ಯೋಗಾಸನದಲ್ಲಿ ಕುಳಿತಿರುವ ಯೋಗಿಯ ಚಿತ್ರವು ಕೆತ್ತಲ್ಪಟ್ಟದೆ. ಮತ್ಸ್ಯಾಸನವು ನಾಥಸಿದ್ಧರ ಯೋಗಾಸನಗಳಲ್ಲಿ ಮುಖ್ಯ ವಾದುದೊಂದಾಸನ. ವಿರೂಪಾಕ್ಷನು ಸಂಗಮವಂಶದವರ ಕುಲದೇವತೆ. ಇವರ ಮಂತ್ರಿಗಳಾದ ಸಾಯಣಮಾಧವರ ತಮ್ಮನಾದ ಭೋಗನಾಥನ ಹೆಸರನ್ನು ಈ ಚಿತ್ರದೊಡನೆ ಸಂಬಂಧಿಸಿ, 'Foundation of Vijayanagar' ಗ್ರಂಥವನ್ನು ಬರೆದ ಅಡ್ವೋಕೇಟ್ ಎಸ್. ಶ್ರೀಕಂಠಯ್ಯನವರು 25 Q.J.M.S. ಪುಟ 232ರಲ್ಲಿ ಯೋಗದಂಡ ದೊಡನೆ ಮತ್ಸ್ಯಾರೂಢನಾಗಿ ಕುಳಿತಿರುವ ಯೋಗಿಯ ಚಿತ್ರವು ಮತ್ಸ್ಯೇಂದ್ರ ನಾಥನದಿರಬಹುದೆಂದೂ ಭೋಗನಾಥಾದಿಗಳು ನಾಥಪಂಥದವರಿರಬಹು ದೆಂದೂ ಊಹಿಸಿರುವರು. ಭೋಗನಾಥನ ಗುರುವಾದ ಶ್ರೀಕಂಠನಾಥರೂ ನಾಥ ಎಂಬ ಹೆಸರುಳ್ಳವರೆಂಬುದನ್ನು ಶ್ರೀಕಂಠಯ್ಯನವರು ಗಮನಿಸಿಲ್ಲ. ಭೋಗನಾಥನ ಮಹಾಗಣಪತಿಸ್ತವದಲ್ಲಿ ಭೋಗನಾಥನು ಈ ಗುರುವನ್ನು ಸ್ಮರಿಸಿದ್ದಾನೆ. ಅಳುಳಾಳ್ ಪೆರುಮಾಳ್ ದೇವಸ್ಥಾನದಲ್ಲಿರುವ ಶಾಸನದಲ್ಲಿ ಶ್ರೀಕಂಠನಾಥರು ಸಾಯಣಾಚಾರ್ಯರ ಗುರುವೆಂದು ಸ್ಪಷ್ಟವಾಗಿ ಹೇಳಿದೆ. ಇವರ ಸಹೋದರರಾದ ಮಾಧವಾಚಾರ್ಯರು ಅವರ ಪರಾಶರವ್ಯಾಖ್ಯೆ ಯಲ್ಲಿ 'ಹೃದಿಭಜೇ ಶ್ರೀಕಂಠಮವ್ಯಾಹತಂ' ಎಂದು ಹೇಳಿದ್ದಾರೆ. ಇವರೆಲ್ಲರ ರಾಜನಾದ ಸಂಗಮನು ಅವನ ಗುರುವಾದ ಈ ಶ್ರೀಕಂಠನಾಥರ ಹೆಸರಿನಲ್ಲಿ ದಾನಮಾಡಿ ಬಿಟ್ಟರಗುಂಟೆ ಶಾಸನವನ್ನು ಬರೆಸಿದ್ದಾನೆ ಇದನ್ನು ಭೋಗ ನಾಥನೇ ಬರೆದಿದ್ದಾನೆ. ಅದರಲ್ಲಿ :

ಶ್ರೀಮಾನ್ ಸನ್ನಿಧಿಮಾದಧತ್ ಪಶುಪತಿಃ ಶ್ರೀಕಂಠನಾಥಾತ್ಮನಾ ।
ಮಾಹೇಶ್ವರಾಣಾಂ ತತ್ತ್ವಾನಾಂ ಮಾನ್ಯೇ ಯಸ್ಮಿನ್ ಪ್ರದರ್ಶಕೇ ।
ಪ್ರಾಚಾಮುದರ್ಶಿನಾಥಾನಾಂ ಪ್ರಾಯೇಣ ನವತಾ ಭುವಿ ॥

ಎಂದು ಹೇಳಿದೆ. ಪಶುಪತಿಯೇ ಶ್ರೀಕಂಠನಾಥನ ರೂಪದಲ್ಲಿ ಹುಟ್ಟಿದ ನೆಂಬುದೂ ಪ್ರಾಚೀನ ನಾಥಮಾಹೇಶ್ವರಸಿದ್ಧಾಂತವನ್ನು ನವೀನರೂಪದಲ್ಲಿ ಶ್ರೀಕಂಠನಾಥರು ಉಪದೇಶಮಾಡುವರೆಂಬುದೂ ಈ ಶಾಸನ ಭಾಗದ ಅಭಿಪ್ರಾಯ. ಇದೆಲ್ಲವನ್ನು ಒಟ್ಟಿಗೆಸೇರಿಸಿ ಆಲೋಚಿಸಿದರೆ ಸಂಗಮವಂಶದರಾಜರ ಆಶ್ರಯದ ಸಾಯಣಾನುಜರೂ. ಆಂಗೀರಸಗೋತ್ರದ ಮಾಧವಾಚಾರ್ಯ ಮೊದಲಾದವರೂ ನಾಥಮಾಹೇಶ್ವರ ಸಂಪ್ರದಾಯದ ಲಿಂಗಿಬ್ರಾಹ್ಮಣರೆಂದು ಕಂಡುಬರುವುದು.

ಈ ಆರಾಧ್ಯಬ್ರಾಹ್ಮಣರೂ, ಲಿಂಗಾಯತರೂ ಒಗ್ಗಟ್ಟಾಗಿ ಮಹಮ್ಮದೀಯರಿಂದ ಆಗುತ್ತಿದ್ದ ಹಿಂದೂ ರಾಜ್ಯಾಕ್ರಮಣವನ್ನೂ ಹಿಂದೂ ಧರ್ಮ ಪತನವನ್ನೂ ತಡೆದು ಹಿಂದೂ ಸಾಮ್ರಾಜ್ಯವನ್ನು ಕಟ್ಟಲು ಸಹಾಯಮಾಡಿದರಲ್ಲದೆ ವೇದವಾಙ್ಮಯಕ್ಕೆ ಸಾಯಣಭಾಷ್ಯಾದಿ ಗ್ರಂಥಗಳನ್ನು ಬರೆದು ಹಿಂದೂ ಸಂಸ್ಕೃತಿಯನ್ನು ಉದ್ಧರಿಸಿದರು. "ಉಪನಿಷನ್ಮಾರ್ಗ ಪ್ರತಿಷ್ಠಾ ಗುರು" ಎಂಬ ಹೆಸರು ಇಷ್ಟಲಿಂಗಾಧಿಷ್ಠಿತ ತ್ರ್ಯಂಬಕನನ್ನು ಆರಾಧಿಸುತ್ತಿದ್ದ ಮತ್ತು ಸೂತಸಂಹಿತೆಗೆ ತಾತ್ಪರ್ಯ ದೀಪಿಕೆಯನ್ನು ಬರೆದ ಮಾಧವಾಚಾರ್ಯನಿಗೆ ಅನ್ವರ್ಥವಾದುದೇ ಆಗಿದೆ.

ಪ್ರೌಢದೇವರಾಯನು ಬಸವಾನುಯಾಯಿಯಾದನಷ್ಟೆ. ಶಂಕರಕವಿಯು (ಕ್ರಿ ಶ. 1763) ಹೇಳಿದಂತೆ ಪ್ರೌಢದೇವರಾಯನು "ವೀರಶೈವ ಸುದೀಕ್ಷೆ ಚಾಮರಸನಿಂ ಪಡೆದು....ಗುರುಲಿಂಗ ಜಂಗಮಕೆ ಓರಂತೆ ತನುಮನಧನಗಳನು ನಲಿದಿತ್ತು" ಸಿದ್ಧನಂಜೇಶನ (ಕ್ರಿ.ಶ. 1600) ರಾಘವಾಂಕ ಚರಿತ್ರೆಯಲ್ಲಿ ಹೇಳಿದಂತೆ ಕರಸ್ಥಲದ ನಾಗಿದೇವ ಮೊದಲಾದ ವಿರಕ್ತಕುಲವ ಹರುಷದಿಂ ಭಜಿಸಿ, ಸಮಕಾಲೀನ ಗ್ರಂಥವಾದ ಶಿವತತ್ತ್ವಚಿಂತಾಮಣಿಯಲ್ಲಿ ಹೇಳುವಂತೆ 'ದೇವೇಂದ್ರ ಭೂವರನ ಮಹದೈಶ್ವರ್ಯ ಶರಧಿ ಚಂದ್ರೋದಯ ಲಕ್ಕಣ್ಣ ದಂಡೇಶ'ನಿಂದ ಕೂಡಿ ರಾಜ್ಯವಾಳುತ್ತಿರಲು, ವಿಜಯನಗರವು ಶಿವತತ್ತ್ವಚಿಂತಾಮಣಿಯಲ್ಲಿಯೇ ಹೇಳಿದಂತೆ 'ಪರತರ ಶಿವಾನುಭಾವಿಗಳಪರಿಮಿತಗೃಹಂ ಪರಿಕಿಪರಿಗಿದು ವಿಜಯ ಕಲ್ಯಾಣವಾದುದು' ಎಂಬುದರಲ್ಲಿ ಸಂದೇಹವಿಲ್ಲ. ಪ್ರೌಢದೇವರಾಯನ ಕಾವ್ಯದಲ್ಲಿಯೇ ಹೇಳಿ

ದಂತೆ—"ಹರರೂಪವಾದ ನೂರೊಂದು ಸುವಿರಕ್ತರುರೆ, ಕರಸ್ಥಲದ ನಾಗಿದೇವನನು, ಕಲ್ಲುಮಠದ ಪ್ರಭುವರನು ವೀರಣ್ಣೊಡೆಯರುಂ ಚಾಮರಸಾದಿ ಶಿವಭಕ್ತತತಿಯು ನೆರೆದು" ಇರುವಲ್ಲಿ ವೀರಶೈವಗ್ರಂಥ ರಚನೆಗಾಗಿ ಲಕ್ಕಣ್ಣ ದಂಡೇಶನೂ, ಜಕ್ಕಣಾರ್ಯನೂ "ಲಕ್ಷಸಂಖ್ಯೆಯ ವಿತ್ತಮಂ" ವೆಚ್ಚ ಮಾಡಿದರೆಂದು ಗುಬ್ಬಿ ಮಲ್ಲಣಾರ್ಯರು ಬರೆದಿರುವುದರಲ್ಲಿ ಅತಿಶಯೋಕ್ತಿಯಿರಲಾರದು. ಮೈಸೂರ್ ಗೆಜೆಟಿಯರಿನಲ್ಲಿ ಹೇಳಿರುವಂತೆ ಕನ್ನಡದ ಅತ್ಯಂತ ತೇಜಸ್ವಿಯಾದ ಕಾಲ ಪ್ರೌಢದೇವರಾಯನ ಕಾಲ. ಆಗ ಜಕ್ಕಣಮಾತ್ಯನ ಗುರು ಮಹಲಿಂಗದೇವನ ಏಕೋತ್ತರ ಷಟ್‌ಸ್ಥಳ ಮತ್ತು ಷಟ್‌ಸ್ಥಲ ವಿವೇಕ, ಲಕ್ಕಣ್ಣ ದಂಡೇಶನ ಶಿವತತ್ತ್ವಚಿಂತಾಮಣಿ ಕುಮಾರ ಬಂಕನಾಥನ ಷಟ್‌ಸ್ಥಲೋಪದೇಶ ಮೊದಲಾದ ಗ್ರಂಥಗಳೂ ಚಾಮರಸನ ಪ್ರಭುಲಿಂಗಲೀಲೆ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾ ವಿಲಾಸಚರಿತೆ, ಶ್ರೀ ಗಿರೀಂದ್ರನ ಏಕೋತ್ತರ ಷಟ್‌ಸ್ಥಳದ ಮೇಲಿನ ವ್ಯಾಖ್ಯೆ ಮತ್ತು ಅವನ ತ್ರಿಪದಿ, ಮುಗ್ಗಿಮಾಯಿದೇವನ ಅನುಭವಸೂತ್ರವೇ ಮೊದಲಾದ ಗ್ರಂಥಗಳೂ, ವೀರಶೈವ ಸ್ಥಾಪನಾಚಾರ್ಯ ಗುರುಬಸವನ ಶಿವಯೋಗಾಂಗ ಮೊದಲಾದ ಗ್ರಂಥಗಳೂ, ಚಂದ್ರಕವಿಯ ವಿರೂಪಾಕ್ಷ ಸ್ಥವ ಮೊದಲಾದ ಗ್ರಂಥಗಳೂ ರಚಿತವಾದವು. ಲಿಂಗಲೀಲಾ ವಿಲಾಸ ಮೊದಲಾದ ಗ್ರಂಥಗಳಿಲ್ಲದೆ, ಹೋಗಿದ್ದರೆ ಕಲ್ಯಾಣದ ಅನೇಕ ವಚನಕಾರರ ವಚನಗಳು ಅರ್ಥವಾಗುತ್ತಿರಲಿಲ್ಲ. ಮೊಗ್ಗೆ ಮಾಯಿದೇವರು ವೀರಶೈವ ಸಿದ್ಧಾಂತವನ್ನು ಖಚಿತಗೊಳಿಸಿದ ಮಹನೀಯರು. ಕನ್ನಡದ ಅತ್ಯಂತ ತೇಜಸ್ವಿ ಕಾಲವದು ಎನ್ನುವಂತೆಯೇ ಅದು ವೀರಶೈವದ ಅತ್ಯಂತ ತೇಜಸ್ಸಿನ ಕಾಲ ಎನ್ನಬಹುದು. ಮೇಲೆ ಹೇಳಿದ ವೀರಶೈವ ದಿಗ್ದಂತಿಗಳ ಪ್ರಭಾವದಿಂದ ಹೂಲಿ, ಮೊದಲಾದ ಅನೇಕ ಮಾಹೇಶ್ವರ ಮಠಗಳ ಗುರುಗಳು ಯಜ್ಞೋಪವೀತವನ್ನು ತ್ಯಜಿಸಿ ಬಸವಾನುಯಾಯಿಗಳಾದರು. ಹೆಸರಿಗೆ ಒಂದಾದರೂ ಮಾಹೇಶ್ವರಮಠವು ಸಂಸ್ಕರಿಸಲ್ಪಟ್ಟ ವೀರಶೈವಧರ್ಮಕ್ಕೆ ಶರಣಾಗದೆ ಉಳಿದಿಲ್ಲ. ಒಂದೆರಡು ಮಠಗಳ ಗುರುಗಳು ಮಾತ್ರ ಶೂದ್ರರೆನಿಸಿಕೊಂಡಿದ್ದವರೂ ಲಿಂಗವನ್ನು ಧರಿಸಿ ವೇದಾಭ್ಯಾಸಮಾಡಲು ಪ್ರಾರಂಭಿಸಿದಮೇಲೆ, ಶೂದ್ರರು ಧರಿಸದ ಯಜ್ಞೋಪವೀತವನ್ನು ಉಳಿಸಿಕೊಂಡು, ಲಿಂಗವನ್ನು ತಲೆಯಲ್ಲಿ

ಧರಿಸುವುದನ್ನು ಬಿಟ್ಟರು. ಹದಿನೈದನೆಯ ಶತಮಾನವು ವೀರಶೈವದ ತೇಜಃಪುಂಜ ಕಾಲ

ಪಶುಪತಿ ಧರ್ಮವು ಮೊದಲು ಆರ್ಯರಿಂದ ವಿರೋಧಿಸಲ್ಪಟ್ಟಿದ್ದರೂ ಮುಂದೆ ಅವರಿಂದಲೇ ಪುರಸ್ಕರಿಸಲ್ಪಟ್ಟು ವೈದಿಕಧರ್ಮವಾಯಿತು. ಐಹಿಕ ಭೋಗಕ್ಕಾಗಿ ಇಂದ್ರನನ್ನು ಪ್ರಾರ್ಥಿಸುತ್ತಿದ್ದ ಆರ್ಯಧರ್ಮದಂತೆ ಪಾಶುಪತ ಮತವು ಆಗ ದ್ವೈತಸಿದ್ಧಾಂತವಾಗಿತ್ತು. ಅದು ಮಹಾಭಾರತದ ಕಾಲದಲ್ಲಿ ಶ್ರೀಕೃಷ್ಣನೇ ಪಾಶುಪತದೀಕ್ಷೆಯನ್ನು ಪಡೆಯುವಷ್ಟು ಜನಪ್ರಿಯವಾಗಿದ್ದಿತು. ಆ ಮೊದಲು ಶ್ವೇತಾಶ್ವತರ ಕಾಲದ ಹೊತ್ತಿಗೆ 'ಓರ್ವನೆದಲ್ ರುದ್ರಂ। ಪೆರತೊರ್ವಂ ಪಟಿ' ಎನ್ನುವಂತಾಗಿದ್ದಿತು. ಶ್ವೇತಾಶ್ವತರವು ಹಳೆಯ ಉಪನಿಷತ್ತುಗಳಲ್ಲಿ ಕೊನೆಯದು. ಈ ಉಪನಿಷತ್ತನ್ನು ಹಿನ್ನೆಲೆಯಾಗುಳ್ಳ ವಾಯುವೀಯ ಸಂಹಿತೆಯನ್ನೊಳಗೊಂಡ ಶಿವಪುರಾಣವನ್ನೇ ಆಧಾರವನ್ನಾಗಿಟ್ಟುಕೊಂಡು ಮಹಾ ಪಾಶುಪತಾನುಯಾಯಿಗಳಾದ ಶ್ರೀಕಂಠ ಶಿವಾಚಾರ್ಯರು ಶೈವವಿಶಿಷ್ಟಾದ್ವೈತಸಿದ್ಧಾಂತವನ್ನು ಸ್ಥಾಪಿಸಿ ಈ ಧರ್ಮವು ವೇದಾಗಮಾನುಸಾರವಾಗಿದೆಯೆಂದು ಸಾರಿದರು. ಅಪ್ಪಯ್ಯದೀಕ್ಷಿತರ ಅಭಿಪ್ರಾಯದಂತೆ ಅದ್ವೈತದ ಕಡೆಯೇ ಶ್ರೀಕಂಠಶಿವಾಚಾರ್ಯರ ಒಲುಮೆ. ಅವರು, ಚಿದಚಿತ್ತುಗಳಿಗೂ ಶಿವನಿಗೂ ಶರೀರ-ಶರೀರಿ ಭಾವವನ್ನು ಹೇಳುವರಾದರೂ ಚಿದಚಿತ್ ಶಕ್ತಿಯು ಶಿವಾಭಿನ್ನವೆನ್ನುವರು. ವಿಶಿಷ್ಟಾದ್ವೈತಪದವೇ ಶ್ರೀಕರಭಾಷ್ಯಕಾರರು ಹೇಳುವಂತೆ ಉಕ್ತಿ ವಿರೋಧವಾದುದು. ಶ್ರೀ ಬಸವೇಶ್ವರರು ಲಿಂಗಿಬ್ರಾಹ್ಮಣ ಸಮಾಜವನ್ನು ಸಂಸ್ಕರಿಸಿದಾಗ ಲಿಂಗವರ್ಣಾಶ್ರಮ ತಾರತಮ್ಯವನ್ನು ತೊಡೆದುಹಾಕಿ ಎಲ್ಲರೂ ಸದಾ ಲಿಂಗವನ್ನು ಧರಿಸಬಹುದೆಂದು ಸಾರಿದರಲ್ಲದೆ ಶಿವಾದ್ವೈತವನ್ನು ಸಂಸ್ಕರಿಸಲ್ಪಟ್ಟ ಮತದ ಧರ್ಮವನ್ನಾಗಿ ಆರಿಸಿಕೊಂಡರು. ಶ್ರೀನಿವಾಸಮೂರ್ತಿಗಳ ವಚನ ಧರ್ಮಸಾರದಲ್ಲಿ ಹೇಳಿದಂತೆ "ಬಸವಣ್ಣ ಇಷ್ಟಲಿಂಗವಾಗಿ, ಚೆನ್ನಬಸವಣ್ಣ ಪ್ರಾಣಲಿಂಗವಾಗಿ, ಅಲ್ಲಮಪ್ರಭು ಭಾವಲಿಂಗವಾಗಿ ಜ್ಯೋತಿರ್ಮಯವಾದ ಮಹಾಲಿಂಗದ ಮೂರು ಮುಖಗಳಂತೆ ವಚನ ಧರ್ಮದ ಮೂರು ಮುಖಗಳಾಗಿ ಕಾಂತಿಯನ್ನು ಬೀರಿದರು. ಅನುಭವಮಂಟಪದಲ್ಲಿ 'ಆತ್ಮ ಆತ್ಮ ಮಥಿಸಿಸಿ' ಅನುಭಾವ ಹುಟ್ಟಿತು. ವಚನಧರ್ಮ ಪ್ರಕಾಶಿಸಿತು." ಅವರೇ

ಹೇಳಿದಂತೆ "ವಚನಸಾಹಿತ್ಯವೇ ತಪೋವನದ ಉಪನಿಷತ್‌ಸಾಹಿತ್ಯ ವಚನಕಾರರೇ ಉಪನಿಷತ್ ಕಾಲದ ಮಹರ್ಷಿಗಳು"

ವೇದೋಪನಿಷತ್ತುಗಳಿಂದ ವಚನವಾಙ್ಮಯದವರೆಗಿನ ಪ್ರಗತಿಯನ್ನು ಚಿತ್ರಿಸುವ ವಚನೋಪನಿಷತ್ ಗ್ರಂಥದಲ್ಲಿ ಕೇಂದ್ರಸ್ಥಾನವು 'ನಾಸದೀಯ ಸೂಕ್ತ' ವಿಷಯಕ್ಕಿದೆ. ಇಂದ್ರಾದಿಗಳಿಂದ ಸೃಷ್ಟಿಯಾಯಿತೆಂದಮೇಲೆ, ಸೃಷ್ಟಿಕರ್ತನು ಎಲ್ಲಿ ನಿಂತು ಏತರಿಂದ ಸೃಷ್ಟಿಗೈದನು ಎಂಬ ಪ್ರಶ್ನೆಗಳು ಉದಯವಾಗದೇ ಹೋಗಲಿಲ್ಲ. ಈ ದ್ವೈತಭಾವನೆಯು ಸರಿಹೋಗದೆ ಪರಮಪುರುಷನು ತನ್ನೊಳಗಿನಿಂದಲೇ ಜಗತ್ತನ್ನು ಹೊರಹೊಮ್ಮಿಸಿ ಪೋಷಿಸುವನೆಂಬ ವಿಶಿಷ್ಟಾದ್ವೈತ ಕಲ್ಪನೆಯನ್ನು ಪುರುಷಸೂಕ್ತದಲ್ಲಿ ಕಾಣಬಹುದು. ಸೃಷ್ಟಿಯಾಯಿತೆನ್ನುವುದಕ್ಕಿಂತ ಸದಸತ್ತುಗಳಿಗೆ ಮೀರಿದ, ಇಲ್ಲದಂತೆ ಇದ್ದುದರಿಂದ ಜಗತ್ತು ಆವಿರ್ಭಾವವಾಯಿತೆಂಬ ಕಲ್ಪನೆಯು ನಾಸದೀಯಸೂಕ್ತದಲ್ಲಿದೆ. ಇದಕ್ಕಿಂತ ಭವ್ಯವಾದ ಕಲ್ಪನೆಯು ಹಿಂದಾಗಲೀ, ಇಂದಾಗಲೀ ಆಗಿಲ್ಲ. ಋಗ್ವೇದದ ಕಾಲದಿಂದ ಕ್ರಮವಾಗಿ, ಸೃಷ್ಟಿಕಲ್ಪನೆಯ ಶಿಖರವು ನಾಸದೀಯ ಸೂಕ್ತದಲ್ಲಿ ಹೇಗೆ ಮುಟ್ಟಿತೆಂಬುದನ್ನು ಈ ಗ್ರಂಥದಲ್ಲಿ ನೋಡಿಸಲಾಗಿದೆ. ಮುಂದೆ ಉಪನಿಷತ್ತುಗಳಿಗೂ, ವಚನವಾಙ್ಮಯಕ್ಕೂ ನಾಸದೀಯಸೂಕ್ತವೇ ಹಿನ್ನೆಲೆಯಾಗಿದೆಯೆಂಬುದನ್ನೂ ತೋರಿಸಲಾಗಿದೆ. ನಾಸದೀಯಸೂಕ್ತದ ಬೆಳಗಿನಲ್ಲಿ ವಚನವಾಙ್ಮಯದಲ್ಲಿನ ವಿಚಾರಧಾರೆಯ ಔನ್ನತ್ಯವು ಗೋಚರಿಸುವುದು ವಚನವಾಙ್ಮಯದ ಬೆಳಗು ನಾಸದೀಯಸೂಕ್ತದಲ್ಲಿ ಅಸ್ಪಷ್ಟವಾಗಿರುವುದನ್ನು ಸ್ಪಷ್ಟ ಮಾಡುವುದು. ವಿಚಾರದ ಪ್ರಗತಿಯ ಔನ್ನತ್ಯವನ್ನು ತಲುಪಿರುವ ನಾಸದೀಯಸೂಕ್ತವನ್ನೇ ಅಭ್ಯಾಸಮಾಡುವವರ ಸಲುವಾಗಿ ಅದನ್ನೇ ಬೇರೆಯಾಗಿಯೂ ಪ್ರಕಟಿಸಿದೆ. ಅದರ ವಿಷಯದಲ್ಲಿ ವಿದ್ವಾಂಸರ ಅಭಿಪ್ರಾಯವನ್ನು ಈ ಗ್ರಂಥದಲ್ಲಿಯೂ ಮುದ್ರಿಸಿದೆ. ಪಾಶುಪತ ಧರ್ಮವು ಋಗ್ವೇದ ಕಾಲಕ್ಕೆ ಮೊದಲೇ ರೂಪುಗೊಂಡು. ಶ್ರೀಕಂಠಶಿವಾಚಾರ್ಯರ ಕಾಲದಲ್ಲಿ ಪ್ರಗತಿ ಹೊಂದಿ ಪ್ರೌಢದೇವರಾಯನ ಕಾಲದಲ್ಲಿ ಮುಕ್ತಿಯನ್ನು ಪಡೆದುದರ ಮೇಲೆ ಈ ಗ್ರಂಥದಲ್ಲಿ ಹೊಸ ಬೆಳಕನ್ನು ಚೆಲ್ಲಿದೆ.

---

ಓರಿಯಂಟಲ್ ಪವರ್ ಪ್ರೆಸ್, 54, ಲಾಲ್‌ಬಾಗ್ ರೋಡ್, ಬೆಂಗಳೂರು-27